


At
Harihar
when the birds
nest in the factory,
the fishes breed
in the effluent streams
and the lush greenery
looks inviting,
it is not by
accident

***It's the result of our commitment***
***to a clean environment.***

## GRASIM INDUSTRIES LIMITED

**Units : Harihar Polyfibers**
**: Grasilene Division**

**We practise pollution - prevention &**
**pollution - control together.**







**Works : Kumarapatnam - 581 123, Near Harihar, Karnataka**
**Tel : (08373) 842171 to 842175, Fax : (08373) 842875**



# ಹೊಸತು

## ಒಳಗೇನಿದೆ.....




ಚಿತ್ರಗಳು : ಶ್ರೀಹರಿ, ಸತೀಶ್‌ಕುಮಾರ್, ಜಿ. ಎಂ. ಬೊಮ್ನಳ್ಳಿ, ರಾಂಚಂದ್ರ

ಮುಖಪುಟ : ಅಸ್ಸಾಮಿನ ಜಾನಪದ ನರ್ತನ
(ವರ್ಣಪಾರದರ್ಶಿಕೆ : ಕೆ. ಪಿ. ಸ್ವಾಮಿ)

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ರೈತರ ಆತ್ಮಹತ್ಯೆಗಳು ಇನ್ನೂ ಮುಂದುವರಿಯುತ್ತಿರುವಾಗಲೇ ನಮ್ಮ ರಾಜ್ಯದ ಕಾಂಗ್ರೆಸ್ ಮತ್ತು ಭಾರತೀಯ ಜನತಾ ಪಕ್ಷ ಜನರನ್ನು ಪ್ರಜ್ಞಾವಂತರನ್ನಾಗಿಸುವುದಾಗಿ ಹೇಳಿಕೊಂಡು ಜನಸ್ಪಂದನ ಮತ್ತು ಜನಸಂಘರ್ಷ ಎಂಬ ಎರಡು ಕೀಳುಮಟ್ಟದ ಚಳುವಳಿಗಳನ್ನು ಹಮ್ಮಿಕೊಂಡವು. ಜನರ ದಿನನಿತ್ಯದ ಅವಶ್ಯಕತೆಗಳ ಪೂರೈಕೆಗಾಗಿ ಕ್ರಿಯಾತ್ಮಕ ಹೋರಾಟಗಳಿಗೆ ಪರ್ಯಾಯವೆಂಬಂತೆ ಈ ಪ್ರಹಸನಗಳನ್ನು ನಡೆಸಿಕೊಟ್ಟ ಎರಡೂ ಪಕ್ಷಗಳ ಧುರೀಣರ ಜನಪ್ರೀತಿ ಉಕ್ಕಿಹರಿದಾಗ ಜನರು ಮುಸಿಮುಸಿ ನಕ್ಕು ಇದರಿಂದ ಚುನಾವಣೆಗಳನ್ನು ಗೆಲ್ಲಬಹುದೆಂಬ ಮೂರ್ಖತನಕ್ಕೆ ಮೌನವಾಗಿ ಛೀಮಾರಿ ಹಾಕಿದರು. ಜನಸಂಘರ್ಷವೆಂದರೆ ವೆಂಕಯ್ಯ ನಾಯ್ಡು ಪಕ್ಷಕ್ಕೆ ಜನರೊಡನೆ ಸಂಘರ್ಷವೆಂಬುದು ಪ್ರತೀತಿಯಲ್ಲ; ಅದು ವಾಸ್ತವ. ಅದಕ್ಕೆ ಪುರಾವೆ ಬೇಕಾದರೆ ಅಯೋಧ್ಯೆಯ ಜನ ಕೊಡುತ್ತಾರೆ. ಹದಿನೈದು ವರ್ಷಗಳಿಂದ ಅದ್ವಾನಿ ಪಿಡುಗನ್ನು ಸಹಿಸಿ ಅವರಿಂದು ರೋಸಿಹೋಗಿದ್ದಾರೆ. ನಮ್ಮ ರಾಜ್ಯದ ನಾಯ್ಡು ಹಿಂಬಾಲಕರಿಗೆ ಕೇಂದ್ರದ ಅವರ ಸರ್ಕಾರದ ಜನವಿರೋಧಿ ನೀತಿಗಳು ಕಾಣಿಸುವುದಿಲ್ಲ. ಅಲ್ಲಿ ರಾಮನ ಭಂಟರೆಂದು ಕರೆದುಕೊಳ್ಳುವವರ ಠಕ್ಕು ಇಲ್ಲಿ ಕೃಷ್ಣನ ಅನುಯಾಯಿಗಳ ಮೇಲೆ ಗೂಬೆ ಕೂರಿಸಲು ಉಪಯೋಗಕ್ಕೆ ಬರುತ್ತಿದೆ. ಅನಂತಕುಮಾರರ ಪ್ರಲಾಪ ಮುಗಿಲು ಮುಟ್ಟುತ್ತಿದೆ. ಲಾಟರಿ ನಿಷೇಧಕ್ಕೆ ನಾವೇ ಹೋರಾಟ ನಡೆಸಿದ್ದೆಂಬ ಅಪ್ಪಟ ಸುಳ್ಳು ಹೇಳಲು ಅವರಿಗೆ ಸಂಕೋಚವಿಲ್ಲ. ಮಹಿಳಾ ವಿಶ್ವವಿದ್ಯಾನಿಲಯಕ್ಕೆ ಅಕ್ಕನ ಹೆಸರಿಡಬೇಕೆಂಬ ಪ್ರತಿಭೆಯೂ ಆತನದೇ ಎಂಬ ಹುಚ್ಚು ಮಾತನ್ನು ಆಡಲು ಅಂಜುವೆದೆ ಅವರದಲ್ಲ. ಸತ್ಯವಾಕ್ಯ ಪರಿಪಾಲನೆಗೆ ಹೆಸರಾದವನೆನ್ನಲಾದ ಶ್ರೀರಾಮಚಂದ್ರನ ಭಕ್ತರ ಪಡೆಗೆ ಸುಳ್ಳಿನ ಸರಮಾಲೆ ಸಹಜವಾಗಿ ಬರುವುದು ಒಂದು ಸೋಜಿಗ. ಇಂತಹ ಭಕ್ತರನ್ನು ಕಂಡು ರಾಮ ಭಯಭೀತನಾಗಿ ಪರದಾಡುತ್ತಾನೆ, ಅಯೋಧ್ಯೆಯಿಂದ ಕಂಬಿ ಕೀಳುತ್ತಾನೆ.

ಜನಸಂಘರ್ಷದ ಉದ್ದೇಶ ಕೇಂದ್ರದ ಸಾಧನೆಗಳನ್ನು ಜನರಿಗೆ ಪರಿಚಯ ಮಾಡಿಕೊಡುವುದು. ಆಕಾಶವಾಣಿ ಮತ್ತು ದೂರದರ್ಶನವನ್ನು ಪ್ರಚಾರದಿಂದ ಮಲಿನಗೊಳಿಸಿ ಈಗ ನೇರ ಮುಖಾಮುಖಿ! ಹೇಳಿಕೊಳ್ಳಬಹುದಾದ ವಾಜಪೇಯಿ ಸಾಧನೆಗಳೂ ಇವೆಯೆ ಎಂಬ ಕುತೂಹಲ ನಮ್ಮ ಜನಕ್ಕೆ. ಜನರಿಗೆ ತಿಳಿದಿರುವ ''ಸಾಧನೆಗಳು'' ಮುಖ್ಯವಾಗಿ ಎರಡು : (ಅ) ರಾಷ್ಟ್ರೀಯತೆಯ ಮಂತ್ರ ಹೇಳುವಾಗ ಉಗುಳು ಜಾಸ್ತಿಯಾಗಿ ನಮ್ಮ ದೇಶವನ್ನು ಅಮೆರಿಕಾದ ಪದತಲದಲ್ಲಿ ಸಮರ್ಪಣೆ ಮಾಡಿದ್ದು ಮತ್ತು (ಆ) ರೋಗಿಗಳ ವ್ಯಕ್ತಿಗತ ಕ್ಯಾನ್ಸರಿಗೆ ಔಷಧಿ ಕೊಡಬೇಕಾಗಿದ್ದ ತೋಗಡಿಯಾ ಎಂಬ ಬಾಯಿಹರುಕ ಸಂತನನ್ನು ಇಡೀ ದೇಶಕ್ಕೆ ಕ್ಯಾನ್ಸರ್ ಆಗಲು ಅವಕಾಶ ಮಾಡಿಕೊಟ್ಟಿದ್ದು. ಭಯೋತ್ಪಾದಕತೆಯನ್ನು ಎಲ್ಲೆಲ್ಲೂ ಎದುರಿಸಲು ಸಿದ್ಧವೆಂದು ಹೇಳುವ ನಮ್ಮ ಕೇಂದ್ರ ಗೃಹ ಮಂತ್ರಿಗಳಿಗೆ ತೋಗಡಿಯಾ ಭಾಷಾ ಮತ್ತು ಭಾವನಾ ವೈಖರಿಯ ಅರಿವಿಲ್ಲ. ''ಕಿವುಡನ ಮಾಡಯ್ಯಾ'' ಎಂಬ ಅವರ ಕೋರಿಕೆಯನ್ನು ಶ್ರೀರಾಮಚಂದ್ರ ಮನ್ನಿಸಿಬಿಟ್ಟಿದ್ದಾನೆ.

ಇನ್ನು ಜನರೊಡನೆ ಸ್ಪಂದಿಸಲು ಹೊರಟ ರಾಜ್ಯದ ಮುಖ್ಯಮಂತ್ರಿಗಳು ಮಧ್ಯೆ ಬಿಡುವು ಪಡೆದು ಸುಧಾರಿಸಿಕೊಳ್ಳಬೇಕಾದಷ್ಟು ದಣಿದರು; ಶಕ್ತಿಯ ಗುಳಿಗೆ ಪಡೆಯಲು ರಾಜೀವನನ್ನು ಸ್ಮರಿಸಿ ಬಂದರು. ಶಾಲೆಯಿಂದ ಮಧ್ಯದಲ್ಲೇ ನಿರ್ಗಮಿಸುತ್ತಿದ್ದ ಮಕ್ಕಳಿಗೆ ಊಟ ಕೊಡಿಸುವ ಏರ್ಪಾಟನ್ನು ಬಿಟ್ಟು ಇವರ ಸರ್ಕಾರದ ಮಹತ್ಸಾಧನೆಗಳೇನೆಂಬುದು ಸ್ಪಂದನದ ಭಾಗವಾಗಿ ಜನರಿಗೆ ತಿಳಿದು ಬರಲಿಲ್ಲ. ಶಿಕ್ಷಣ, ಆರೋಗ್ಯ, ಸಾರಿಗೆ, ಕೃಷಿ, ಎಲ್ಲಾ ಅಸ್ತವ್ಯಸ್ತ ಮತ್ತು ಅನಿಯಮಿತ. ಕೊಳ್ಳೆಬಾಕರಿಗೆ ಮಾತ್ರ ಈ ಕ್ಷೇತ್ರಗಳಲ್ಲಿ ರಸದೌತಣ. ಕೇಂದ್ರ ಸರ್ಕಾರದ ಯಾವ ಜನವಿರೋಧಿ ನೀತಿಗಳನ್ನು ನಮ್ಮ ರಾಜ್ಯದ ನಾಯಕರು ಕಳೆದ ನಾಲ್ಕು ವರ್ಷಗಳಲ್ಲಿ ವಿರೋಧಿಸಿದ್ದಾರೆಂಬುದರ ಬಗ್ಗೆ ಸಂಶೋಧನೆ ನಡೆಸಬೇಕಾಗಿದೆ. ಅನಗತ್ಯವಾದ ಬೆಂಗಳೂರು-ಮೈಸೂರು ಹೆದ್ದಾರಿಯ ನಿರ್ಮಾಣಕ್ಕಾಗಿ ರೈತರ ಫಲವತ್ತಾದ ಭೂಮಿ ಕಿತ್ತುಕೊಂಡು ಅವರಿಗೆ ಕೈಲಾಸದ ದಾರಿ ತೋರಿಸುವುದು, ಬೆಂಗಳೂರಿನ ಸುತ್ತಮುತ್ತ ಭೂಮಿ ವಶಪಡಿಸಿಕೊಂಡು ನಿವೇಶನಗಳನ್ನು ಮಾಡಿ ರೈತರಿಗೆ ನಿರ್ಗತಿಕರ ಪಟ್ಟ ಕಟ್ಟುವುದು, ಇವನ್ನು ಸಾಧನೆಗಳೆನ್ನುವುದಾದರೆ ಅವು ರಾಜ್ಯದ ಕಿರೀಟವನ್ನು ಹೊಕ್ಕಿವೆ. ನೀರಾವರಿ, ವಿದ್ಯುತ್, ಭ್ರಷ್ಟಾಚಾರ, ಇವುಗಳಲ್ಲಿ ಯಾವ ಸಾಧನೆಗಳನ್ನು ತಿಳಿಸಿ ಜನರೊಡನೆ ಸ್ಪಂದಿಸಬಹುದೋ ತಿಳಿಯದು. ಯಾವುದೂ ಬೇಡ, ನಮ್ಮ ರಾಜ್ಯದಲ್ಲಿ ಮತೀಯ ದ್ವೇಷವನ್ನು ವ್ಯಾಪಕವಾಗಿ ಹರಡಿ ಅದರಿಂದ ರಾಜಕೀಯ ಮಾಡಹೊರಟಿರುವ ವಿಷಕುಲವನ್ನು ಸೈದ್ಧಾಂತಿಕವಾಗಿ ವಿರೋಧಿಸುವ ಜವಾಬ್ದಾರಿಯನ್ನಾದರೂ ನಿಭಾಯಿಸಿದಿರಾ ಎಂದರೆ ಕೃಷ್ಣ ಸರ್ಕಾರ ಹೇಗೆ ಸ್ಪಂದಿಸಲು ಸಾಧ್ಯ ?

ಇನ್ನು ಬಾಕಿ ಇರುವುದು ನಾಗೇಗೌಡರ ಹಾಗೂ ದೇವೇಗೌಡರ ಜನತಾದಳಗಳ ಉತ್ಸವಗಳು. ಅವರಿಬ್ಬರೂ ಜೊತೆಯಾಗಿ ಬಾಗೂರು - ನವಿಲೆ ಪ್ರದೇಶದಿಂದ ಸ್ಪಂದಿಸಲಾರಂಭಿಸಬಹುದು. ಅಲ್ಲಿಯ ಜನರ ಬಗ್ಗೆ ಇವರಿಬ್ಬರ ಪ್ರೀತಿ ಪ್ರಕರ್ಷವಾಗಿ ಪ್ರಕಟವಾಗಿದ್ದಿತಲ್ಲವೆ !




ಸಂಪುಟ-೫ ಸಂಚಿಕೆ - ೪ ನವೆಂಬರ್ ೨೦೦೩

**ಪ್ರಧಾನ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ ಮಂಡಲಿ**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

**ವ್ಯವಸ್ಥಾಪಕರು**

ಎಸ್. ಸುರೇಂದ್ರ
ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೯೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in
website : www.navakarnatakabooks.com


# ಅಮೆರಿಕಾ ದಾಸ್ಯದಲ್ಲಿ ಭದ್ರತಾ ಮಂಡಲಿ

**ಸಂಪಾದಕೀಯ**

ಇರಾಕಿನ ಮೇಲೆ ಅಮೆರಿಕಾ ಅಮಾನವೀಯ ಹಲ್ಲೆ ನಡೆಸಿದಂದಿನಿಂದ ವೃತ್ತಪತ್ರಿಕೆಗಳಲ್ಲಿ ಮೊದಲು ಗಮನಿಸಬೇಕಾದ ಸಮಾಚಾರ ಅಲ್ಲಿಯ ಜನ ಹೇಗೆ ಪ್ರತಿರೋಧ ಒಡ್ಡುತ್ತಿದ್ದಾರೆ, ಹೇಗೆ ಸಿಡಿದೆದ್ದಿದ್ದಾರೆ, ಎಂಬುದೇ ಆಗಿದೆ. ಎಂದಾದರೂ ಅಮೆರಿಕಾದ ಇಬ್ಬರೋ ಮೂವರೋ ಸೈನಿಕರು ಹತರಾಗಲಿಲ್ಲವೆಂದರೆ ಹೋರಾಟಕ್ಕೆ ಹಿನ್ನಡೆಯುಂಟಾಯಿತೇನೋ ಎಂಬ ತವಕ ಹಲವರಲ್ಲಿರುತ್ತದೆ. ಇರಾಕಿನ ಜನ ತೀವ್ರವಾಗಿ ಪ್ರತಿಭಟಿಸಿದಾಗಲೆಲ್ಲಾ ವಾಷಿಂಗ್‌ಟನ್ನಿನ ಪ್ರಭುಗಳು ಹಾಗೂ ಇರಾಕಿನಲ್ಲಿರುವ ಅವರ ಅನಿಷ್ಟದ ಪ್ರತಿನಿಧಿ ಅವನ್ನು 'ಭಯೋತ್ಪಾದಕತೆ' ಎಂದು ಬಣ್ಣಿಸಿ ವಿಷ ಕಾರುತ್ತಾರೆ. ತಾನು ನಡೆಸಿರುವ ಭಯೋತ್ಪಾದಕ ಕುಕೃತ್ಯದ ಮುಂದೆ ಇರಾಕಿನ ಜನರ ದಾಂಧಲೆ ಅಣುಮಾತ್ರದ್ದೆಂಬ ಸತ್ಯವನ್ನು ಅಮೆರಿಕಾ ಒಪ್ಪಿಕೊಳ್ಳುವುದಿಲ್ಲ. ವಿಶ್ವದ ಕೆಲವು ಮಾಧ್ಯಮಗಳು ಅಮೆರಿಕಾದ ಕಿಂಕರರಂತೆ ವರ್ತಿಸುವುದೇ ಹೆಚ್ಚಾದ್ದರಿಂದ ''ಇರಾಕಿನ ಜನರ ಕೈಲಿ ಹತರಾಗಲು ನೀವೇಕೆ ಅಲ್ಲಿದ್ದೀರಿ, ಮೊದಲು ಆ ದೇಶ ಬಿಟ್ಟು ತೊಲಗಿ'', ಎಂದು ಅಮೆರಿಕಾಕ್ಕೆ ಹೇಳುವುದಿಲ್ಲ. ಬದಲಾಗಿ, ಅಮೆರಿಕಾಕ್ಕೆ ''ಕಷ್ಟಕಾಲದಲ್ಲಿ'' ನಷ್ಟ ಭರಿಸಿಕೊಡಲು ತಮ್ಮ ಜವಾಬ್ದಾರಿಯನ್ನು ಹೇಗೆ ನಿರ್ವಹಿಸಬಹುದೆಂದು ಅನೇಕ ರಾಷ್ಟ್ರಗಳ ನಾಯಕರು ಪದೇಪದೇ ಒರಲುತ್ತಿರುತ್ತಾರೆ. ಆ ಪೈಕಿ ಭಾರತದ ಇಂದಿನ ಕೇಂದ್ರ ಸರ್ಕಾರವೂ ಇರುವುದು ನಾಚಿಕೆಗೇಡಿನ ಪ್ರಸಂಗ.

ಇರಾಕಿನ ಇಂದಿನ ಸನ್ನಿವೇಶವನ್ನು ನೋಡಿದಾಗೆಲ್ಲಾ ನಮ್ಮ ದೇಶವು ಕಳೆದ ಶತಮಾನದ ಮೊದಲ ನಲವತ್ತೈದು ವರ್ಷಗಳಲ್ಲಿ ಏನೆಲ್ಲಾ ಅನುಭವಿಸಿತೆಂಬುದು ಮನಸ್ಸಿಗೆ ಬರುತ್ತದೆ. ಹಿಂಸಾಮಾರ್ಗದಿಂದ ಬ್ರಿಟಿಷರನ್ನು ಒದ್ದೋಡಿಸುವುದು ಬೇಡವೆಂಬ ಸೂತ್ರಕ್ಕೆ ಎಲ್ಲಿಲ್ಲದ ಮಾನ್ಯತೆ ದೊರೆತದ್ದಾದರೂ ಹೇಗೆ ಎಂಬ ಕೌತುಕ ನಮ್ಮನ್ನು ಕಾಡುತ್ತದೆ. ತನ್ನ ಬೂಟಿನಡಿ ನಮ್ಮ ದೇಶದ ಜನರನ್ನು ತುಳಿಯುತ್ತಿದ್ದ ದೈತ್ಯನಿಗೆ ಹೇಗೆ ಒದೆಯಬೇಕೆಂದು ಜನ ವಿವಿಧ ರೀತಿಗಳಲ್ಲಿ ತೀರ್ಮಾನಿಸಿ ಕಾರ್ಯಪ್ರವೃತ್ತರಾದರು. ಅವರಲ್ಲಿ ಯಾರೂ ದೇಶಕ್ಕೆ ಅಪಚಾರ ಬಗೆದವರಲ್ಲ; ಎಲ್ಲಾ ಗೌರವಕ್ಕೆ ಪಾತ್ರರೇ. ಕ್ರಾಂತಿಕಾರಿ ಹಾದಿಯನ್ನು ತುಳಿದ ಭಗತ್ ಸಿಂಗ್ ಮುಂತಾದವರನ್ನು ಭಯೋತ್ಪಾದಕರೆಂದು ಯಾರಾದರೂ ಚರಿತ್ರಕಾರರು ಕರೆದರೆ ಅವರನ್ನು ಆಧುನಿಕ ಬೌದ್ಧಿಕ ಭಯೋತ್ಪಾದಕರು ಎನ್ನಬೇಕಾಗುತ್ತದೆ. ಇಂದಿನ ಇರಾಕಿಗೆ ಇದೇ ಮಾತನ್ನು ಅನ್ವಯಿಸುವುದು ಖಂಡಿತ ಸೂಕ್ತವೆನಿಸುತ್ತದೆ.

ಲೂಟಿಕೋರ ಅಮೆರಿಕಾ ಹೇಳುವುದು ನೋಡಿದರೆ ಎಂತಹ ಅನುಕಂಪದ ಸಾಕಾರಮೂರ್ತಿ ಎಂದು ಇಡೀ ವಿಶ್ವ ಆ ದೇಶವನ್ನು ಶ್ಲಾಘಿಸಬೇಕೆಂಬ ನಿರೀಕ್ಷೆ ಇದ್ದಂತೆ ತೋರುತ್ತದೆ. ಹದಿನೈದು ವರ್ಷಗಳ ಕಾಲ ಪ್ರಬಲ ಪೆಟ್ಟುಗಳನ್ನು ತಿಂದಿರುವ ಇರಾಕಿಗೆ ಸಾಂತ್ವನ ಹೇಳಿ ಪುನರ್ನಿರ್ಮಾಣವೆಂಬ ಘನಕಾರ್ಯ ಮಾಡಲು ಬಂದಿರುವ ಧರ್ಮಪ್ರವರ್ತಕನೆಂದು ಅಮೆರಿಕಾವನ್ನು ನಾವೆಲ್ಲಾ ಸಂತೈಸಬೇಕೆಂಬ ಹಾಸ್ಯಾಸ್ಪದ ಹೇಳಿಕೆಗಳು ದೆಹಲಿಯ ದರ್ಬಾರಿನಲ್ಲಿ ಕೇಳಿಬರುವುದು ನಮ್ಮ ಮಾನಸಿಕ ಅಧಃಪತನವನ್ನು ಸಾರುತ್ತದೆ. ಆದರೆ ವಾಜಪೇಯಿ - ಯಶವಂತ ಸಿನ್ಹಾ ಹಾಗೆ ಭಾವಿಸುವುದಿಲ್ಲ. ಅವರ ಪ್ರಕಾರ ಅಕ್ಟೋಬರ್ ೧೬ರಂದು ವಿಶ್ವಸಂಸ್ಥೆಯ ಭದ್ರತಾ ಮಂಡಲಿಯು ಅಂಗೀಕರಿಸಿದ ೧೫೧೧ನೆಯ ನಿರ್ಣಯ ಅಪೂರ್ವವಾದ್ದು, ಇರಾಕಿನ ಜನರ ಏಳಿಗೆಗೆ ಸಾಧನವಾಗಬಹುದಾದ್ದು, ಪ್ರಜಾಪ್ರಭುತ್ವ ನೆಲೆಗೊಳ್ಳಲು ಪೂರಕವಾದ್ದು. ನಮ್ಮ ರಾಜಕೀಯ ನಾಯಕರು ಇಷ್ಟು ಬಾಲಿಶ ತರ್ಕವನ್ನು ಅವಲಂಬಿಸುತ್ತಿದ್ದಾರೆಂಬುದು ಅವರ ಅಪಮಾರ್ಗದಲ್ಲಿ ಒಂದು ದಾಖಲೆಯಾಗಿ ಉಳಿಯುವಂಥದ್ದು. ಎಂತಹ ಬಂಧನಕ್ಕೆ ಸಿಲುಕಿ ಸಿರಿಯಾ ಆ ನಿರ್ಣಯಕ್ಕೆ ತನ್ನ ಒಪ್ಪಿಗೆ ನೀಡಿದೆಯೆಂಬುದನ್ನು ಎಂಥವರೂ ಅರಿಯಬಲ್ಲರು. ಇನ್ನುಳಿದವರ ಡಂಭಾಚಾರದ ಹೇಳಿಕೆಗಳು ಅವರ ದೂರದೃಷ್ಟಿಯ ಲೆಕ್ಕಾಚಾರಗಳನ್ನು ಪ್ರತಿಫಲಿಸುತ್ತವೆಯೇ ವಿನಾ ವಸ್ತುಸ್ಥಿತಿಯನ್ನಲ್ಲ. ಉರಿಯುವ ಮನೆಯಲ್ಲಿ ಇಂದಲ್ಲದಿದ್ದರೆ ನಾಳೆಯಾದರೂ ಒಂದಷ್ಟು ಕರಕಲು ಗಳುಗಳನ್ನು ಹಿರಿಯುವ ಉತ್ಸಾಹ ಅವರದು.

ಇನ್ನೂರು ವರ್ಷಗಳ ವಸಾಹತು ದರ್ಪದ ಚರಿತ್ರೆಯ ಹಿನ್ನೆಲೆಯಿರುವ ಬ್ರಿಟನ್ನಿನ ಹೇಳಿಕೆ ಬೇರೆಲ್ಲವನ್ನೂ ಲಘುವಾಗಿಸುವಂಥದು. ''ಇರಾಕಿನ ಜನತೆಯ ಹಕ್ಕುಗಳು'' ಈ ನಿರ್ಣಯದಿಂದ ಪುಷ್ಟಿ ಪಡೆಯುತ್ತವಂತೆ ! ರಷ್ಯಾ, ಫ್ರಾನ್ಸ್ ಮತ್ತು ಜರ್ಮನಿಗಳ ಕುಹಕ ಸಹ ಕಣ್ಣು ಕುಕ್ಕುವಂಥದು. ಅವರಿಗೆ ನಿರ್ಣಯ ಅಂಗೀಕಾರಾರ್ಹವಲ್ಲವೆಂದೂ, ಆದರೆ ''ಸಹಮತ''ಕ್ಕಾಗಿ ಅದನ್ನು ಬೆಂಬಲಿಸಿರುವುದಾಗಿಯೂ ಆ ದೇಶಗಳು ಹೇಳಿವೆ. ಅಂದರೆ, ಇರಾಕಿನ ಜನರನ್ನು ಕೊಲ್ಲಲು ಅವರ ಸಹಮತವಿದೆ ಎಂದರ್ಥ. ನಾಳೆ ಅಲ್ಲಿಂದ ತೈಲ ಸಾಗಿಸಿಕೊಳ್ಳುವುದಕ್ಕೂ ಸಹಮತವಿರುತ್ತದೆ. ''ಭದ್ರತಾ ಮಂಡಲಿಯ ಐಕ್ಯತೆಗೆ ಆದ್ಯತೆ ನೀಡಿ ನಿರ್ಣಯವನ್ನು ಬೆಂಬಲಿಸಿದ್ದೇವೆ'' ಎಂದು ಜರ್ಮನಿ ಹೇಳಿದೆ. ಆಕ್ರಮಣ ಮತ್ತು ಪುಂಡುತನಕ್ಕೆ ಐಕ್ಯನಿಲುವು ಎಂದೇ ಇದರರ್ಥ. ಈ ದೇಶಗಳು ತಮ್ಮ ಸೈನ್ಯದ ತುಕಡಿಗಳನ್ನು ಇರಾಕಿಗೆ ಕಳಿಸಲು ಸಿದ್ಧವಿಲ್ಲವೆಂಬುದಷ್ಟೇ ಸಮಾಧಾನದ ಸಂಗತಿ. ಇದೆಲ್ಲವನ್ನೂ ಮೀರಿಸುವ ನಿಲುವನ್ನು ತಳೆದದ್ದು ''ಸಮಾಜವಾದಿ'' ಚೀಣಾ ಜನತಾ ಗಣರಾಜ್ಯ. ಆ ದೇಶದ ಹೆಸರಿಗೇ ಮಸಿ ಬಳಿಯುವ ತೀರ್ಮಾನ ಅವರದ್ದು. ''ಶಾಂತಿ ಪ್ರಕ್ರಿಯೆಯನ್ನು ತ್ವರಿತಗೊಳಿಸಲು'' ನಿರ್ಣಯಕ್ಕೆ ಅವರ ಬೆಂಬಲವಂತೆ. ಇರಾಕಿನ ಜನತೆಯ ಹತ್ಯೆಗೆ ''ಶಾಂತಿ ಪ್ರಕ್ರಿಯೆ'' ಎಂಬ ಹೊಸ ವ್ಯಾಖ್ಯಾನ ನೀಡಿರುವ ಚೀಣಾದ ಚಾಣಾಕ್ಷತನ ಅದ್ಭುತವಾಗಿದೆ ! ಅಮೆರಿಕಾದ ಮಾರುಕಟ್ಟೆ ತನ್ನಿಂದ ದೂರವಾಗದಿದ್ದರೆ ಸಾಕು, ಎಲ್ಲವೂ ಶಾಂತಿ ಪ್ರಕ್ರಿಯೆಗಳೇ ಆಗಿಬಿಡುತ್ತವೆ. ಚೀಣಾದ ದೃಷ್ಟಿಯಲ್ಲಿ, ಅಂತರರಾಷ್ಟ್ರೀಯ ದುಡಿಯುವ ವರ್ಗದ ಹಿತರಕ್ಷಣೆಗೆ ಇದು ಅವರು ಸಂಶೋಧಿಸಿರುವ ಹೊಸ ಕ್ರಮವಿರಬೇಕು. ಅವರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿರುವ ಟರ್ಕಿ ತನ್ನ ಸೈನ್ಯವನ್ನು ಇರಾಕಿನೊಳಕ್ಕೆ ನುಗ್ಗಿಸಲು ತುದಿಗಾಲಲ್ಲಿ ನಿಂತಿದೆ. ಇರಾಕಿನ ಜನತೆಯಿರಲಿ, ಅಮೆರಿಕಾದ ಕೈಗೊಂಬೆಯಾದ ಇರಾಕಿನ ಆಡಳಿತ ಸಮಿತಿ ಸಹ ಟರ್ಕಿಯ ಸೈನ್ಯವನ್ನು ಸ್ವಾಗತಿಸಲು ಸಿದ್ಧವಿಲ್ಲ. ಆದರೆ ಅಮೆರಿಕಾವನ್ನು ತಣಿಸಬೇಕೆಂಬ ಟರ್ಕಿಯ ನಿರ್ಧಾರ ಅಚಲವಾಗಿದೆ. ಅಮೆರಿಕಾದ ಸೈನಿಕರ ಜೊತೆ ತಮ್ಮ ಸೈನಿಕರೂ ಇರಾಕಿನ ಜನರ ಏಟಿಗೆ ಗುರಿಯಾಗಲಿ ಎಂಬ ಆಶಯ ಅವರಿಗೆ ಹಸನಾಗಿ ತೋರುತ್ತಿದೆ.

ಭಾರತದ ನಿಲುವು ಕತ್ತಿಯ ಅಲುಗಿನ ಮೇಲೆ ನಡೆಯುವ ಸಾಹಸಕ್ಕೆ ಸಮನಾಗಿದೆ. ''ಭದ್ರತಾ ಮಂಡಲಿಯ ನಿರ್ಣಯ ಸ್ವಾಗತಾರ್ಹ. ಅದು ಇರಾಕಿನ ಜನರಿಗೆ ಪರಿಹಾರ ನೀಡುತ್ತದೆ. ಮುಂದೆ ಒಂದು ದಿನ ಅವರ ಸಾರ್ವಭೌಮತ್ವಕ್ಕೂ

ಶ್ರೀರಕ್ಷೆಯಾಗುತ್ತದೆ. ಸೈನಿಕ ತುಕಡಿಗಳನ್ನು ಎಲ್ಲ ದೇಶಗಳವರೂ ಕಳಿಸಬಹುದು. ಅಮೆರಿಕಾದ ನೇತೃತ್ವದಲ್ಲೇ ಇದ್ದರೂ ಅದಕ್ಕೀಗ ಭದ್ರತಾ ಮಂಡಲಿ ಮುದ್ರೆಯೊತ್ತಿದೆ. ನಮ್ಮ ಆಂತರಿಕ ಸನ್ನಿವೇಶದಿಂದಾಗಿ ನಾವು ಸೈನ್ಯ ಕಳಿಸಲಾರೆವು. ಆದರೆ ನಾಗರಿಕ ಸೌಲಭ್ಯಗಳನ್ನು ನಿರ್ಮಿಸಲು ಸಹಾಯಹಸ್ತ ನೀಡುವುದು ನಮ್ಮ ಕರ್ತವ್ಯ.'' - ಇದು ಭಾರತದ ಬುದ್ಧಿವಂತಿಕೆಯ ನಿಲುವು. ಕೆಲವರು ಅದನ್ನು ಎಡಬಿಡಂಗಿತನವೆಂದರೆ ಆಶ್ಚರ್ಯವಿಲ್ಲ. ಇರಾಕಿನ ಜನತೆ ಇಂತಹ ಮಾತಿನ ಮರ್ಮ ತಿಳಿಯಲಾರರೆಂಬ ಹುಂಬತನ ಬೇಡ; ಅವರಿಗೆ ಆಘಾತಕರವಾದ ನಿಲುವು ನಮ್ಮ ದೇಶದ್ದು ಎಂಬ ಸಾಮಾನ್ಯ ತಿಳಿವಳಿಕೆ ಅಲ್ಲಿಯ ಜನರಿಗಿರುತ್ತದೆ.

ಇಂದು ಇರಾಕಿನ ಜನರ ಪ್ರತಿನಿಧಿಗಳೆಂದು ಕರೆದುಕೊಳ್ಳುತ್ತಿರುವ ಅಮೆರಿಕಾ ಕೃಪಾಪೋಷಿತ ಆಡಳಿತ ಮಂಡಲಿಯ ನೇತಾರರು ಯಾರೂ ಎಂದೂ ಆ ದೇಶದ ಅತಿಸಾಮಾನ್ಯ ಹಕ್ಕುಗಳಿಗಾಗಿ ಕೂಡ ಹೋರಾಟ ಮಾಡಿದ್ದವರಲ್ಲ, ಎಲ್ಲಾ ದೇಶ ಬಿಟ್ಟು ಓಡಿದ್ದವರು. ಈಗ ಅವರೆಲ್ಲಾ ಅಮೆರಿಕಾದೊಡನೆ ಶಾಮಿಲಾಗಿರುವ ಪಾತಕಿಗಳು. ಅವರ ಸಾಲಿಗೆ ಭದ್ರತಾ ಮಂಡಲಿಯ ಸದಸ್ಯ ರಾಷ್ಟ್ರಗಳು ಸೇರಿರುವುದು ಇಂದಿನ ಅಂತರರಾಷ್ಟ್ರೀಯ ಭಯಾನಕತೆಯನ್ನು ನಮ್ಮ ಮುಂದೆ ತೆರೆದಿಡುತ್ತದೆ. ವಿಶ್ವಸಂಸ್ಥೆಯ ಭದ್ರತಾ ಮಂಡಲಿಯು ತನ್ನ ಮಾತೃಸಂಸ್ಥೆಯನ್ನು ಶವಪೆಟ್ಟಿಗೆಯೊಳಕ್ಕೆ ತುರುಕಿ, ಅಮೆರಿಕಾ ಸರಬರಾಜು ಮಾಡುವ ಮೊಳೆಗಳನ್ನು ಹೊಡೆದು, ಆ ಪೆಟ್ಟಿಗೆಯನ್ನು ಭದ್ರಗೊಳಿಸುವ ಹುನ್ನಾರದಲ್ಲಿ ಭಾಗಿಯಾಗಿದೆ. ಇದಕ್ಕೆ ಅನುಕೂಲಕರವಾದ ಸಿದ್ಧಾಂತವನ್ನು ರಚಿಸಿಕೊಡುವ ಕೀಳುಮಟ್ಟಕ್ಕೆ ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಕುಸಿದುಬಿದ್ದಿದ್ದಾರೆ. ದೈತ್ಯಶಕ್ತಿಯ ಮುಂದೆ ಇಡೀ ವಿಶ್ವ ಕುಬ್ಜತನದಿಂದ ಸೊರಗಿ ನಿಲ್ಲುವ ದಯನೀಯ ಸ್ಥಿತಿ ಇದು.

ಇರಾಕಿನ ಜನರ ದೃಷ್ಟಿಯಲ್ಲಿ ಇದಕ್ಕಿರಬಹುದಾದ ಒಂದೇ ಅರ್ಥ ತಾವು ವಿಶ್ವದಲ್ಲಿ ಏಕಾಂಗಿಗಳು, ಯಾರ ಆಸರೆಯೂ ಇಲ್ಲದೆ ತಾವಷ್ಟೇ ರಾಕ್ಷಸ ಆಕ್ರಮಣಕಾರನನ್ನು ಎದುರಿಸಬೇಕು, ಎಂಬುದು. ಸದ್ದಾಂ ಹುಸೇನ್ ಬೀಭತ್ಸ ಕೃತ್ಯಗಳನ್ನೆಸಗಿದ, ನಿಜ. ಅವನು ಹೋದನೋ ಇಲ್ಲವೋ ಇನ್ನೂ ನಿರ್ಣಾಯಕವಾಗಿ ತಿಳಿದಿಲ್ಲ. ಆದರೆ ಇರಾಕಿನ ಜನತೆ ಬಾಣಲೆಯಿಂದ ಸಿಡಿದು ಬೆಂಕಿಗೆ ಬಿದ್ದಂತಾಗಿದೆ. ಘೋರ ಪಾತಕಗಳ ವಿರುದ್ಧ ವಿಶ್ವಸಂಸ್ಥೆಯಲ್ಲಿ ಸೊಲ್ಲೆತ್ತಬೇಕಾದ ರಾಷ್ಟ್ರಗಳಿಂದ ಆಯ್ಕೆಗೊಂಡ ಭದ್ರತಾ ಮಂಡಲಿಯ ಸದಸ್ಯರಾಷ್ಟ್ರಗಳು ೨೧ನೆಯ ಶತಮಾನದಲ್ಲಿ ನಾಗರಿಕತೆಯ ವೃದ್ಧಿಗೆ ಶ್ರಮಿಸುವ ಬದಲು ಅನಾಗರಿಕ ದುಂಡಾವರ್ತಿಗೇಕೆ ತಮ್ಮನ್ನು ತಾವು ತೆತ್ತುಕೊಂಡರೆಂಬ ಪ್ರಶ್ನೆ ಇತಿಹಾಸದ ಒಂದು ವ್ಯಂಗ್ಯವಾಗಿ ಉಳಿಯುತ್ತದೆ. ಎಲ್ಲ ರಾಷ್ಟ್ರಗಳೂ ದುರುಳ ಆಕ್ರಮಣಕಾರನಿಗೆ, ದರೋಡೆಕೋರನಿಗೆ ಶರಣಾಗಬೇಕೆ ? ಭಾರತದ ಸ್ವಾತಂತ್ರ್ಯೋತ್ತರ ಪರಂಪರೆಯ ದಿಟ್ಟ ಉತ್ತರ ಇದಕ್ಕೆ 'ಇಲ್ಲ' ಎಂದೇ ಇರಬೇಕಾಗುತ್ತದೆ. ಕೇಂದ್ರ ಸರ್ಕಾರದಲ್ಲಿರುವ ''ರಾಷ್ಟ್ರೀಯ'' ನಾಯಕರಿಗೆ ಈ ಉತ್ತರವನ್ನು ಗಟ್ಟಿಯಾಗಿ ಹೇಳಲು ಅಂಜಿಕೆ ಇರಬಹುದು, ಆದರೆ ದೇಶದ ಪ್ರಜೆಗಳು ಒಕ್ಕೊರಲಿನಿಂದ ಅದನ್ನು ಹೇಳಬೇಕು, ಹೇಳುತ್ತಾರೆ. ಇಲ್ಲದಿದ್ದರೆ ನಾಳೆ ನಮ್ಮ ಮೇಲೆ ಎರಗಬಹುದಾದ ಪಿಡುಗನ್ನು ನಾವು ಸಮರ್ಥವಾಗಿ ಎದುರಿಸುತ್ತೇವೆಯೆ ?

## ಎಡ್ವರ್ಡ್ ಸಯೀದ್

**ಸೆ**ಪ್ಟೆಂಬರ್ ೨೫ರಂದು ಗತಿಸಿದ ೬೮ ವರ್ಷದ ವಿದ್ವಾಂಸ , ಚರಿತ್ರಕಾರ, ವಿಮರ್ಶಕ, ಸಂಗೀತಜ್ಞ ಮತ್ತು ಹೋರಾಟಗಾರ ಎಡ್ವರ್ಡ್ ಸಯೀದ್ ಯಾವ ದೇಶದವನೆಂದು ಯಾರೂ ತಲೆ ಕೆಡಿಸಿಕೊಳ್ಳಲಿಲ್ಲ. ಅವನು ನಿಜಾರ್ಥದಲ್ಲಿ ವಿಶ್ವಪ್ರಜೆಯಾಗಿ ಬಾಳಿದವನು, ಇಂಥದೇ ದೇಶದವನೆಂದು ಹೇಳಿಕೊಳ್ಳಲು ದೇಶವೊಂದು ಇರದಿದ್ದವನು. ಭಾರತದ ಸಂದರ್ಭದಲ್ಲಿ ಈತನ ಪ್ರಭಾವ ಆಶ್ಚರ್ಯ ತರಿಸುವಂಥದು. ನಮ್ಮ ಬೌದ್ಧಿಕ ಪ್ರಪಂಚದ ಅನೇಕ ''ಶ್ರೇಷ್ಠ'' ವಿದ್ವಾಂಸರು ಸಯೀದ್‌ನ ಕೃತಿಗಳನ್ನು ಅರೆದು ಕುಡಿದಿರುವುದಾಗಿ ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಆತನ ಚಿಂತನೆ ಅನಭಿವೃದ್ಧ ದೇಶಗಳ ಜನರಿಗೆ, ವಸಾಹತು ದೌರ್ಜನ್ಯಗಳಿಂದ ಹೊರಬಂದಿರುವ ದೇಶಗಳಿಗೆ, ಅದೆಷ್ಟು ಪ್ರಸ್ತುತ ಎಂಬುದನ್ನು ಇವರೆಲ್ಲಾ ನಿರರ್ಗಳವಾಗಿ ಪ್ರತಿಪಾದಿಸುತ್ತಾರೆ; ಆತನ ಪ್ರಕರ್ಷ ಒಳನೋಟಗಳನ್ನು ಹೊಗಳುತ್ತಾರೆ. ಆದರೆ ಆತನ ಕ್ರಿಯಾಶೀಲತೆ, ಅವಿರತವಾದ ಹೋರಾಟ, ಯಾವ ಪ್ರಲೋಭನೆಗೂ ಒಳಗಾಗದೆ ಮುಕ್ತವಾಗಿ ಮಾನವತೆಯ ಶಿಖರಕ್ಕೇರಿದ್ದು, ಇವೆಲ್ಲಾ ಅವರಿಗೆ ಗೌಣ. ಸಯೀದ್ ಪ್ರಶಂಸಕರೆಲ್ಲಾ ಅವರವರ ವೈಯ್ಯಕ್ತಿಕ ಜೀವನಗಳಲ್ಲಿ ಎಂತಹ ವರ್ಚಸ್ಸನ್ನು ಉಳಿಸಿಕೊಂಡಿದ್ದಾರೆಂಬುದು ಬಹಳ ಮುಖ್ಯವಾದ ಪ್ರಶ್ನೆ. ಅವನ ಪುಸ್ತಕಗಳನ್ನಷ್ಟೇ ಮೆಚ್ಚುವ ಪಂಡಿತರು ಒಂದರ್ಥದಲ್ಲಿ ನಿರ್ಜೀವಿಗಳು, ಸಯೀದ್‌ನ ವಂಚಕರು, ಎಂದರೆ ಯಾರೂ ಮುನಿಸಿಕೊಳ್ಳುವ ಪ್ರಮೇಯವಿಲ್ಲ. ಏಕೆಂದರೆ, ಸಯೀದ್ ತನ್ನ ಜೀವನದುದ್ದಕ್ಕೂ ವಿದ್ವತ್ತು ಮತ್ತು ಹೋರಾಟಗಳನ್ನು ಸಮೀಕರಿಸಿ ಶ್ರೇಯಸ್ಸು ಗಳಿಸಿಕೊಂಡವನು.

ಈಜಿಪ್ಟಿನಲ್ಲಿ ವಿದ್ಯಾಭ್ಯಾಸ ಆರಂಭಿಸಿದ ಎಡ್ವರ್ಡ್ ಸಯೀದ್ ಕ್ರಮೇಣ ಆಂಟೋನಿಯೋ ಗ್ರಾಂಶಿ, ರೇಮಂಡ್ ವಿಲಿಯಂಸ್‌ರಂತೆ ವ್ಯವಸ್ಥೆಯ ವಿಶ್ಲೇಷಣೆಗಳ ಮೂಲಕ ಸರ್ವಾಧಿಕಾರಿ ಪ್ರವೃತ್ತಿಗಳನ್ನು ಗುರುತಿಸಿ ಅವನ್ನು ಹಿಮ್ಮೆಟ್ಟಿಸುವ ಕಾರ್ಯಭಾರವನ್ನು ತನ್ನದಾಗಿಸಿಕೊಂಡ. ಪ್ಯಾಲಿಸ್ಟೈನ್ ಎಂದರೆ ತನ್ನ ಜೀವವೆಂಬಂತೆ ನಡೆದುಕೊಂಡ ಸಯೀದ್‌ಗೆ ಅಸಂಖ್ಯಾತ ಯಹೂದಿ ಸ್ನೇಹಿತರಿದ್ದರು ಮತ್ತು ಇಸ್ರೇಲಿನೊಡನೆ ಒಂದು ರೀತಿಯ ಭಾವನಾತ್ಮಕ ಸಂಬಂಧವನ್ನಾತ ಬೆಳೆಸಿಕೊಂಡಿದ್ದ. ಕಲೆಗೆ, ಅಂತೆಯೇ ಸಾಹಿತ್ಯಕ್ಕೆ, ಸೀಮಿತ ಪ್ರಚಾರಾತ್ಮಕ ಆಕಾಂಕ್ಷೆಯೇ ಸರ್ವಸ್ವವಲ್ಲವೆಂದು ಖಚಿತವಾಗಿ ನಂಬಿದ್ದ ಸಯೀದ್ ಕಲೆ - ಸಾಹಿತ್ಯಗಳ ರಾಜಕೀಯ ಆಯಾಮಗಳನ್ನು ನಿರಾಕರಿಸಲಿಲ್ಲ. ''ಶುದ್ಧ ಸಾಹಿತ್ಯ'' ಎಂಬ ಗುಂಗಿನಲ್ಲಿ ಸಮಕಾಲೀನ ವ್ಯಾವಹಾರಿಕ ಸಂದಿಗ್ಧತೆಗಳನ್ನು ನೇರವಾಗಿ ಗುರುತಿಸಲು ಹಿಂಜರಿಯದಂತಹ ವಿಮರ್ಶಕ ಸಯೀದ್. ಜೆರುಸಲೆಂನ ಒಂದು ಶ್ರೀಮಂತ ಕ್ರೈಸ್ತ ಕುಟುಂಬದಲ್ಲಿ ಜನಿಸಿದ್ದ ಎಡ್ವರ್ಡ್ ಎಲ್ಲ ದೇಶಗಳ ಬೌದ್ಧಿಕ, ಸಾಂಸ್ಕೃತಿಕ ಮತ್ತು ರಾಜಕೀಯ ವಲಯಗಳಲ್ಲಿ ಪ್ರಸಿದ್ಧನಾಗಿರುವುದು ಪ್ಯಾಲಿಸ್ಟೈನ್‌ನ ಸಯೀದ್ ಎಂದೇ. ಅವನು ನೆಲೆಸಿದ್ದು ಅಮೆರಿಕಾದಲ್ಲಿ. ಯಾವಾಗಲೂ ಬೇಹುಗಾರರ ಹದ್ದಿನ ಕಣ್ಣುಗಳು ಆತನ ಮೇಲಿರುವುದು ಅದರಿಂದಾಗಿ ಅನಿವಾರ್ಯವಾಗಿತ್ತು. ಅದರಿಂದ ಖಿನ್ನನಾಗದೆ, ವಿಚಲಿತನಾಗದೆ, ವಿಮುಖನಾಗದೆ ಎತ್ತರಕ್ಕೆ ಬೆಳೆದ ಉದಾತ್ತ ಮಾನವಜೀವಿ ಸಯೀದ್ ಹಲವು ಕ್ಷೇತ್ರಗಳ ಕಾರ್ಯಕರ್ತರಿಗೆ ಸ್ಫೂರ್ತಿ ನೀಡಬಲ್ಲ. ಅವನ ಬೌದ್ಧಿಕ ಶಿಸ್ತು ಮತ್ತು ರಾಜಕೀಯ ಕ್ರಿಯಾಶೀಲತೆ ನಿಜಕ್ಕೂ ಅನುಕರಣೀಯ.





**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಬಿ. ಜಿ. ಗುಜ್ಜಾರಪ್ಪ
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಬಸವರಾಜ ಕಲ್ಗುಡಿ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವ್ಯಾಸರಾಯ ಬಲ್ಲಾಳ
ವಿಜಯಾ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಸಿದ್ದನಗೌಡ ಪಾಟೀಲ
ಎಲ್. ಹನುಮಂತಯ್ಯ
ಹಾಲಾಡಿ ಮಾರುತಿರಾವ್

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ.೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ :೨೨೫೧೩೮೦೨
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☎ :೨೪೪೧೦೦೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☎ :೨೪೨೪೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☎ : ೪೨೪೩೦೨



ಶ್ರೀಶ ಉಡುಪ ಅವರ ಲೇಖನ, ಅವರ ಜನಪರ ತುಡಿತವನ್ನು ಪ್ರತಿನಿಧಿಸುತ್ತದೆ. ಆದರೆ ಶುದ್ಧಕಲೆ, ಜನಸಂಪರ್ಕ ಕಳೆದುಕೊಂಡ ಕಲಾಕಾರ ಜನಪರವಾಗಿರಲಿಕ್ಕಿಲ್ಲ ಎನ್ನುವ ಅಭಿಪ್ರಾಯ ಪ್ರಶ್ನಾರ್ಹ. ಶುದ್ಧ ಕಲಾಕಾರರು ಮಾತ್ರವಲ್ಲ ಶುದ್ಧ ಚಿಂತಕರೂ ಕೂಡ ಔನ್ನತ್ಯಕ್ಕೇರುತ್ತಾ ಹೋದಂತೆ ಜನರಿಂದ ದೂರವಾಗುತ್ತ ಹೋಗುತ್ತಾರೆ. ಗಾಂಧಿ ಚಿಂತನೆ ಅದೆಷ್ಟೇ ಮೌಲಿಕವಾಗಿದ್ದರೂ ಅಳವಡಿಸಿಕೊಳ್ಳಲು ಆಗದಿರುವುದು ಆ ಕಾರಣಕ್ಕಾಗಿ. ಅಂದರೆ ಗಾಂಧಿ ಮಟ್ಟಕ್ಕೆ ಏರಲು ನಮಗೆ ಆಗುತ್ತಿಲ್ಲ, ಹಾಗಂತ ಗಾಂಧಿಯನ್ನು ಜನಪರ ಅಲ್ಲವೆಂದು ಭಾವಿಸುವುದು ಸರಿಯೆನಿಸದು. ಹಾಗೆಯೇ ಶುದ್ಧ ಕಲಾಕಾರನೂ ಕೂಡ. ಆತನ ಕಲೆಯ ನೆಲೆಯನ್ನು ತಲುಪಲು ಸಾಮಾನ್ಯ ಜನರಿಗೆ ಸಾಧ್ಯವಾಗದಿದ್ದ ಮಾತ್ರಕ್ಕೆ ಆತ ಜನಪರನಲ್ಲವೆಂದು ಭಾವಿಸುವಂತಿಲ್ಲ, ಹೆಚ್ಚೆಂದರೆ ವಾಸ್ತವವಾದಿಯಲ್ಲ ಎನ್ನಬಹುದು. ಅಲ್ಲದೆ ಶುದ್ಧ ಕಲಾಕಾರ ಮತ್ತು ಸ್ಥಾಪಿತ ಹಿತಾಸಕ್ತಿಯನ್ನು ಪೋಷಿಸುವ ಕಲಾಕಾರನಿಗೂ ನಡುವೆ ಅಗಾಧ ಅಂತರವಿದೆ. ಸ್ಥಾಪಿತ ಹಿತಾಸಕ್ತಿಯನ್ನು ಪೋಷಿಸುವ ಕಲಾಕಾರನ ಬಗ್ಗೆ ಶ್ರೀಶ ಅವರ ಖಂಡನೆಗೆ ನನ್ನ ಸಹಮತವಿದೆ. ಆದರೆ ಅಂಥವನನ್ನು ಕಲಾಕಾರ ಎಂದು ಕರೆಯಬಹುದೇ ಎಂಬ ಅನುಮಾನವೂ ಇದೆ.

*ಬೆಳ್ತಂಗಡಿ* **ಅರವಿಂದ ಚೊಕ್ಕಾಡಿ**

ನಾ. ಡಿಸೋಜ ಅವರ 'ದೇವರು ಎಲ್ಲರಿಗೂ ಒಳ್ಳೆಯದನ್ನು ಮಾಡಲಿ' ಸಮಾಜದಲ್ಲಿ ಉಳ್ಳವರು-ಉಳ್ಳದಿರುವವರ ನಡುವಿನ ಜನರು ಸಂದರ್ಭವನ್ನು ಹೇಗೆ ನೋಡುತ್ತಾರೆ ಎನ್ನುವ ವಿಚಾರವನ್ನು ಚೆನ್ನಾಗಿ ಚಿತ್ರಿಸಿದೆ.

ನಾ.ಡಿಸೋಜ ಅವರು ಉತ್ತಮ ಕಥಾ ಚಿತ್ರವನ್ನು ಹೆಣೆಯುವುದರಲ್ಲಿ ಸಿದ್ಧಹಸ್ತರು. ಕಥೆಗಾರರಿಗೆ ಧನ್ಯವಾದಗಳು.

*ಮೈಸೂರು* **ಕೊ. ಸು. ನರಸಿಂಹಮೂರ್ತಿ**

'ದೇವರು ಎಲ್ಲರಿಗೂ ಒಳ್ಳೆಯದನ್ನು ಮಾಡಲಿ' ನಾ. ಡಿಸೋಜರ ಕಥೆ ಅತ್ಯಂತ ಹರಿತವಾಗಿತ್ತು. ಕಷ್ಟಬಂದಾಗ ನೆರವಾಗುವ ಕ್ರಿಯಾಶೀಲ ಅಂಶಗಳು ಈ ಸಮಾಜದಲ್ಲಿ ಬಲು ದುಬಾರಿ. ತುಟಿಯಂಚಿನ ಮರುಕ, ಅಯ್ಯೋ ಪಾಪ ಎಂಬ ಕಾರಣಕ್ಕೆ ಸಿಗುವ ಬಿಟ್ಟಿ ಸಲಹೆ ಸೂಚನೆಗಳು ಮಾತ್ರ ಅತ್ಯಂತ ಬಿಕರಿ ಹಾಗೂ ಅವು ಅಷ್ಟೇ ಭಯಾನಕ ಮತ್ತು ಅಪಾಯಕಾರಿ. ಇಂಥ ಎರಡೂ ತರಹದ ಜನರ ಮಧ್ಯೆ ಜೋಕಾಲಿ ಜೀಕಿದ ನನಗೆ ಸಿಕ್ಕ ಹೇರಳ ಅನುಭವಗಳಿಂದಾಗಿ ಕಥೆಯ ಅಕ್ಷರ ಅಕ್ಷರಗಳೂ ಚೆನ್ನಾಗಿ ಅರ್ಥವಾದವು. ನೊಂದ ಜನರ ಕ್ಷೀಣ ನಾಡಿಮಿಡಿತವನ್ನು ದಾಖಲಿಸುವ ಕಥೆಗಾಗಿ ನಾ. ಡಿಸೋಜ ಅವರಿಗೂ ಹೊಸತು ಪತ್ರಿಕೆಗೂ ಧನ್ಯವಾದಗಳು.

*ಬೆಂಗಳೂರು* **ಇಂದಿರಾ ಕುಮಾರಿ**

ಕೊಂಕಣಿ ಕನ್ನಡಿಗ ಕ್ರಿಶ್ಚನ್ ಸಮುದಾಯದ ಆಚಾರ ವಿಚಾರಗಳ ಹಿನ್ನೆಲೆಯಲ್ಲಿ ಸರಳವಾದ ಮತ್ತು ತನ್ನದೇ ಆದ ವಿಶಿಷ್ಟ ಶೈಲಿಯಲ್ಲಿ ಕತೆಯೊಂದನ್ನು ಪೋಣಿಸಿ, ಸಮಾಜದಲ್ಲಿ ಬಡವನಿಗೊಂದು ನೀತಿಯಾದರೆ ಬಲ್ಲಿದನಿಗೊಂದು ಎಂಬುದು ಲೋಕನೀತಿಯಾಗಿದೆ ಎಂಬ ಸಂದೇಶವನ್ನು ನಾ. ಡಿಸೋಜರು ಮನಮುಟ್ಟುವಂತೆ ಚಿತ್ರಿಸಿದ್ದಾರೆ.

ಇದೇ ಸಂಚಿಕೆಯಲ್ಲಿ ಕಾಣಸಿಕೊಂಡ ಡಾ|| ಕರವೀರ ಪ್ರಭು ಕ್ಯಾಲಕೊಂಡ ಇವರ ಲೇಖನ ''ಪ್ರಸೂತಿ ಪೂರ್ವದ ಪರಾಮರಿಕೆ'' ಇತರ ಒಳ್ಳೆಯ ಓದುಗಳಲ್ಲಿ ಒಂದಾಗಿದೆ.

*ಸುರತ್ಕಲ್* **ಟಿ. ಸಿ. ಶ್ರೀಯಾನ್**

ನಮ್ಮ ರಾಮಾಯಣದ ಅಧ್ಯಯನ ಮಾಡಿರುವ ವಿದೇಶೀಯರು ನೀಡಿರುವ ವ್ಯಾಖ್ಯಾನ "Rama is an embodiment of perfection". ರಾಮಾಯಣದ ಆದಿ ಕೃತಿಯಾದ ವಾಲ್ಮೀಕಿ ರಾಮಾಯಣದ ಸ್ಥೂಲ ಸನ್ನಿವೇಶಗಳನ್ನು ವಿಶ್ಲೇಷಿಸಿದ ಬಿ. ಜಿ. ಕುಸುಮಾರವರ ಶೈಲಿ ಪ್ರಶಂಸನೀಯ. ನಿಜಕ್ಕೂ ವಾಲ್ಮೀಕಿ ತೋರಿದ ಮಾರ್ಗ ಇಂದಿಗೂ ಅನುಕರಣೀಯ. ಲೇಖನ ಸೊಗಸಾಗಿದೆ.

*ಬೆಂಗಳೂರು* **ನೆ. ಲ. ರಾಂ.**




ಅಕ್ಟೋಬರ್ ಸಂಚಿಕೆಯಲ್ಲಿ ಶ್ರೀ ಕೆ. ಎಸ್. ನವೀನ್‌ರ ಲೇಖನ ನನಗೆ ಹಳೆಯ ನೆನಪುಗಳನ್ನು ತಂದಿತು. ೧೯೩೯- ೪೨, ಮೂರು ವರ್ಷ ಸೆಂಟ್ರಲ್ ಕಾಲೇಜಿನಲ್ಲಿ, ಬಿ.ಎಸ್‌ಸಿ. (ಆನರ್ಸ್) ತರಗತಿಯಲ್ಲಿ ನನ್ನ ಸಹಪಾಠಿಯಾಗಿದ್ದ ಎ. ಕೃಷ್ಣಸ್ವಾಮಿಯ ಭಾವಚಿತ್ರ ನೋಡಿ ಆನಂದಿಸಿದೆ. ನಮ್ಮ ಮಧ್ಯೆ ಏಕವಚನ ಪ್ರಯೋಗವಿತ್ತು. ಕನ್ನಡ ತರಗತಿಗಳಲ್ಲಿ ಬೆರೆಯುತ್ತಿದ್ದವು. ಒಟ್ಟಿಗೆ ಕುಳಿತು ಬಿ. ಎಂ. ಶ್ರೀಕಂಠಯ್ಯನವರ ಬಾಯಿಂದ King Lear ಪಾಠ ಕೇಳಿದ್ದೇನೆ.

*ಮೈಸೂರು* **ಜಿ. ಆರ್. ಲಕ್ಷ್ಮಣರಾವ್**

ಬಿ. ಜಿ. ಕುಸುಮಾರ 'ವಾಲ್ಮೀಕಿಯ ದಾರಿ ಇಂದಿಗೂ ಮಾದರಿ' ಚಿಂತನ ಯೋಗ್ಯ. ಸ್ಯಾಮ್‌ರವರ ಸುಂದರ ಚಿತ್ರದೊಂದಿಗೆ ಬಂದ ಶ್ರೀ ನಾ. ಡಿಸೋಜರ 'ದೇವರು ಎಲ್ಲರಿಗೂ ಒಳ್ಳೆಯದನ್ನು ಮಾಡಲಿ' ಸೂಕ್ತ ಮುಕ್ತಾಯವನ್ನು ಹೊಂದಿತ್ತು; ಮನ ಕಲಕಿತು. ಶಿವರಾಮ ಕಾರಂತರ ಕೃತಿಗಳ ಮರುಮುದ್ರಣದ ಬಗ್ಗೆ ಬಂದ ಶ್ರೀ ಟಿ. ಆರ್. ಅನಂತರಾಮುರವರ ಲೇಖನ ಸಕಾಲಿಕ.

*ಕಳನಾಡು* **ಮಾಲತಿ ಕಮಲಾಕ್ಷ**

ಎ. ಎನ್. ಮೂರ್ತಿರಾಯರ ಬದುಕು, ಆದರ್ಶ, ಅವರ ಹಾಸ್ಯಪ್ರಿಯತೆ ಅವರೊಂದಿಗೆ ಕಣ್ಮರೆಯಾಗದಿರಲಿ. ಲೇಖನ ಓದಿ ಕಣ್ಣು ತುಂಬಿ ಬಂತು. 'ಅಡುಗೆ ಮನೆಯ ಅಧ್ಯಾತ್ಮ' ಕವಿತೆ: ಕವಿತಾ ರೈ ಅವರಿಂದ ಮೂಡಿದ ಈ ಪದ್ಯ ಅಡುಗೆಯ ಮನೆಯ ಇರುವುಗಳ ನಡುವೆ ಒದ್ದಾಡುವ ನಮಗ್ಯಾಕೆ ಇಂತಹ ಭಾವ ಮೂಡಲಿಲ್ಲ ಅನ್ನಿಸುತ್ತೇ. ಒಟ್ಟಾರೆಯಾಗಿ ಒಳ್ಳೆಯ ಪದ್ಯವೆನಿಸುತ್ತದೆ.

*ಕಡೂರು* **ಜಿ. ಹೆಚ್. ತ್ರಿವೇಣಿ ಶಿವಕುಮಾರ್**

'ಕರಗಿದ ಅರಣ್ಯ ನಶಿಸುತ್ತಿರುವ ವನ್ಯಜೀವ ಓದಿ' ತುಂಬಾ ದುಃಖವಾಯಿತು. ಆದರೂ ಸಹ ಘನ ಸರ್ಕಾರದವರು ಈ ವಿಚಾರವನ್ನು ಗಮನಿಸಿ ''ಕರಗಿದ'' ಅರಣ್ಯವನ್ನು ''ಕರಗದ'' ಅರಣ್ಯವನ್ನಾಗಿಯೂ ನಶಿಸುತ್ತಿರುವ ವನ್ಯಜೀವಿಗಳ ಜೀವನವನ್ನು ಸುಖಮಯವಾಗಿಡಲೆಂದು ಗಮನಹರಿಸಿ ಸಹಕರಿಸಲೆಂದು ಘನ ಸರ್ಕಾರವನ್ನು ಬೇಡಿಕೊಳ್ಳುತ್ತೇವೆ. ಹಾಗೂ ವಿವರಗಳನ್ನು ನೀಡಿದ ಶ್ರೀಮಾನ್ ಅಜ್ಜಂಪುರ ಕೃಷ್ಣಸ್ವಾಮಿ ಮತ್ತು ಶ್ರೀ ಕೆ. ಎಸ್. ನವೀನ್ ಇವರುಗಳಿಗೆ ಇನ್ನೂ ಹೆಚ್ಚಿನ ಉತ್ಸಾಹವನ್ನು ಕೊಡಲೆಂದು ಭಗವಂತನಡಿ ಬೇಡುತ್ತೇವೆ.

*ಬೆಂಗಳೂರು* **ಬಿ. ಎಸ್. ಶೇಷಾದ್ರಿ**

ಅಕ್ಟೋಬರ್ ೨೦೦೩ ಸಂಚಿಕೆಯ ಪ್ಲಸ್ ಪಾಯಿಂಟ್ ಟಿ. ಆರ್. ಅನಂತರಾಮು ಅವರ ''ಕಾರಂತರ ವಿಜ್ಞಾನ ಕೃತಿಗಳ ಮರುಮುದ್ರಣ ಎಷ್ಟು ಪ್ರಸ್ತುತ ?'' ಲೇಖನ. ಇದರಲ್ಲಿ ಲೇಖಕರು ಕನ್ನಡದಲ್ಲಿ ವಿಶ್ವಕೋಶ ಹಾಗೂ ಪದಕೋಶಗಳು ನಡೆದು ಬಂದ ಹಾದಿಯ ಮೇಲೆ ಬೆಳಕು ಚೆಲ್ಲಿದ್ದಾರೆ. ಈಗಿರುವಂತೆಯೇ ಅಥವಾ ಅಲ್ಲಲ್ಲಿ ತಿಪ್ಪೆ ಸಾರಿಸಿ ಕಾರಂತ ಕೃತಿಗಳನ್ನು ಪ್ರಕಟಿಸುವುದು ವಿಜ್ಞಾನಕ್ಕೂ, ಕಾರಂತರಿಗೂ ಎಸಗುವ ಅಪಚಾರ.

ಇಂದಿನ ವಿಜ್ಞಾನ ವಿಶ್ವಕೋಶದ ಮಾನಕ ''ಜ್ಞಾನ ವಿಜ್ಞಾನ ಕೋಶ.'' ಇಬ್ಬರು ಮೂವರು ಪ್ರಕಾಶಕರು ಒಂದೇ ಭಾಷೆಯ, ಒಂದೇ ಪ್ರಕಾರದ ಪುಸ್ತಕಗಳಿಗೆ ಹಣ ಹಾಕುವ ಬದಲು ಯಾಕೆ ಸಂಪನ್ಮೂಲಗಳನ್ನು ಕ್ರೋಡೀಕರಿಸಿ ಸಹಕರಿಸಿ ಕನ್ನಡಕ್ಕೆ ಒಳ್ಳೆಯ ಕೃತಿಗಳನ್ನು ನೀಡಬಾರದು ? ನವಕರ್ನಾಟಕದ ಜ್ಞಾನ ವಿಜ್ಞಾನ ಕೋಶಕ್ಕೆ ಸರಿತೂಗುವ ಕೋಶ ತರುವುದು ಕಷ್ಟಸಾಧ್ಯ. ಈ ಕಾರಣದಿಂದಲೇ ಇತರರೂ ನವಕರ್ನಾಟಕದೊಂದಿಗೆ ಕೈಜೋಡಿಸಿ ಒಂದು ಉತ್ತಮ ಕೋಶ ಹೊರತರುವುದು ಒಳಿತು.

*ಬೆಂಗಳೂರು* **ಕೆ. ಎಸ್. ನವೀನ್**

ಹನಿಗವನಗಳಲ್ಲಿ ಆಸಕ್ತಿಯುಳ್ಳವರು ಆರು ಸಾಲು ಮೀರದ ''ಕನಸುಗಳು'' ವಿಷಯಕ್ಕೆ ಸಂಬಂಧಪಟ್ಟಂತಹ ೧೦ ಹಾಸ್ಯ ಹನಿಗವನಗಳನ್ನು

**ಕೋ. ಲ. ರಂಗನಾಥರಾವ್**
**ನಂ. ೨೩೬, ೧೧ನೇ ಮುಖ್ಯ ರಸ್ತೆ**
**ಏಜೀಸ್ ಕಾಲೋನಿ, ಅರೇಹಳ್ಳಿ**
**ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು - ೬೧**

ಇವರಿಗೆ ೩೦ - ೧೧ - ೨೦೦೩ ರೊಳಗೆ ಕಳುಹಿಸಲು ಕೋರಿದೆ.

# ಸುಗ್ರೀವಾಜ್ಞೆ ರೈತರ ಆತ್ಮಹತ್ಯೆ ತಡೆಯುವುದುಂಟೆ ?




**ಜಾ**ಗತೀಕರಣ ನಿಜವಾಗಿ ಪ್ರಯೋಗವಾಗ ತೊಡಗಿದ್ದು ೧೯೯೦ರ ನಂತರವೇ. ಇದರ ಬೆನ್ನ ಹಿಂದೆಯೇ ರೈತರ ಸಮಸ್ಯೆ ಬೃಹತ್ ಆಕಾರದಲ್ಲಿ ಬೆಳೆಯ ತೊಡಗಿತ್ತು. ಮೊದಲೇ ಬಗೆಹರಿಯದಿದ್ದ ಸಮಸ್ಯೆಗಳ ಮಡುವಿನಲ್ಲಿ ಒದ್ದಾಡುತ್ತಿದ್ದಂತಹ ರೈತ ಸಮುದಾಯದೊಳಗೆ 'ಆತ್ಮಹತ್ಯೆ' ಎಂಬ ಕೂಗುಮಾರಿ ಊರಿಂದ ಊರಿಗೆ ಧಾಳಿಯಿಟ್ಟು ಸಮಸ್ಯೆಗಳಿಗೆ ಅಂಜಿ ಸಾಯುವವರಿಗೆ ಹಾದಿ ತೋರಿಸಿ ಮಾಯವಾಗುತ್ತಿದೆ.

ಸ್ವಾತಂತ್ರ್ಯಪೂರ್ವದಲ್ಲಿದ್ದಂತಹ ಗ್ರಾಮಗಳ ಸ್ಥಿತಿಗತಿಗಳು ಈಗ ಕೊಂಚ ಬದಲಾಗಿವೆ. ಬದಲಾಗಿರುವ ಗ್ರಾಮಗಳಲ್ಲಿ ಅಲ್ಪ ಸ್ವಲ್ಪ ನೆಮ್ಮದಿ ಕಾಣುತ್ತಿದೆ ಎಂದು ಹೇಳುತ್ತಿರುವಾಗಲೆ, ರೈತರ ಆತ್ಮಹತ್ಯೆಗಳು ವಿಕೇಂದ್ರೀಕೃತ ಗ್ರಾಮಗಳಿಗೆ ಎಲ್ಲಿಲ್ಲದ ನೋವಿನ ದುಗುಡವನ್ನು ತುಂಬುತ್ತಿವೆ. ನಮ್ಮ ಪೂರ್ವಜರು ಸಾಲಕ್ಕೆ ಅಂಜಿ ಸತ್ತವರು ಅತಿ ವಿರಳ. ಹಾಗೊಮ್ಮೆ ಸತ್ತಿರುವವರು ಇತಿಹಾಸದ ನಾಲಿಗೆ ಮೇಲಿದ್ದಾರೆ. ಅವರೆಲ್ಲರೂ ಮಾನಕ್ಕೆ ಅಂಜಿ ಸತ್ತವರೆಂಬ ಬಿರುದಾಂಕಿತರಾಗಿದ್ದಾರೆ. ಇಂತಹ ಸಾವುಗಳು ಅಂದು ಸಾವಿರ ಹಳ್ಳಿಗೊಂದರಲ್ಲಿ ನಡೆಯುತ್ತಿದ್ದವು. ಅದು ಕೂಡ ಒಮ್ಮೊಮ್ಮೆ ನಡೆಯುತ್ತಿರಲಿಲ್ಲ. ಆದರೆ, ಇಂದು ಈ ಸಮಸ್ಯೆ ದಿನದಿಂದ ದಿನಕ್ಕೆ ಊಹೆಗೂ ನಿಲುಕದ ಪರಿಸರವನ್ನು ರಾಷ್ಟ್ರಾದ್ಯಂತ ಸೃಷ್ಟಿಸುತ್ತಿದೆ. ಇಂದಿಗೂ ಗ್ರಾಮೀಣ ಕರ್ನಾಟಕದಲ್ಲಿ ಶೇಕಡ ೭೦ರಷ್ಟು ಜನರು ಕೃಷಿಯನ್ನೇ ನಂಬಿ ಬದುಕುತ್ತಿದ್ದಾರೆ. ಹಿಂಡುಗಟ್ಟಲೆ ಜನರು ಈ ವಲಯದಲ್ಲಿ ದುಡಿಯುತ್ತಿದ್ದರೂ ಅವರ ತಲಾದಾಯ ಅತ್ಯಂತ ಕಡಿಮೆ ಇದೆ. ಅವರಿಂದ ಶೇ. ೩೦ಕ್ಕಿಂತ ಕಡಿಮೆ ಪ್ರಮಾಣದ ಆದಾಯ ದೇಶಕ್ಕೆ ಅಥವಾ ರಾಜ್ಯಗಳಿಗೆ ಸಿಗುತ್ತಿದೆ.

ರೈತರು ದುಡಿದು ಬದುಕಬೇಕೆನ್ನುವ ಮನೋಧರ್ಮದವರು. ಅವರಿರುವ ಊರುಗಳಲ್ಲಿ ನಿರುದ್ಯೋಗವಿದೆ, ಬಡತನವಿದೆ, ಹಸಿವಿದೆ, ಹಾಗೂ ಮೂಲಭೂತ ಸೌಲಭ್ಯಗಳಿಗೆ ಹಾಹಾಕಾರವಿದೆ. ಎಷ್ಟೋ ಸಾರಿ, ರೈತರು ಬೆವರು ಸುರಿಸಿ ಬೆಳೆದ ಫಸಲುಗಳಿಂದ ಸಾಲಸೋಲ ಮಾಡಿ ಖರೀದಿಸಿದ ಬೀಜ, ಗೊಬ್ಬರ, ಕೀಟನಾಶಕ, ಹಾಗೂ ತೆತ್ತ ಕೂಲಿ ಹಣವನ್ನು ಹಿಂತೆಗೆದುಕೊಳ್ಳಲಾಗುತ್ತಿಲ್ಲ. ಜಾಗತೀಕರಣದ ಪೂರ್ವದಲ್ಲಿದ್ದಂತಹ ವ್ಯಾಪಾರಸ್ಥರ ಮನೋಭಾವನೆಗಳೇನೂ ಈಗ ಬದಲಾಗಿಲ್ಲ. ಇತ್ತೀಚಿನ ದಿನಗಳಲ್ಲಿ ಜಾಗತೀಕರಣದಡಿ ರೈತರನ್ನು ಸುಲಿಗೆ ಮಾಡುವುದು ಜಾಸ್ತಿಯಾಗಿದೆ. ಆದರೆ ದಲ್ಲಾಳಿಗಳಂತು ಸಮೃದ್ಧ ಜೀವನಾಧಾರಿಗಳಾಗಿದ್ದಾರೆ. ರೈತರಿಂದು ಲಕ್ಷಾಂತರ ರೂಪಾಯಿ ಸುರಿದರೂ ಅಂತರ್ಜಲ ಸಿಗುತ್ತಿಲ್ಲ. ಭಾರತದಲ್ಲಿ ೫ನೇ ಪಂಚವಾರ್ಷಿಕ ಯೋಜನೆ ನಂತರ ದೇಶಾದ್ಯಂತ ಕೆರೆ, ಬಾವಿ, ತೊರೆ, ಬೇಸಾಯಗಳನ್ನು ಬಹುತೇಕವಾಗಿ ಮರೆಯಲಾಗಿದೆ. ಆದರಲ್ಲೂ ಕರ್ನಾಟಕದಲ್ಲಿ ಸುಮಾರು ೫೦ ಸಾವಿರ ನೀರಾವರಿ ಕೆರೆಗಳಿಗೆ ಹರಿದು ಬರುತ್ತಿದ್ದ ನೀರಿನ ಸಂಪರ್ಕಗಳೆಲ್ಲವೂ ಸಂಪೂರ್ಣ ಮುಚ್ಚಿಹೋಗಿವೆ. ''ಆನೆ ಸಾಕುವ ಖುಷಿಯಲ್ಲಿ ಆಡು ಸಾಕುವುದನ್ನು ಮರೆತಂತೆ'' ನಮ್ಮ ಗ್ರಾಮೀಣ ಬದುಕಾಗಿದೆ.

ಅಂದು ಸರ್ಕಾರಿ ನೀರಾವರಿ ತಜ್ಞರೆಲ್ಲರೂ ಸಣ್ಣ ನೀರಾವರಿಗಳನ್ನು ಆರ್ಥಿಕವಾಗಿ ಸಾಧುವಲ್ಲವೆಂದು ಅವುಗಳ ಬಗ್ಗೆ ಉದಾಸೀನ ತೋರಿದ್ದರಿಂದ ಅವು ಮಣ್ಣುಪಾಲಾದವು. ಅಂತರ್ಜಲ ಇಂಗತೊಡಗಿದ ಮೇಲೆ ಅದರ ಮೇಲೆ ಅವರಿಗೆ ಕೃತಕ ಪ್ರೇಮ ಬರತೊಡಗಿದೆ! ಕಡೆಗಣಿಸಿದ್ದ ಈ ಬಾಬ್ತು ಈಗ ಭ್ರಷ್ಟಾಚಾರಗಳಿಗೆ ಕುಮ್ಮಕ್ಕು ನೀಡುತ್ತಿದೆ. ದೋಚುವವರಿಗೆ ತೀವ್ರ ಬರವಿರಲಿ, ವಿಕೋಪವಿರಲಿ, ಸರಣಿ ಆತ್ಮಹತ್ಯೆಗಳಾಗುತ್ತಿರಲಿ ಅವರ ಕಾರ್ಯಭಾರವಂತು ನಿರಂತರವಾಗಿರುತ್ತದೆ.

ರೈತರು ಪ್ರತಿಯೊಂದು ದಿನವೂ ಸರ್ಕಾರವನ್ನು ಕೇಳುವುದೇನೆಂದರೆ, ಬೆಳೆದ ಫಸಲಿಗೆ ಸೂಕ್ತ ಬೆಲೆ ನೀಡಿ, ಉತ್ತಮ ಬೀಜ ಕೊಡಿ, ಶ್ರೇಷ್ಠ ರಸಗೊಬ್ಬರ ಕೊಡಿ, ಸೂಕ್ತ ಮಾರುಕಟ್ಟೆ ವ್ಯವಸ್ಥೆ ನೀಡಿ, ನೀರಾವರಿ ಸೌಲಭ್ಯ ಕೊಡಿ ಮತ್ತು ನಿರಂತರ ವಿದ್ಯುತ್ ಪೂರೈಸಿ ಎಂದಷ್ಟೇ. ಸರ್ಕಾರಿ ಸ್ವಾಮ್ಯದ ಬ್ಯಾಂಕು, ಸಹಕಾರಿ ಸಂಘ ಸಂಸ್ಥೆಗಳಿಂದ ಸಾಲ ಎತ್ತಲು ರೈತರು ಸುತ್ತಾಡಿದ ಪರಿಯನ್ನು ಯಾರೊಬ್ಬರೂ ಊಹಿಸಲು ಅಸಾಧ್ಯ. ಪ್ರತಿಯೊಂದು ಗ್ರಾಮದಲ್ಲಿರುವ ಸಾಲಗಾರರ ಪೈಕಿ ಅವರ ಸಾಲದ ಬಾಬ್ತಿನಲ್ಲಿ ಶೇ. ೪೦ಕ್ಕಿಂತ ಕಡಿಮೆ ಪ್ರಮಾಣದಲ್ಲಿ ಸರ್ಕಾರಿ ಸ್ವಾಮ್ಯ ಮೂಲಗಳಿಂದ ಪಡೆದಿರುತ್ತಾರೆ. ಇನ್ನುಳಿದ ಮೊತ್ತವನ್ನು ಹಳ್ಳಿಗಾಡಿನ ಅಣೆಬಡ್ಡಿ, ಖಾಸಗಿ ಲೇವಾದೇವಿಗಾರರು, ಸ್ನೇಹಿತರು ಅಥವಾ ಬಂಧುಗಳಿಂದ ಸ್ವೀಕರಿಸಿರುತ್ತಾರೆ. ಅನೇಕರು ವಾದಿಸುತ್ತಿದ್ದಾರೆ, ಸಂಪೂರ್ಣ ಸಾಲ ಮನ್ನಾಕ್ಕಾಗಿ. ಒಂದು ವೇಳೆ ಹಾಗೇನಾದರೂ ಮಾಡಿದರೆ, ಮುಂದಿನ ದಿನಗಳಲ್ಲಿ ರೈತರಿಗೆ ಯಾವುದೇ ಸರ್ಕಾರಿ ಸ್ವಾಮ್ಯದ ಬ್ಯಾಂಕುಗಳಿಂದ ಬಿಡಿಗಾಸಿನ ಸಾಲ ಕೂಡ ಸಿಗುವುದು ಸಾಧ್ಯವಾಗುವುದಿಲ್ಲ. ಆರ್ಥಿಕ ವಹಿವಾಟಿನ ಹಿತದೃಷ್ಟಿಯಿಂದ ಕೂಡ ಅದು ಸಾಧುವಲ್ಲ. ಸಂಪೂರ್ಣವಾಗಿ ಸಾಲ ಮನ್ನಾ ಮಾಡಿದರೆ ರೈತರ ಆತ್ಮಹತ್ಯೆ ನಿಲ್ಲುವುದಕ್ಕೆ ಯಾವುದೇ ಖಾತರಿಗಳಿಲ್ಲ.

ಸಾಯುತ್ತಿರುವ ರೈತರಾರೂ ಅತ್ಯಂತ ಶ್ರೀಮಂತ ಕುಟುಂಬಗಳಿಗೆ ಸೇರಿದವರಲ್ಲ. ಅವರೆಲ್ಲರೂ ಸಾಮಾನ್ಯವಾಗಿ ಮಧ್ಯಮ ಮತ್ತು ತದನಂತರದ ವರ್ಗಗಳಿಗೆ ಸೇರಿದವರಾಗಿದ್ದಾರೆ! ಕೃಷಿಕಾರರು ಇವರೆಲ್ಲರನ್ನೂ ನಂಬಿದವರು. ಅವರೂ ಸಹ ಮಾಡಿರುವ ಸಾಲಕ್ಕೆ ಅಂಜಿ ಆತ್ಮಹತ್ಯೆಗೆ ಶರಣಾದರೆ ಪರಿಸ್ಥಿತಿ ಭೀಕರವಾಗುತ್ತದೆ. ಆದರೆ ಈ ಸಮುದಾಯಕ್ಕಿನ್ನೂ ಈ ಪಿಡುಗು ತಗುಲಿಲ್ಲ. ಸತ್ತವರೆಲ್ಲರೂ ಸಾಲ ಬಾಧೆಗಾಗಿಯೇ ಸತ್ತಿದ್ದಾರೆಯೆ ಎಂದರೆ ಉತ್ತರಿಸುವಾಗ ಸ್ವಲ್ಪ ಕಸಿವಿಸಿಯುಂಟಾಗುತ್ತದೆ. ''ಚನ್ನಪಟ್ಟಣ ತಾಲ್ಲೂಕಿನ ಗ್ರಾಮದಲ್ಲಿ ಇತ್ತೀಚಿಗೆ ಸತ್ತವನ ಸಾಲದ ಮೂಲ ಮತ್ತು ಅವನು ಅದನ್ನು ಯಾವ ಯಾವ ಕಾರ್ಯಗಳಿಗೆ ಉಪಯೋಗಿಸಿದ್ದಾನೆಂದು ಅವಲೋಕಿಸಿದಾಗ ಮರುಕಕ್ಕಿಂತ ಕೋಪವೆ ಜಾಸ್ತಿ ಬರಬಹುದು. ಇಲ್ಲದ ದುರಾಭ್ಯಾಸವನ್ನು ಕಲಿತಿದ್ದವನು; ಆಸ್ತಿ-ಪಾಸ್ತಿ ಮಾರಿದ್ದರೂ ಅವನ ಋಣಬಾಧೆ ತೀರುತ್ತಿರಲಿಲ್ಲ. ಚಕ್ರಬಡ್ಡಿದಾರರ ಕಾಟ ತಾಳಲಾರದೆ ರಾತ್ರೋರಾತ್ರಿ ವಿಷ ಕುಡಿದು ಸತ್ತನು''. ಹಾವೇರಿ, ಗದಗ, ದಾವಣಗೆರೆ, ಧಾರವಾಡ, ತುಮಕೂರು, ಮಂಡ್ಯ ಹಾಗೂ ಇತರ ಪ್ರದೇಶಗಳಲ್ಲಿ ನಿಜವಾಗಿಯೂ ಸಾಲಬಾಧೆಗೆ ಅಂಜಿ ಸತ್ತವರಿದ್ದಾರೆ. ದುರ್ನಡತೆಗಳಿಂದಾಗಿ ಸಾಲ ಮಾಡಿದವರನ್ನು ರೈತರ ಆತ್ಮಹತ್ಯೆ ಪರಿಧಿಗೆ ಸೇರಿಸಿ ವಾದಿಸುವುದು ಸಾಮಾಜಿಕ ಸತ್ಯವಾಗದು. ನಿಜವಾಗಿ ಸಮಸ್ಯೆಯ ಭಾರದಿಂದ ಸತ್ತವರಿಗೆ ಯಾವುದೇ ಪರಿಹಾರ ನೀಡುವಲ್ಲಿ ತೊಂದರೆ ಆಗಬಾರದು.

ಸರ್ಕಾರವಿಂದು ವಿಶೇಷ ಪ್ಯಾಕೇಜ್ ಕಾರ್ಯಕ್ರಮವೊಂದನ್ನು ಘೋಷಿಸಿದೆ. ಈವರೆಗೆ ಇದ್ದುದರ ಜೊತೆಗೆ ೮೮೦ ಕೋಟಿಗಳ ನೆರವು ಪ್ರಕಟಿಸಿದೆ. ಅದರಲ್ಲಿ ೩೩೧ ಕೋಟಿಗಳಷ್ಟು ಪಂಪ್‌ಸೆಟ್‌ಗಳ ಮೇಲಿನ ವಿದ್ಯುತ್ ಬಾಕಿಯನ್ನು ಮನ್ನಾ ಮಾಡಲು; ೨೦೦ ಕೋಟಿ ಮಾರುಕಟ್ಟೆ ಪ್ರವೇಶಿಸಿ ಬೀಜ ಪೂರೈಕೆ, ಬೆಂಬಲ ಬೆಲೆ ಇತ್ಯಾದಿಗೆ ಮೀಸಲಿಟ್ಟಿದೆ; ೧೦೭ ಕೋಟಿ ನೀರು ನಿರ್ವಹಣೆ, ಕಂದಾಯ ಸೆಸ್‌ಗಳಿಗೆ ಮೀಸಲಿಟ್ಟಿದೆ. ಇದರೊಟ್ಟಿಗೆ ಖಾಸಗಿ ಲೇವಾದೇವಿಗಾರರಿಂದಾಗುವ ಕಿರುಕುಳ ನಿಯಂತ್ರಿಸಲು ಸುಗ್ರೀವಾಜ್ಞೆ ಕೂಡ ಹೊರಡಿಸಿದೆ. ಇವುಗಳೆಲ್ಲವೂ ರೈತರ ಹಿತದೃಷ್ಟಿಯಿಂದ ಸ್ವಾಗತಾರ್ಹ ಕ್ರಮಗಳೇನೋ ಸರಿ. ಆದರೆ ಸುಗ್ರೀವಾಜ್ಞೆ ಮತ್ತು ವಿಶೇಷ ಪ್ಯಾಕೇಜ್‌ಗಳೆಲ್ಲವು ಕೇವಲ ಕಾಗದದ ಹುಲಿಗಳಾಗಬಾರದಷ್ಟೆ.

ಬೆಂಗಳೂರು — ದಾಸನೂರು ಕೂಸಣ್ಣ

ಹೊಸೂರು ಕನ್ನಡ ಕೂಟ ಹೊರನಾಡು ವಿದೇಶಗಳಲ್ಲಿರುವ ಕನ್ನಡ ಸಂಘ ಸಂಸ್ಥೆಗಳ ನಿರ್ದೇಶಿಕೆಯೊಂದನ್ನು ಹೊರತಂದಿದೆ. ಮುಖ್ಯ ವ್ಯಕ್ತಿ, ಸಂಸ್ಥೆಗಳ ವಿವರಗಳಲ್ಲದೆ, ಅಲ್ಲಿ ಲಭ್ಯವಿರುವ ವಸತಿ ಇತರೆ ಪ್ರವಾಸಿ ಸೌಕರ್ಯ ವಿವರಗಳನ್ನೂ ಇದು ಒಳಗೊಂಡಿದೆ. ಆಸಕ್ತಿಯುಳ್ಳವರು ಒಂದು ನೂರು ರೂಪಾಯಿಗಳನ್ನು ಕಳುಹಿಸಿ ಪಡೆಯಬಹುದು.

**ಲೈಬ್ರೇರಿಯನ್**
**ಪೆರುಮಾಳ್ ಮಣಿಮೇಖಲೈ ಕಾಲೇಜ್ ಆಫ್ ಇಂಜಿನಿಯರಿಂಗ್ ಅಂಡ್ ಟೆಕ್ನಾಲಜಿ**
ಕೊನೇರಿಪಲ್ಲಿ, ಹೊಸೂರು-೬೩೫ ೧೧೭
ತಮಿಳುನಾಡು.

# ವೈಜ್ಞಾನಿಕ ಮನೋವೃತ್ತಿ

**ಪ್ರೊ|| ಜೆ. ಆರ್. ಲಕ್ಷ್ಮಣರಾವ್**

**ನಮ್ಮ ಸುತ್ತಲೂ ಇರುವ ವಸ್ತು ಪ್ರಪಂಚದ ಬಗೆಗೆ ನಂಬಲರ್ಹವಾದ ಜ್ಞಾನವನ್ನು ಗಳಿಸುವುದೇ ವಿಜ್ಞಾನದ ಗುರಿ. ಪ್ರಯೋಗ, ಅವಲೋಕನ, ತೀರ್ಮಾನ, ಅನುಭವಜನ್ಯ ನಿಯಮಗಳನ್ನು ಗುರುತಿಸುವುದು, ವಸ್ತುನಿಷ್ಠ ದೃಷ್ಟಿ ಇವೆಲ್ಲಾ ವಿಜ್ಞಾನದ ವಿಧಾನ. ಇವುಗಳನ್ನು ಮೈಗೂಡಿಸಿಕೊಂಡಿದ್ದು ವೈಜ್ಞಾನಿಕ ಮನೋವೃತ್ತಿ.**

ಭಾರತದ ಸಂವಿಧಾನದಲ್ಲಿ ''ಪ್ರಜೆಗಳ ಆದ್ಯ ಕರ್ತವ್ಯಗಳು'' ಎಂಬ ಶೀರ್ಷಿಕೆಯ ಕೆಳಗೆ, ''ವೈಜ್ಞಾನಿಕ ಮನೋವೃತ್ತಿಯನ್ನೂ ಮಾನವೀಯತೆಯನ್ನೂ... ಬೆಳೆಸಿಕೊಳ್ಳುವುದು ಪ್ರತಿಯೊಬ್ಬ ಪ್ರಜೆಯ ಆದ್ಯ ಕರ್ತವ್ಯ'' ಎಂಬ ಒಂದು ವಾಕ್ಯವಿದೆ. Scientific temperಗೆ ಸಮಾನ ಪದವಾಗಿ ವೈಜ್ಞಾನಿಕ ಮನೋವೃತ್ತಿ ಎಂಬ ಪದವನ್ನು ಬಳಸಲು ಕಾರಣ, ಅದು ನಿಜಕ್ಕೂ ಒಂದು ಬಗೆಯ ಮನಃಪ್ರವೃತ್ತಿ. ಸಂವಿಧಾನವನ್ನು ರಚಿಸಿದ ನಮ್ಮ ಹಿರಿಯರು ಬಹುಮುಖ್ಯವೆಂದು ಪರಿಗಣಿಸಿರುವ ಈ ಮನಃಪ್ರವೃತ್ತಿ ಎಂಥದು ? ಈ ಪ್ರಶ್ನೆ ಅವಶ್ಯವಾಗಿ ವಿಚಾರ ಮಾಡಬೇಕಾದುದು.

ನಮ್ಮ ಸುತ್ತಲೂ ಇರುವ ವಸ್ತು ಪ್ರಪಂಚದ ಬಗೆಗೆ ನಂಬಲರ್ಹವಾದ ಜ್ಞಾನವನ್ನು ಗಳಿಸುವುದೇ ವಿಜ್ಞಾನದ ಗುರಿ. ಅಂಥ ಜ್ಞಾನವನ್ನು ಗಳಿಸುವುದಕ್ಕಾಗಿ ವಿಜ್ಞಾನಿಗಳು, ಅನೇಕ ಶತಮಾನಗಳ ಅನುಭವದ ಆಧಾರದ ಮೇಲೆ, ಒಂದು ಪರಿಣಾಮಕಾರೀ ವಿಧಾನವನ್ನು ರೂಪಿಸಿಕೊಂಡಿದ್ದಾರೆ. ಕಲ್ಲು, ಮಣ್ಣು, ನೀರು, ಗಾಳಿ ಮುಂತಾದ ಅಚೇತನ ವಸ್ತುಗಳನ್ನೂ ಗಿಡಮರಗಳು, ಪ್ರಾಣಿಪಕ್ಷಿಗಳು ಮುಂತಾದ ಚೇತನ ವಸ್ತುಗಳನ್ನೂ ಒಳಗೊಳ್ಳುವ ಈ ವಸ್ತು ಪ್ರಪಂಚದಲ್ಲಿ ನಡೆಯುವುದೆಲ್ಲದರಲ್ಲಿಯೂ ಕ್ರಮ ಇದೆ ಎಂಬುದು ಅನುಭವಸಿದ್ಧವಷ್ಟೆ. ಅದನ್ನು ನಂಬಿಕೊಂಡು ವಿಜ್ಞಾನಿಗಳು ಮುಂದುವರಿಯುತ್ತಾರೆ. ವಿಜ್ಞಾನದ ವಿಧಾನದ ಮೊದಲ ಹೆಜ್ಜೆಯಾಗಿ, ನೈಸರ್ಗಿಕ ವಿದ್ಯಮಾನಗಳಲ್ಲಿ ಕಂಡುಬರುವ ಕ್ರಮದ ನಿದರ್ಶನಗಳನ್ನು ಗುರುತಿಸುತ್ತಾರೆ. ಅಂಥ ಯಾವುದೇ ನಿದರ್ಶನವನ್ನು ಕುರಿತ ಹೇಳಿಕೆ 'ನೈಸರ್ಗಿಕ ನಿಯಮ' ಎನ್ನಿಸಿಕೊಳ್ಳುತ್ತದೆ. ನೀರು ಯಾವಾಗಲೂ ಮೇಲಿನಿಂದ ಕೆಳಕ್ಕೆ ಹರಿಯುತ್ತದೆ. ಆಸರೆ ತಪ್ಪಿದ ವಸ್ತು ಯಾವಾಗಲೂ ಕೆಳಕ್ಕೆ ಬೀಳುತ್ತದೆ, ಇವೇ ಮುಂತಾದ ಅತ್ಯಂತ ಸರಳ ನಿಯಮಗಳನ್ನು ಗುರುತಿಸಲು ವಿಶೇಷ ಪ್ರಯತ್ನ ಬೇಕಿಲ್ಲ. ನಮ್ಮ ದಿನನಿತ್ಯ ಜೀವನದಲ್ಲಿ ಅಯತ್ನವಾಗಿ ನಾವು ಅಂಥ ನಿಯಮಗಳನ್ನು ಅರಿತುಕೊಂಡುಬಿಟ್ಟಿರುತ್ತೇವೆ. ಶಿಲಾಯುಗದ ಜನರು ಸಹ ಈ ನಿಯಮಗಳನ್ನು ಅರಿತಿದ್ದರು. ಬಹುಶಃ ಅದನ್ನು ವ್ಯಕ್ತಪಡಿಸಲು ಅವರಿಗೆ ಬರುತ್ತಿರಲಿಲ್ಲ.

ಅಷ್ಟು ಸರಳವಲ್ಲದ ಇನ್ನು ಕೆಲವು ನಿಯಮಗಳನ್ನು ಗುರುತಿಸಲು ನಾವು ನೈಸರ್ಗಿಕ ವಿದ್ಯಮಾನಗಳನ್ನು ಕುತೂಹಲದಿಂದ ಸಾಕಷ್ಟು ಕಾಲ ವೀಕ್ಷಿಸಬೇಕಾಗುತ್ತದೆ. ಹಗಲಿನ ಆಕಾಶದಲ್ಲಿ ಸೂರ್ಯ ಯಾವ ದಿಕ್ಕಿನಲ್ಲಿ ಹೋಗುವುದೋ ಅದೇ ದಿಕ್ಕಿನಲ್ಲಿ ಗ್ರಹನಕ್ಷತ್ರಾದಿಗಳು ರಾತ್ರಿಯ ಆಕಾಶದಲ್ಲಿ ಹೋಗುವುವು, ಪ್ರತಿ ವರ್ಷವೂ ವಸಂತಕಾಲದ ನಂತರ ಬೇಸಗೆ ಬರುವುದು, ಗಿಡ ಮರಗಳಲ್ಲಿ ಮೊದಲು ಹೂ ಕಾಣಿಸಿಕೊಂಡು ಅನಂತರ ಕಾಯಿ ರೂಪುಗೊಳ್ಳುವುದು, ಇವೇ ಮೊದಲಾದ ನಿಯಮಗಳನ್ನು ಗುರುತಿಸಲು ಸ್ವಲ್ಪಮಟ್ಟಿನ ಕುತೂಹಲ ಮತ್ತು ಕೆಲಕಾಲದ ವೀಕ್ಷಣೆ ಆವಶ್ಯಕ. ಇಂಥ ಸರಳ ಮತ್ತು ಅತಿ ಸರಳ ನಿಯಮಗಳನ್ನು ಗುರುತಿಸಿದವರನ್ನು ವಿಜ್ಞಾನಿಗಳು ಎಂದು ಯಾರೂ ಕರೆಯಲಿಲ್ಲ. ವಿಜ್ಞಾನ ಎಂಬ ವ್ಯವಸ್ಥಿತ ಪ್ರಯತ್ನ ಪ್ರಾರಂಭವಾಗುವುದಕ್ಕೆ ಬಹು ಮುಂಚೆಯೇ ಸಾಮಾನ್ಯ ಜನ ಈ ನಿಯಮಗಳನ್ನು ಗುರುತಿಸಿದ್ದರು.

ಕೇವಲ ನೈಸರ್ಗಿಕ ವಿದ್ಯಮಾನಗಳ ವೀಕ್ಷಣೆಯಿಂದ ಗುರುತಿಸಲಾಗದಿದ್ದು, ಇಲ್ಲಿ ಯಾವುದೋ ನಿಯಮವಿರಬಹುದೆಂಬ ಸುಳಿವು ಕಂಡುಬಂದಾಗ, ಅಗತ್ಯವೆನಿಸಿದ ಪರಿಸ್ಥಿತಿಗಳನ್ನು ಕೃತಕವಾಗಿ ಸೃಷ್ಟಿಸಿ, ನಿಯಮಗಳನ್ನು ಗುರುತಿಸುವುದು ಅನಂತರ ರೂಢಿಗೆ ಬಂದಿತು. ಅದನ್ನೇ ಪ್ರಯೋಗ ಎಂದು ಕರೆಯುವುದು. ಈ ಪದ್ಧತಿ ರೂಢಿಗೆ ಬಂದಾಗ ವಿಜ್ಞಾನ ಜನ್ಮ ತಾಳಿತು ಎನ್ನಬಹುದು. ಉದಾಹರಣೆಗೆ, ಬಿಸಿಲಿನಿಂದ ಕಾದಿರುವ ವಸ್ತುಗಳೊಡನೆ ಕೆಲಸ ಮಾಡಬೇಕಾದ ಸಂದರ್ಭ ಬಂದಾಗ ಆ ವಸ್ತುಗಳು ಹಿಗ್ಗಿರುವಂತೆ ಕಂಡುಬಂದಿತು ಎಂದಿಟ್ಟುಕೊಳ್ಳೋಣ. ಕಾವಿನಿಂದ ವಸ್ತುಗಳು ಹಿಗ್ಗುವುವೇ ಎಂಬುದನ್ನು ಪರೀಕ್ಷಿಸುವುದಕ್ಕಾಗಿ, ಲೋಹದ ತುಂಡೊಂದರ ಉದ್ದವನ್ನು ಕರಾರುವಾಕ್ಕಾಗಿ ಅಳೆದು, ಅನಂತರ ಅದನ್ನು ಬೆಂಕಿಯಲ್ಲಿ ಕಾಯಿಸಿ, ಅದರ ಉದ್ದವನ್ನು ಪುನಃ ಅಳೆದರೆ ಸಂದೇಹ ಪರಿಹಾರವಾಗುವುದಷ್ಟೆ. ವಾಸ್ತವವಾಗಿ ಆ ಪ್ರಯೋಗವನ್ನು ಇನ್ನೂ ವಿಸ್ತೃತವಾದ ಕೆಲವು ಪ್ರಯೋಗಗಳನ್ನೂ ಮಾಡಿ ನೋಡಿದುದರ ಫಲವಾಗಿ, ಕಾವಿನಿಂದ ವಸ್ತುಗಳು ಹಿಗ್ಗುತ್ತವೆ, ಘನ ಮತ್ತು ದ್ರವ ವಸ್ತುಗಳಿಗಿಂತ ಹೆಚ್ಚಾಗಿ ಅನಿಲಗಳು ಗಮನಾರ್ಹವಾಗಿ ಹಿಗ್ಗುವುವು ಎಂಬ ನಿಯಮಗಳೂ ತಾಪದ ಹೆಚ್ಚಳಕ್ಕೂ ಹಿಗ್ಗುವಿಕೆಗೂ ಇರುವ ಗಣಿತೀಯ ಸಂಬಂಧಗಳನ್ನು ತಿಳಿಸುವ ನಿಯಮಗಳೂ ಈಗ ನಮಗೆ ಗೊತ್ತಾಗಿವೆ.

ವಿಜ್ಞಾನ ವಿಧಾನದ ಮುಂದಿನ ಹೆಜ್ಜೆಯ ಪ್ರಸ್ತಾಪಕ್ಕೆ ಮುಂಚೆ ನೈಸರ್ಗಿಕ ನಿಯಮಗಳ ಬಗ್ಗೆ ಇನ್ನೊಂದು ವಿಷಯ ಹೇಳುವುದಿದೆ. ಜೀವಂತ ವಸ್ತುಗಳಿಗೆ ಸಂಬಂಧಿಸಿದ ಪ್ರಯೋಗಗಳನ್ನು ಮಾಡುವಾಗ ಪರಿಸ್ಥಿತಿಗಳನ್ನು ಏಕರೀತಿ ಇಟ್ಟುಕೊಳ್ಳುವುದು ಅಸಾಧ್ಯ. ಪ್ರಯೋಗಕ್ಕೆ ಒಂದೇ ಬಗೆಯ ಹತ್ತು ಲೋಹದ ತುಂಡುಗಳನ್ನು ಆಯ್ದುಕೊಳ್ಳಬಹುದು. ಆದರೆ ಒಂದೇ ಬಗೆಯ ಹತ್ತು ಕಪ್ಪೆಗಳನ್ನಾಗಲೀ ಒಂದೇ ಬಗೆಯ ಹತ್ತು ಟೊಮೆಟೊ ಗಿಡಗಳನ್ನಾಗಲೀ ಆಯ್ದುಕೊಳ್ಳುವುದಕ್ಕಾಗುವುದಿಲ್ಲ. ಅವು ಆನುವಂಶೀಯವಾಗಿ ಪಡೆದುಕೊಂಡಿರುವ ಗುಣಗಳು ಬೇರೆಬೇರೆಯಾಗಿರುತ್ತವೆ; ಅವುಗಳ ವಯಸ್ಸಿನಲ್ಲಿ ವ್ಯತ್ಯಾಸವಿರಬಹುದು ಮತ್ತು ಅವು ಹುಟ್ಟಿ ಬೆಳೆದ ಪರಿಸರಗಳು ಬೇರೆಬೇರೆಯಾಗಿರಬಹುದು. ಆದುದರಿಂದ ನೂರು ಇಲಿಗಳನ್ನು ತೆಗೆದುಕೊಂಡು ಇಲಿಗಳ ಮೇಲೆ ರಾಸಾಯನಿಕ ಒಂದರ ಪರಿಣಾಮ ಏನೆಂದು ಪರೀಕ್ಷಿಸಿದಾಗ, ನೂರು ಇಲಿಗಳ ಮೇಲೆಯೂ ಪರಿಣಾಮ ಒಂದೇ ಆಗದಿರಬಹುದು. ೮೫-೯೦ ಇಲಿಗಳ ಮೇಲೆ ಒಂದೇ ಬಗೆಯ ಪರಿಣಾಮ ಕಂಡುಬಂದರೆ ಅದು ರಾಸಾಯನಿಕದ ಪರಿಣಾಮ ಎಂಬ ನಿಯಮ ಸಿದ್ಧವಾಯಿತು ಎಂದು ತೆಗೆದುಕೊಳ್ಳಬೇಕಾಗುವುದು. ಇಂಥ ನಿಯಮಗಳನ್ನು ಸಂಖ್ಯಾಶಾಸ್ತ್ರೀಯ ನಿಯಮಗಳು (statistical laws) ಎಂದು ಕರೆಯುತ್ತಾರೆ. ಈ ನಿಯಮಗಳೂ ವಿಶ್ವಾಸಾರ್ಹವೇ.

ಈ ರೀತಿ ಅನುಭವಜನ್ಯ ನಿಯಮಗಳನ್ನು (empirical laws) ಗುರುತಿಸುವುದು ವಿಜ್ಞಾನ ವಿಧಾನದ ಮೊದಲ ಹೆಜ್ಜೆ. ಇವುಗಳಿಂದ ವಸ್ತುಪ್ರಪಂಚದ ಬಗೆಗಿನ ನಮ್ಮ ಜ್ಞಾನ ಸಾಕಷ್ಟು ವೃದ್ಧಿಯಾಗುತ್ತದೆ. ಆದರೆ ಅಷ್ಟು ಸಾಲದು. ನಾವು ಗುರುತಿಸಿದ ನಿಯಮಗಳ ವಿಷಯದಲ್ಲಿ ಒಂದು ಪ್ರಶ್ನೆ ಏಳುತ್ತದೆ. ಈ ನಿಯಮದ ಪ್ರಕಾರವೇ ನೈಸರ್ಗಿಕ ವಿದ್ಯಮಾನಗಳು ನಡೆಯುವುದೇಕೆ ? ಉದಾಹರಣೆಗೆ, ರಾಸಾಯನಿಕ ಧಾತುಗಳು ಸೇರಿಕೊಂಡು ಸಂಯುಕ್ತಗಳನ್ನುಂಟುಮಾಡುವಾಗ, ಧಾತುಗಳ ತೂಕಗಳು ಗೊತ್ತಾದ ನಿಷ್ಪತ್ತಿಯಲ್ಲಿಯೆ ಇರುವುದೇಕೆ ? ಬೇರೆ ಬೇರೆ ಪದಾರ್ಥಗಳನ್ನು ಸೇರಿಸಿ ಅಡುಗೆ ಮಾಡುವಾಗ ಯಾವುದಾದರೊಂದು ಪದಾರ್ಥ ಸ್ವಲ್ಪ ಹೆಚ್ಚಾಗುವುದು ಅಥವಾ ಕಡಿಮೆಯಾಗುವುದು ಸಾಧ್ಯವಷ್ಟೆ. ಸಕ್ಕರೆ ಸ್ವಲ್ಪ ಹೆಚ್ಚಾಗಿರುವ ಕಾಫಿ, ಉಪ್ಪು ಸಾಲದಾಗಿರುವ ಸಾರು ನಮಗೆಲ್ಲ ಗೊತ್ತು. ಆದರೆ ರಾಸಾಯನಿಕ ಸಂಯೋಗದಲ್ಲಿ ಹಾಗಾಗುವುದಿಲ್ಲ. ಎಂಟು ಗ್ರ್ಯಾಮ್ ಆಕ್ಸಿಜನ್ನಿನೊಂದಿಗೆ ೧.೦೦೮ ಗ್ರಾಂ. ಹೈಡ್ರೋಜನ್ ಸೇರಿಕೊಂಡು ನೀರು ಆಗುತ್ತದೆ. ಸ್ವಲ್ಪ ಹೆಚ್ಚಿಗೆ ಹೈಡ್ರೋಜನ್ ಒದಗಿಸಿದರೆ ೧.೦೦೮ಗಿಂತ ಹೆಚ್ಚಾದುದು ಸಂಯೋಗಗೊಳ್ಳದೆ ಉಳಿದುಬಿಡುತ್ತದೆ. ಹೀಗಾಗಲು ಕಾರಣವೇನು ? ಇದಕ್ಕೆ ಉತ್ತರ ನೀಡಲು ಪ್ರತಿಭಾವಂತ ವಿಜ್ಞಾನಿ ಒಂದು ಜಾಣ ಊಹೆ ಮಾಡುತ್ತಾನೆ. ರಾಸಾಯನಿಕ ಧಾತುಗಳು ಪರಮಾಣುಗಳೆಂಬ ಅತಿ ಸೂಕ್ಷ್ಮ ಕಣಗಳಿಂದ ಆಗಿವೆ ಎಂದು ಊಹಿಸುತ್ತಾನೆ. ನೇರವಾಗಿ ನಮ್ಮ ಅನುಭವಕ್ಕೆ ಸಿಕ್ಕದಿರುವ ವಿಷಯವನ್ನು ಕುರಿತ ಅಂಥ ಊಹೆ ಪ್ರಕಲ್ಪನೆ (hypothesis) ಅನ್ನಿಸಿಕೊಳ್ಳುತ್ತದೆ. ಇದನ್ನು ಒಪ್ಪಿಕೊಂಡರೆ, ಮೇಲೆ ಕೇಳಿದ ಪ್ರಶ್ನೆಗೆ ಉತ್ತರ ಕೊಡಬಹುದು. ರಾಸಾಯನಿಕ ಸಂಯೋಗದಲ್ಲಿ ವಾಸ್ತವವಾಗಿ ಧಾತುಗಳ ಪರಮಾಣುಗಳು ಪಾಲ್ಗೊಳ್ಳುತ್ತವೆ. ಉದಾಹರಣೆಗೆ, ಎರಡು ಹೈಡ್ರೋಜನ್ ಪರಮಾಣುಗಳು ಒಂದು ಆಕ್ಸಿಜನ್ ಪರಮಾಣುವಿನೊಡನೆ ಸೇರಿಕೊಂಡು ನೀರನ್ನುಂಟು ಮಾಡುತ್ತವೆ. ಎರಡು ಹೈಡ್ರೋಜನ್ ಪರಮಾಣುಗಳ ತೂಕಕ್ಕೂ ಒಂದು ಆಕ್ಸಿಜನ್ ಪರಮಾಣುವಿನ ತೂಕಕ್ಕೂ

ಇರುವ ನಿಷ್ಪತ್ತಿ ೧.೦೦೮:೮.೦. ಆದುದರಿಂದ ನೀರಿನಲ್ಲಿ ಹೈಡ್ರೋಜನ್ ಮತ್ತು ಆಕ್ಸಿಜನ್‌ಗಳು ಈ ನಿಷ್ಪತ್ತಿಯಲ್ಲಿರುತ್ತವೆ. ಪ್ರಶ್ನೆಗೆ ಈ ರೀತಿ ಉತ್ತರ ಕೊಡುವ ಸುಸಂಬದ್ಧ ವಿವರಣೆ ಸಿದ್ಧಾಂತ (Theory) ಎನ್ನಿಸಿಕೊಳ್ಳುತ್ತದೆ. ರಾಸಾಯನಿಕ ಧಾತುಗಳು ಪರಮಾಣುಗಳಿಂದ ಆಗಿವೆ ಎಂಬ ಪ್ರಕಲ್ಪನೆ ಮತ್ತು ಅದರ ಆಧಾರದ ಮೇಲೆ ನೀಡಿದ ವಿವರಣೆ ವಿಶ್ವಾಸಾರ್ಹವಾಗುವುದು ಏಕೆಂದರೆ ಇವು ಅನುಭವಜನ್ಯ ನಿಯಮಗಳಿಗೆ ಸಕಾರಣವಾದ ವಿವರಣೆ ನೀಡುವುದರಿಂದ. ಅಷ್ಟೇ ಅಲ್ಲ, ಈ ಪ್ರಕಲ್ಪನೆ ಮತ್ತು ಸಿದ್ಧಾಂತಗಳು ಸರಿ ಎಂದಿಟ್ಟುಕೊಂಡು ವಿಚಾರ ಮಾಡಿದಾಗ ಬರುವ ತೀರ್ಮಾನಗಳೆಲ್ಲವೂ ನಿಜವೆಂದು ನಮ್ಮ ಅನುಭವಕ್ಕೆ ಬರುವುದರಿಂದ ಅವುಗಳ ವಿಶ್ವಾಸಾರ್ಹತೆ ಹೆಚ್ಚುತ್ತದೆ. ಮುಂದೆ ಎಂದಾದರೂ ಹೊಸ ವಾಸ್ತವಾಂಶಗಳು ಮತ್ತು ಹೊಸ ಅನುಭವಜನ್ಯ ನಿಯಮಗಳು ಕಂಡುಬಂದು, ಅವುಗಳಿಗೆ ಸಕಾರಣವಾದ ವಿವರಣೆ ನೀಡಲು ಈ ಪ್ರಕಲ್ಪನೆ ಮತ್ತು ಸಿದ್ಧಾಂತಗಳಿಂದ ಸಾಧ್ಯವಾಗದೆ ಹೋದರೆ ಅವುಗಳನ್ನು ಯುಕ್ತ ರೀತಿಯಲ್ಲಿ ಮಾರ್ಪಡಿಸಬೇಕಾಗುತ್ತದೆ ; ಇಲ್ಲವೇ ಅವುಗಳನ್ನು ನಿರಾಕರಿಸಿ ಹೊಸ ಪ್ರಕಲ್ಪನೆ ಮತ್ತು ಸಿದ್ಧಾಂತಗಳನ್ನು ರೂಪಿಸಬೇಕಾಗುತ್ತದೆ. ಇದು ವಿಜ್ಞಾನ ವಿಧಾನದ ಸ್ಥೂಲ ವರ್ಣನೆ. ಈ ವಿಧಾನ ತುಂಬ ಪರಿಣಾಮಕಾರಿಯಾಗಿ ಕಂಡುಬಂದಿರುವುದರಿಂದಲೇ ವಿಜ್ಞಾನವೂ ಅದನ್ನನುಸರಿಸಿ ಬಂದ ತಂತ್ರಜ್ಞಾನವೂ (technology) ಅಗಾಧವಾಗಿ ಬೆಳೆದಿರುವುದು.

ಈ ವಿಧಾನವನ್ನು ಯಶಸ್ವಿಯಾಗಿ ಬಳಸಬೇಕಾದರೆ, ಸಂಶೋಧಕ ವಸ್ತುನಿಷ್ಠ ದೃಷ್ಟಿಯನ್ನು ತಳೆಯಬೇಕಾಗುತ್ತದೆ. ಅಂದರೆ, ವಿಷಯಗಳನ್ನೂ ವಿದ್ಯಮಾನಗಳನ್ನೂ ಅವು ಹೇಗಿವೆಯೋ ಹಾಗೆಯೇ ನೋಡಬೇಕು ; ಅವು ಹೇಗಿರಲೆಂದು ನಾವು ಬಯಸುವೆವೋ ಹಾಗಿವೆ ಎಂದು ಆತ್ಮವಂಚನೆ ಮಾಡಿಕೊಳ್ಳಬಾರದು. ಇದು ಮೇಲುನೋಟಕ್ಕೆ ಕಾಣಿಸುವಷ್ಟು ಸುಲಭವಲ್ಲ. ವಸ್ತುನಿಷ್ಠ ದೃಷ್ಟಿಗೆ ಅಡ್ಡಿಬರುವ ಅನೇಕ ಅಂಶಗಳಿವೆ. ಧಾರ್ಮಿಕ ನಂಬಿಕೆಗಳು ಅಡ್ಡಿಯುಂಟುಮಾಡುತ್ತವೆ ; ಅಧಿಕಾರತೆ (authority) ದಾರ್ಶನಿಕರ ಭಾಷೆಯಲ್ಲಿ ಹೇಳುವುದಾದರೆ, 'ಆಪ್ತ ವಾಕ್ಯ' ಅಡ್ಡಿಯುಂಟುಮಾಡುತ್ತದೆ. ಬೈಬಲಿನಲ್ಲಿ ಹೇಳಿರುವ ವಿಚಾರಗಳನ್ನೂ ಅರಿಸ್ಟಾಟಲ್‌ನ ಅಧಿಕಾರವಾಣಿಯನ್ನೂ ಪ್ರಶ್ನಿಸುವ ಧೈರ್ಯ ಮಾಡಿದ ಜಿಯೋರ್ಡಿನೋ ಬ್ರೂನೋ ಎಂಬ ವಿಜ್ಞಾನಿಯನ್ನು ಜೀವಸಹಿತ ಸುಟ್ಟರು ; ಗೆಲಿಲಿಯೋ ಬಾಯಿಯಲ್ಲಿ ತಪ್ಪೊಪ್ಪಿಗೆ ಮಾತುಗಳನ್ನು ಹೇಳಿಸಿ ಅನಂತರ ಸೆರೆಯಲ್ಲಿ ಇಟ್ಟರು. ಸೃಷ್ಟಿಯ ಬಗೆಗೆ ಬೈಬಲಿನಲ್ಲಿ ಹೇಳಿರುವುದನ್ನು ಅಲ್ಲಗಳೆಯುವ ವಿಕಾಸ ಸಿದ್ಧಾಂತವನ್ನು ಡಾರ್ವಿನ್ ಮಂಡಿಸುವ ವೇಳೆಗೆ ಬರ್ಬರ ನಡವಳಿಕೆಯ ಕಾಲ ಗತಿಸಿದ್ದುದರಿಂದ ಡಾರ್ವಿನ್‌ಗೆ ದೈಹಿಕವಾಗಿ ಚಿತ್ರಹಿಂಸೆ ಮಾಡಲಿಲ್ಲ, ಮಾನಸಿಕವಾಗಿ ಚಿತ್ರಹಿಂಸೆ ಮಾಡಿದರು. ಗೆಲಿಲಿಯೊ, ಬ್ರೂನೊ ಮತ್ತು ಡಾರ್ವಿನ್ನರಿಗಿದ್ದ ದೃಢ ಮನಸ್ಸಿಲ್ಲದ ಸಾಮಾನ್ಯರು ಧರ್ಮ ಮತ್ತು ಅಧಿಕಾರತೆಗಳ ಒತ್ತಡಕ್ಕೆ ಮಣಿದು ವಸ್ತುನಿಷ್ಠ ದೃಷ್ಟಿಯನ್ನು ಕಳೆದುಕೊಳ್ಳುತ್ತಾರೆ. ಧಾರ್ಮಿಕ ನಂಬಿಕೆ ಮತ್ತು ಅಧಿಕಾರತೆಗಳಲ್ಲದೆ ವಸ್ತುನಿಷ್ಠ ದೃಷ್ಟಿಗೆ ಅಡ್ಡಿಯೊಡ್ಡುವ ಇನ್ನು ಕೆಲವು ಅಂಶಗಳೂ ಇವೆ. ಪೂರ್ವಗ್ರಹ (ಆಗಲೇ ತಳೆದಿರಬಹುದಾದ ಅಭಿಪ್ರಾಯ) ಸ್ವಪ್ರತಿಷ್ಠೆ ಮತ್ತು ಸ್ವಹಿತಾಸಕ್ತಿ ಇವು ಹೇಗೆ ಅಡ್ಡಿ ಬರುವುವೆಂಬುದು ಕಂಡಂತೆಯೇ ಇದೆ.

ಈ ಎಲ್ಲ ಅಡಚಣೆಗಳನ್ನೂ ಮೆಟ್ಟಿ ನಿಂತು, ವಸ್ತುನಿಷ್ಠ ದೃಷ್ಟಿಯನ್ನು ತಳೆದಿರುವ ಮನಸ್ಸು ಸಹಜವಾಗಿಯೇ ಮುಕ್ತ ಮನಸ್ಸು. 'ಮುಕ್ತ ಮನಸ್ಸು' ಎಂಬ ಪದಕ್ಕೆ ಅಕ್ಷರಶಃ ಅರ್ಥ ನೀಡಿ, ಎಲ್ಲ ಅಭಿಪ್ರಾಯಗಳನ್ನು ಅಂಗೀಕರಿಸುವ ಮನಸ್ಸು ಎಂದು ವ್ಯಾಖ್ಯೆ ನೀಡಿದರೆ ಅದು ಕುಹಕವಾದೀತು. ಈಗಾಗಲೇ ತಳೆದಿರುವ ನಂಬಿಕೆ ಎಷ್ಟೇ ಗಾಢವಾಗಿರಲಿ, ಅದಕ್ಕೆ ವಿರುದ್ಧವಾದ ಸಾಕ್ಷ್ಯಾಧಾರಗಳು ಸ್ಪಷ್ಟವಾಗಿ ಕಂಡುಬಂದಾಗ, ಆ ನಂಬಿಕೆಯನ್ನು ಬದಲಾಯಿಸಲು ಸಿದ್ಧವಾಗಿರುವ ಮನಸ್ಸೇ ಮುಕ್ತ ಮನಸ್ಸು. ವಸ್ತುನಿಷ್ಠ ದೃಷ್ಟಿ ಮತ್ತು ಮುಕ್ತ ಮನಸ್ಸು ವೈಜ್ಞಾನಿಕ ಮನೋಭಾವದ ಪ್ರಮುಖ ಲಕ್ಷಣಗಳು. ಆದುದರಿಂದಲೇ ಹೇರಳವಾದ ಸಾಕ್ಷ್ಯಾಧಾರಗಳಿರುವ ವೈಜ್ಞಾನಿಕ ಸಿದ್ಧಾಂತಗಳನ್ನೂ ಸಹ ವಿಜ್ಞಾನದಲ್ಲಿ ಅಂಗೀಕರಿಸುವುದು ತಾತ್ಕಾಲಿಕವಾಗಿಯೇ. ಎರಡು ಶತಮಾನಗಳಿಗಿಂತಲೂ ದೀರ್ಘಕಾಲ ಭೌತ ವಿಜ್ಞಾನದ ಊರುಗಂಬಗಳಲ್ಲಿ ಒಂದು ಎನ್ನಿಸಿಕೊಂಡಿದ್ದ ನ್ಯೂಟನ್ನನ ಗುರುತ್ವ ಸಿದ್ಧಾಂತಕ್ಕೆ ಐನ್‌ಸ್ಟೈನ್‌ರವರ ಸಾಪೇಕ್ಷತಾ ಸಿದ್ಧಾಂತ ತಿದ್ದುಪಡಿ ತಂದುದೇ ಅದನ್ನು ತೋರಿಸುತ್ತದೆ.

ವಿಜ್ಞಾನ ವಿಧಾನ ಮತ್ತು ವೈಜ್ಞಾನಿಕ ಮನೋಭಾವ ಎಂಬವು ವಿಜ್ಞಾನಕ್ಕೆ ವಿಶಿಷ್ಟವಾದುದೇನಲ್ಲ ಎಂಬುದನ್ನು ಒತ್ತಿ ಹೇಳಬೇಕು. ಸಮಾಜ ಶಾಸ್ತ್ರ, ಅರ್ಥಶಾಸ್ತ್ರ, ಪ್ರಾಕ್ತನ ಶಾಸ್ತ್ರ ಮುಂತಾದ ಶಾಸ್ತ್ರಗಳಲ್ಲಿಯೂ ವಿಶ್ವಾಸಾರ್ಹವಾದ ಜ್ಞಾನ ಬೇಕು ಎಂಬುದಾದರೆ ಈ ವಿಧಾನವನ್ನೇ ಅನುಸರಿಸಬೇಕು; ವಾಸ್ತವಾಂಶಗಳನ್ನೂ ಅವುಗಳಲ್ಲಿ ಕಂಡುಬರಬಹುದಾದ ನಿಯಮಗಳನ್ನೂ ಪುನರಾವರ್ತಿತ ಅನುಭವದ ಆಧಾರದ ಮೇಲೆ ಖಚಿತಪಡಿಸಿಕೊಳ್ಳಬೇಕು; ಅವುಗಳ ಹಿಂಬದಿಯಲ್ಲಿರಬಹುದಾದ ಕಾರಣಗಳನ್ನು ಊಹಿಸಿ ಪ್ರಕಲ್ಪನೆಗಳನ್ನು ಮಂಡಿಸಿ ಸಿದ್ಧಾಂತಗಳನ್ನು ರೂಪಿಸಬೇಕು ; ಮಾಹಿತಿಯ ಸಂಗ್ರಹವನ್ನು ಮುಂದುವರಿಸಿ, ಅವುಗಳಿಗೆ ಸಮರ್ಪಕ ವಿವರಣೆ ನೀಡುವ ಪ್ರಯತ್ನದಲ್ಲಿ ಅಗತ್ಯವಾದರೆ, ಸಿದ್ಧಾಂತಗಳನ್ನು ಮಾರ್ಪಡಿಸಲು ಸಿದ್ಧರಾಗಿರಬೇಕು. ಈ ವಿಧಾನವನ್ನನುಸರಿಸಿ ಸಂಶೋಧನೆ ನಡೆಸಲು ವಸ್ತುನಿಷ್ಠ ದೃಷ್ಟಿ ತಳೆಯಬೇಕು ; ಮುಕ್ತ ಮನಸ್ಸುಳ್ಳವರಾಗಿರಬೇಕು.

ಸ್ವದೇಶಿ–ವಿದೇಶಿ ಮೈತ್ರಿ ಇಂದಿನ ಅಗತ್ಯ: ಅಡ್ವಾಣಿ

ಇದಕ್ಕೆ ಹೇಳೋದು ಕಂಡ್ರಿ....
'ಸಯಾಮಿ ರಾಜಕರಣ' ಅಂತ.....!

ಹಾಗಾದರೆ ಈ ಸಂಶೋಧನ ವಿಧಾನಕ್ಕೆ ವಿಜ್ಞಾನ ವಿಧಾನ ಎಂಬ ಹೆಸರು ಬಂದುದೇಕೆ ? ಅದನ್ನನುಸರಿಸಲು ತಳೆಯಬೇಕಾದ ಮನೋಭಾವಕ್ಕೆ ವೈಜ್ಞಾನಿಕ ಮನೋಭಾವ ಎಂದು ಹೆಸರು ಬರಲು ಕಾರಣವೇನು ? ಬಹುಶಃ ಅದಕ್ಕೆ ಕಾರಣ, ಈ ಸಂಶೋಧನ ವಿಧಾನವನ್ನು ಹೆಚ್ಚು ಕಡಿಮೆ ಕರಾರುವಾಕ್ಕಾಗಿ ಅನುಷ್ಠಾನಕ್ಕೆ ತರಲು ಸಾಧ್ಯವಾಗಿರುವುದು ನಿಸರ್ಗ ವಿಜ್ಞಾನಗಳು ಎನ್ನಿಸಿಕೊಂಡಿರುವ ಭೌತ ಹಾಗೂ ರಸಾಯನ ವಿಜ್ಞಾನಗಳಲ್ಲಿ ಮತ್ತು ಜೀವವಿಜ್ಞಾನದ ವಿವಿಧ ಶಾಖೆಗಳಲ್ಲಿ. ಅಲ್ಯೂಮಿನಿಯಮ್ ಮತ್ತು ತಾಮ್ರಗಳ ಪೈಕಿ ಯಾವುದು ಇನ್ನೊಂದಕ್ಕಿಂತ ಉತ್ತಮ ವಿದ್ಯುದ್ವಾಹಕ ? ಉಪ್ಪಿನ ಹರಳುಗಳು ಯಾವ ಬಗೆಯ ಹರಳುಗಳು ? ಹುಣಿಸೆ ಮರ ಯಾವ ಗಣಕ್ಕೆ ಸೇರಿದ ಸಸ್ಯ ? ಇವೇ ಮುಂತಾದ ಪ್ರಶ್ನೆಗಳಿಗೆ ಉತ್ತರ ಕೊಡುವಾಗ ವಸ್ತುನಿಷ್ಠವಾಗಿರಲು ಯಾವ ಬಗೆಯ ಅಡ್ಡಿಯೂ ಇಲ್ಲ. ಮಾನವಿಕ ಶಾಸ್ತ್ರಗಳಲ್ಲಿ ಏಳುವ ಪ್ರಶ್ನೆಗಳಿಗೆ ಉತ್ತರ ಕೊಡುವಾಗ ಮಾನವ ಸಹಜವಾದ ದೌರ್ಬಲ್ಯಗಳು (ಧಾರ್ಮಿಕ ನಂಬಿಕೆ, ಸ್ವಹಿತಾಸಕ್ತಿ ಇತ್ಯಾದಿ) ವಸ್ತುನಿಷ್ಠೆಗೆ ಅಡ್ಡಿಯುಂಟು ಮಾಡುತ್ತವೆ. ಈ ಕಾರಣದಿಂದಾಗಿ ನಿಸರ್ಗ ವಿಜ್ಞಾನಗಳಲ್ಲಿ ಕೆಲಸ ಮಾಡುವವರು, ಕೊನೆಯ ಪಕ್ಷ ವಿಜ್ಞಾನದ ನಾಲ್ಕು ಗೋಡೆಗಳ ಒಳಗಡೆಯ ಕೆಲಸದಲ್ಲಿಯಾದರೂ ವಿಜ್ಞಾನ ವಿಧಾನವನ್ನು ಕರಾರುವಾಕ್ಕಾಗಿ ಅನುಸರಿಸುವುದನ್ನೂ ವೈಜ್ಞಾನಿಕ ದೃಷ್ಟಿ ತಳೆದಿರುವುದನ್ನೂ ಯಶಸ್ವಿಯಾಗಿ ಅನುಷ್ಠಾನಕ್ಕೆ ತಂದಿದ್ದಾರೆ. ಈ ಕಾರಣದಿಂದ ಅದಕ್ಕೆ 'ವೈಜ್ಞಾನಿಕ' ಎಂಬ ಗುಣವಾಚಕ ಅಂಟಿಕೊಂಡಿದೆಯೇ ವಿನಾ ಅವು ವಿಜ್ಞಾನಕ್ಕೆ ಸೀಮಿತವಾದವು ಎಂದಲ್ಲ.

ವಾಸ್ತವವಾಗಿ ವಿಜ್ಞಾನಕ್ಕೆ ಸಂಬಂಧಿಸಿರುವ ವೃತ್ತಿಗಳಲ್ಲಿರುವ ಅನೇಕರು ತಮ್ಮ ವೃತ್ತಿಯಲ್ಲಿ ಮಾತ್ರ ವೈಜ್ಞಾನಿಕವಾಗಿರುವುದೂ ವೈಯಕ್ತಿಕ ಜೀವನದಲ್ಲಿ ಮೂಢನಂಬಿಕೆಗಳಿಗೆ ಅಂಟಿಕೊಂಡಿರುವುದೂ ಕಂಡುಬರುತ್ತದೆ. ವೈಜ್ಞಾನಿಕ ಶಿಕ್ಷಣಕ್ಕೆ ಒಳಗಾಗದೆ ಇರುವ ಅನೇಕರು ದೈನಂದಿನ ಜೀವನದಲ್ಲಿ ವೈಜ್ಞಾನಿಕತೆಯನ್ನು ಮೆರೆದಿದ್ದಾರೆ. ಡಾರ್ವಿನ್ನನ ವಿಕಾಸ ಸಿದ್ಧಾಂತವನ್ನು ವಿಜ್ಞಾನ ವಲಯಗಳಲ್ಲಿಯೂ ಹೊರಗಡೆಯೂ ಪ್ರಚಾರ ಮಾಡುವುದರಲ್ಲಿ ವಿಶೇಷ ಯಶಸ್ಸು ಗಳಿಸಿದ ಥಾಮಸ್ ಹೆನ್ರಿ ಹಕ್ಸ್‌ಲೀ ಒಮ್ಮೆ ಹೇಳಿರುವಂತೆ ''ವಿಜ್ಞಾನವೆಂಬುದು ಇನ್ನೇನೂ ಅಲ್ಲ; ಕೇವಲ ಸುಶಿಕ್ಷಿತ ಮತ್ತು ವ್ಯವಸ್ಥಿತ ಪ್ರಪಂಚ ಜ್ಞಾನ.''

ನಮ್ಮ ಸಂವಿಧಾನವನ್ನು ರಚಿಸಿದ ಪ್ರಾಜ್ಞರು ಹೇಳಿರುವ ವೈಜ್ಞಾನಿಕ ಮನೋವೃತ್ತಿ ಎಂಬುದೇನಿದ್ದರೂ ವೈಜ್ಞಾನಿಕ ಮನೋಭಾವ ಉಳ್ಳವರಾಗಿದ್ದು ಸಮಸ್ಯೆಗಳನ್ನು ಎದುರಿಸಬೇಕಾಗಿ ಬಂದಾಗ ಸಮಸ್ಯೆಗಳ ಪರಿಹಾರಕ್ಕೆ ಸಹಜವಾಗಿ ವಿಜ್ಞಾನ ವಿಧಾನವನ್ನನುಸರಿಸುವ ಪ್ರವೃತ್ತಿ. ಈ ಮನಃಪ್ರವೃತ್ತಿಯನ್ನು ಬೆಳೆಸಿಕೊಳ್ಳುವುದು ಪ್ರತಿಯೊಬ್ಬ ಪ್ರಜೆಯ ಕರ್ತವ್ಯ ಎಂದು ವಿಧಿಸಿದ್ದಾರೆ.

**ಪ್ರೊ|| ಜಿ. ಆರ್. ಲಕ್ಷ್ಮಣರಾವ್**
'ಮೈತ್ರಿ', ೧೨ನೇ ಮುಖ್ಯರಸ್ತೆ, ಸರಸ್ವತಿಪುರಂ
ಮೈಸೂರು - ೫೭೦ ೦೦೯




# ದಾಳಿಗೆ ಒಳಗಾದಾಗ

ರಾಷ್ಟ್ರೀಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಮಂಡಳಿಯು ಇತಿಹಾಸ ಪಠ್ಯ ಪುಸ್ತಕಗಳನ್ನು ಹಿಂದುತ್ವ ವಾದದ ಮೂಗಿನ ನೇರಕ್ಕೆ ಸರಿಯಾಗಿ ತಿದ್ದುತ್ತಿರುವ ಇಂದಿನ ಸಂದರ್ಭವನ್ನು ಗೀತಾ ಹರಿಹರನ್‌ರು 'In Times of Siege' ಎಂಬ ತಮ್ಮ ಇಂಗ್ಲಿಷ್ ಕಾದಂಬರಿಯಲ್ಲಿ ಕಲಾತ್ಮಕವಾಗಿ ಸೆರೆಹಿಡಿಯುವ ಕಾಯಕವನ್ನು ಯಶಸ್ವಿಯಾಗಿ ನೆರವೇರಿಸಿದ್ದಾರೆ.

ಡಾ|| ಶಿವಮೂರ್ತಿ ದೆಹಲಿಯ ಕಸ್ತೂರಿಬಾ ಗಾಂಧಿ ಮುಕ್ತ ವಿಶ್ವವಿದ್ಯಾಲಯದ ಮಧ್ಯಕಾಲೀನ ಇತಿಹಾಸದ ಒಬ್ಬ ಪ್ರಾಧ್ಯಾಪಕರು. ಅವರು ಬಸವಣ್ಣನನ್ನು ಕುರಿತು ಬಿ. ಎ. ತರಗತಿಗೆ ಬರೆದ ಇತಿಹಾಸದ ಒಂದು ಪಠ್ಯ ಇದ್ದಕ್ಕಿದ್ದ ಹಾಗೆ ವಿವಾದಕ್ಕೊಳಗಾಗುತ್ತದೆ.

''ಗುರುವಿಗೆ ಪಾಠ ಕಲಿಸುವವರಾರು ? – ಇತಿಹಾಸದ ತಿರುಚುವಿಕೆಯ ವಿರುದ್ಧ ಪ್ರತಿಭಟನೆ'' ಎಂಬ ಶೀರ್ಷಿಕೆಯನ್ನು ಮುಖಪುಟದಲ್ಲಿ ಹೊತ್ತ 'ಕರೆಂಟ್' ಪತ್ರಿಕೆಯ ಒಂದು ಪ್ರತಿ ಡಾ|| ಮೂರ್ತಿಯ ಮನೆಯೊಳಗೆ ಎಸೆಯಲಾಗಿರುತ್ತದೆ. ಅದರಲ್ಲಿ 'ಮುಕ್ತ ವಿಶ್ವ ವಿದ್ಯಾಲಯದ ಹಿರಿಯ ಪ್ರಾಧ್ಯಾಪಕರು ಇತಿಹಾಸದ ಪಠ್ಯದಲ್ಲಿ ತಮ್ಮ ತಾತ್ವಿಕ ಪೂರ್ವಾಗ್ರಹಗಳನ್ನು ಒಳತೂರಿಸಿರುವರೆ'ಂದು ಆಪಾದಿಸಲಾಗಿರುತ್ತದೆ.

ಸಂಪ್ರದಾಯಶೀಲ ಸಂಘಟನೆಯಾದ 'ಇತಿಹಾಸ ಸುರಕ್ಷಾ ಮಂಚ್' ನಮ್ಮ ದಿವ್ಯ ಮತ್ತು ಭವ್ಯ ಇತಿಹಾಸದ ಅವಹೇಳನ ಅಂತ್ಯಗೊಳ್ಳಲಿ ಎಂದು ಕರೆಕೊಟ್ಟಿದೆ. ಸಂಘಟನೆಯ ಮುಖಂಡರಲ್ಲಿ ಒಬ್ಬರಾದ ತ್ರಿಪಾಠಿಯವರು ಸಹಿ ಮಾಡಿರುವ ಹೇಳಿಕೆಯಲ್ಲಿ ''ಸ್ವಾತಂತ್ರ್ಯಾನಂತರದ ಐವತ್ತು ವರ್ಷಗಳಾದ ಮೇಲೂ ಭಾರತೀಯ ಇತಿಹಾಸಕಾರರು ಪಾಶ್ಚಾತ್ಯ ಸಿದ್ಧಾಂತಗಳಿಂದ ಪೂರ್ವಾಗ್ರಹ ಪೀಡಿತರಾಗಿ ನಮ್ಮ ಹಿಂದು ದೇವಾಲಯಗಳು ಮತ್ತು ಅರ್ಚಕರಲ್ಲಿ ನಮಗಿರುವ ಹೆಮ್ಮೆಯನ್ನು ಅವಹೇಳನ ಮಾಡುತ್ತಿದ್ದಾರೆ. ನಮ್ಮ ದೇಶದ ಮೇಲೆ ದಾಳಿ ಮಾಡಿದ ಮುಸ್ಲಿಮರಿಗಿಂತ ಈ ಇತಿಹಾಸಕಾರರು ಯಾವ ರೀತಿ ಭಿನ್ನ? ಪ್ರತಿಯೊಬ್ಬ ಶಾಲಾ ವಿದ್ಯಾರ್ಥಿಯೂ ಘಜನಿಯಿಂದ ಘೋರಿವರೆಗಿನ ಎಲ್ಲ ಮಹಮದರ ಕಥೆಗಳನ್ನು ಬಲ್ಲವರಾಗಿದ್ದಾರೆ. ಮುಸ್ಲಿಂ ದಾಳಿಕೋರರು ಯಾವಾಗಲೂ ಹಿಂದು ಹಿರಿಮೆ ಮತ್ತು ನಾಗರಿಕತೆಯ ಮೇಲೆ ದಾಳಿ ಮಾಡಿದರು. ಅದೇ ರೀತಿ ಈ ಆಧುನಿಕ ದಾಳಿಕೋರರು ಇತಿಹಾಸಕಾರರಂತೆ ನಟಿಸುತ್ತಾ ಕಾಲನ ಪರೀಕ್ಷೆಯಲ್ಲಿ ಉಳಿದು ಬಂದ ನಮ್ಮ ಸನಾತನ ಸಂಪ್ರದಾಯಗಳು ಮತ್ತು ಜೀವನ ವಿಧಾನಗಳನ್ನು ನಾಶಗೊಳಿಸಲು ಯತ್ನಿಸುತ್ತಿದ್ದಾರೆ. ಆದರೆ ಈಗ ಅವರು ನಮ್ಮನ್ನು ಗೆಲ್ಲಲಾರರು. ನಮ್ಮ ಹಿಂದು ಪರಂಪರೆಯ ಶ್ರೇಷ್ಠ ಇತಿಹಾಸವು ವಿಶ್ವಕ್ಕೆ ಮಾದರಿಯಾಗಬಲ್ಲದೆಂಬುದನ್ನು ನಾವು ಖಂಡಿತ ತೋರಿಸಿಕೊಡುತ್ತೇವೆ.'' – ಹೀಗೆ ಪತ್ರಿಕೆ ಹಿಂದುತ್ವವಾದಿ ಸಂಘಟನೆಯೊಂದರ ಹೇಳಿಕೆಯನ್ನು ವರದಿ ಮಾಡುತ್ತಾ ಸಾಗುತ್ತದೆ.

ಶೈಕ್ಷಣಿಕ ವಲಯದ ಸಮಕಾಲೀನ ಸಂದರ್ಭದ ಸೂಕ್ಷ್ಮಾತಿಸೂಕ್ಷ್ಮಗಳನ್ನು ಗೀತಾ ಹರಿಹರನ್ ತಮ್ಮ ಮೊನಚಾದ ಲೇಖನಿಯಿಂದ ಚುಚ್ಚಿ ಬಯಲು ಮಾಡುತ್ತಾರೆ. ಮಧ್ಯ ಕಾಲೀನ ಭಾರತದ ಐತಿಹಾಸಿಕ ವ್ಯಕ್ತಿ ಬಸವಣ್ಣ ಈ ಇತಿಹಾಸ ಪಠ್ಯದ ಲೇಖಕರ ದೃಷ್ಟಿಯಲ್ಲಿ ಒಬ್ಬ ಧೀರೋದಾತ್ತ ಸಾಮಾಜಿಕ, ಧಾರ್ಮಿಕ ಕ್ರಾಂತಿಪುರುಷ ಎಂಬ ಮಾತು ಅವರ ಸಂಪ್ರದಾಯವಾದಿ ಸಹೋದ್ಯೋಗಿಗಳಿಗೆ ಹಿಡಿಸುವುದಿಲ್ಲ. ಅವರ ದೃಷ್ಟಿಯಲ್ಲಿ ಬಸವಣ್ಣ ಒಬ್ಬ ಅವತಾರ ಪುರುಷ, ಮಹಾಸಂತ, ಕವಿ ಮತ್ತು ಗಾಯಕ. ವಿಶ್ವ ವಿದ್ಯಾಲಯದಲ್ಲಿ ಪ್ರಾಧ್ಯಾಪಕ ಡಾ|| ಮೂರ್ತಿಯವರನ್ನು ಕೆಲವರು ಬೆಂಬಲಿಸಿದರೆ ಮತ್ತೆ ಕೆಲವರು ವಿರೋಧಿಸುತ್ತಾರೆ.

ಡಾ|| ಮೂರ್ತಿ ಕಳೆದ ಐದು ವರ್ಷಗಳಿಂದ ವಿವಾದ ರಹಿತವಾದ ತಮ್ಮ ಪಠ್ಯ ಈಗೇಕೆ ಒಮ್ಮೆಗೇ ವಿವಾದಕ್ಕೆ ಕಾರಣವಾಯಿತು ಎಂದು ಚಿಂತಿಸುತ್ತಾ ಇನ್ನೊಮ್ಮೆ ಆ ಪುಟಗಳ ಮೇಲೆ ಕಣ್ಣಾಡಿಸುತ್ತಾರೆ.

ಕಲ್ಯಾಣದ ಭಂಡಾರಿಯಾದ ಬಸವಣ್ಣ, ಕೇವಲ ಆರ್ಥಿಕ ಮಂತ್ರಿಯಷ್ಟೇ ಆಗಿರಲಿಲ್ಲ. ಅವನಿಗೆ ದೀನ ದಲಿತರ ಬಗ್ಗೆ ಅಪಾರ ಅನುಕಂಪವಿತ್ತು. ಅವನಿಗೆ ಸಾಮಾಜಿಕ ನ್ಯಾಯವನ್ನು ಒದಗಿಸುವ ಸಂಕಲ್ಪ ಮತ್ತು ಮುನ್ನೋಟಗಳಿದ್ದುವು. ಅವನು ಧರ್ಮಶಾಸ್ತ್ರಗಳು ಹೇಳುವುದನ್ನು ಏಕೆ, ಹೇಗೆ ಎಂದು ಪ್ರಶ್ನಿಸಿದ. ಅವನ ಸುತ್ತ ಅನೇಕ ಸಂತರು, ಕ್ರಾಂತಿಕಾರರು ನೆರೆದರು. ಅವರಲ್ಲಿ ಮೇಲು ಕೀಳು ಎನ್ನದೆ ಎಲ್ಲ ಜಾತಿಯ ಸ್ತ್ರೀ ಪುರುಷರಿದ್ದರು. ಮಡಿವಾಳ, ಕುಂಬಾರ, ಒಕ್ಕಲಿಗ, ಅಂಬಿಗ, ಚಮ್ಮಾರ, ಸೂಳೆ, ಗೃಹಿಣಿ, ಬ್ರಾಹ್ಮಣ ಇತ್ಯಾದಿ ಎಲ್ಲರೂ ಶಿವನ ಆರಾಧಕರಾಗಿ ಅನುಭವ ಮಂಟಪದಲ್ಲಿ ಒಟ್ಟುಗೂಡಿ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದರು. ಅವರೆಲ್ಲಾ ಕಾಯಕ ನಿರತರಾಗಿದ್ದರು. ತಮ್ಮ ಅನಿಸಿಕೆಗಳನ್ನು ಅಲ್ಲಿಯ ಜನಸಾಮಾನ್ಯರ ಭಾಷೆಯಾದ ಕನ್ನಡದಲ್ಲಿ, ವಚನ ರೂಪದಲ್ಲಿ ನಿರೂಪಿಸತೊಡಗಿದರು.

ಭಿನ್ನ ವೃತ್ತಿಗಳ ಜನರನ್ನು ಪ್ರತ್ಯೇಕವಾಗಿ ಜಾತಿಯ ಗೂಡುಗಳಲ್ಲಿ ಬಂಧಿಸಿಟ್ಟಿದ್ದ ಜಾತಿ ವ್ಯವಸ್ಥೆ ಶಿವಭಕ್ತರ ಹೊಸ ಚಳವಳಿಯಿಂದ ಮುರಿದುಹೋಗತೊಡಗಿತು. ಜಡ್ಡುಗಟ್ಟಿದ್ದ ಧಾರ್ಮಿಕ, ಸಾಮಾಜಿಕ ಆಚರಣೆಗಳೂ ಕಾಲು ಕೀಳತೊಡಗಿದುವು.

ಈ ಹಿನ್ನೆಲೆಯಲ್ಲಿ ಕೆಳಜಾತಿಯ ವರನು ಮೇಲು ಜಾತಿಯ ಕನ್ಯೆಯ ಕೈಯಿಡಿದ ವಿವಾಹ ಸಂಬಂಧ ಕಲ್ಯಾಣಕ್ಕೆ ಧೂಮಕೇತುವಿನಂತೆ ಅಪ್ಪಳಿಸಿತು. ಬಸವಣ್ಣನ ಆಂದೋಲನದಿಂದ ಕೋಪೋದ್ರೇಕಗೊಂಡಿದ್ದ ಸಂಪ್ರದಾಯವಾದಿಗಳಿಗೆ ಇದು ಒಂದು ದೊಡ್ಡ ಆಘಾತವಾಗಿ ಪರಿಣಮಿಸಿತು.

ಪುರೋಹಿತಶಾಹಿಯ ಒತ್ತಡಕ್ಕೆ ಮಣಿದ ರಾಜ ಬಿಜ್ಜಳ ಈ ಮದುವೆಗೆ ಪ್ರೇರಕರಾದವರನ್ನು ಉಗ್ರಶಿಕ್ಷೆಗೆ ಒಳಪಡಿಸಿದ. ವಧುವರರ ತಂದೆಯರನ್ನು ಕುದುರೆಗೆ ಕಟ್ಟಿ ಕಲ್ಯಾಣದ ಬೀದಿಗಳಲ್ಲಿ ಎಳೆದಾಡಿಸಲಾಯಿತು. ನಂತರ ಅವರಿಗೆ ತಲೆದಂಡ ವಿಧಿಸಲಾಯಿತು. ಬಸವಾನುಯಾಯಿಗಳು ಹೆಸರಿಗೆ ಮಾತ್ರ ವೀರಶೈವರಾಗಿರಲಿಲ್ಲ, ಅವರು ತಿರುಗಿಬಿದ್ದರು; ಕಲ್ಯಾಣನಗರ ಬೆಂಕಿ ಹತ್ತಿ ಉರಿಯಿತು. ಬಸವಣ್ಣ ಕಲ್ಯಾಣದಿಂದ ಕೂಡಲ ಸಂಗಮದತ್ತ ಸಾಗಿ ಕಣ್ಮರೆಯಾದ. ರಾಜ ಬಿಜ್ಜಳನ ಕೊಲೆಯಾಯಿತು.

ವೀರಶೈವ ಧರ್ಮ ಮುಂದುವರಿಯಿತಾದರೂ ಅದು ಕೈಗೆತ್ತಿಕೊಂಡಿದ್ದ ಸಾಮಾಜಿಕ ಬದಲಾವಣೆಯ ಆಂದೋಲನ ಅಲ್ಲಿಗೆ ಕೊನೆಯಾಯಿತು. ಸ್ಥಾವರವನ್ನು ಜಂಗಮಗೊಳಿಸಲು ಪ್ರಾರಂಭವಾದ ಚಳವಳಿ ಜಂಗಮವನ್ನೇ ಸ್ಥಾವರಗೊಳಿಸಿತು.

ಆದರೆ ಬಸವಣ್ಣನ ಶಕ್ತಿಶಾಲಿ ಚಿಂತನೆಗಳು, ಸುಂದರ ವಾಕ್ಪ್ರತಿಮೆಗಳು, ಹೃದಯದಾಳದಿಂದ ಮೂಡಿಬಂದ ಪ್ರಶ್ನಾವಳಿಗಳು ಎಂಟುನೂರು ವರ್ಷಗಳ ನಂತರವೂ ತಮ್ಮ ಜೀವಂತಿಕೆಯನ್ನು ಉಳಿಸಿಕೊಂಡು ಇಂದಿಗೂ ಪ್ರಸ್ತುತವಾಗಿವೆ. ಇದು ಪಠ್ಯದ ಸಾರಾಂಶ. ಇದರಲ್ಲಿ ತಪ್ಪೇನೂ ಇಲ್ಲವೆಂದು ಡಾ|| ಮೂರ್ತಿಗೆ ಖಾತ್ರಿಯಾಗುತ್ತದೆ.

ಮರುದಿನ ಡೀನ್ ಡಾ|| ಆರ್ಯ ಮತ್ತು ವಿಭಾಗದ ಮುಖ್ಯ ಡಾ|| ಶರ್ಮರೊಡನೆ ಸಮಾಲೋಚನೆಗೆ ಕುಳಿತ ಡಾ|| ಮೂರ್ತಿ ತಮ್ಮನ್ನು ತಾವು ಸಮರ್ಥಿಸಿಕೊಳ್ಳುತ್ತಾರೆ. ಪಠ್ಯ ಪುಸ್ತಕದಲ್ಲಿ ವಿವಾದಗಳು ಬೇಡ ಎಂದು ಶರ್ಮ ಹೇಳಿದರೆ, ನಿಧಾನವಾಗಿ ಯೋಚಿಸಿ ಅಂತಿಮ ತೀರ್ಮಾನಕ್ಕೆ ಬನ್ನಿ ಎಂದು ಆರ್ಯ ಹೇಳುತ್ತಾರೆ.

ಮೂರ್ತಿ ವಿಶ್ವವಿದ್ಯಾಲಯದ ತನ್ನ ಕೋಣೆಯಲ್ಲಿ ಕುಳಿತು ಕಾಗದ ಪತ್ರಗಳನ್ನು ಪರಿಶೀಲಿಸುತ್ತಿದ್ದಾಗ ಪ್ರತಿಭಟನಕಾರರ ಒಂದು ಗುಂಪು ಅವನ ಕೋಣೆಯತ್ತ ಧಾವಿಸಿ ಬರುತ್ತದೆ. ಮೂರ್ತಿಯ ಸಹೋದ್ಯೋಗಿ ಗೆಳೆಯನೊಬ್ಬ ಅವರನ್ನು ಹಿತ್ತಿಲ ಬಾಗಿಲಿನಿಂದ ಹೊರಗೆ ಕರೆದುಕೊಂಡು ಹೋಗಿ ಕಾರಿನಲ್ಲಿ ಮನೆಗೆ ಕಳಿಸುತ್ತಾನೆ. ನಂತರ ಆ ದಾಳಿಕೋರರ ಗುಂಪು ಅವರ ಕೋಣೆಯಲ್ಲಿ ಒಳನುಗ್ಗಿ ಕುರ್ಚಿ ಮೇಜುಗಳನ್ನು ಧ್ವಂಸಮಾಡಿ ಪುಸ್ತಕಗಳನ್ನು ಫೈಲುಗಳನ್ನು ಹರಿದು ಚಲ್ಲಾಪಿಲ್ಲಿ ಮಾಡಿ ಹೋಗುತ್ತದೆ.

ಮೂರ್ತಿಯವರ ಜೀವನದಲ್ಲಿ ಈ ಬೆಳವಣಿಗೆ ಬಹು ಬಿಕ್ಕಟ್ಟಿನ ಸಮಯವಾಗಿರುತ್ತದೆ. ಅವರ ಹೆಂಡತಿ ರೇಖಾ ಮಗಳನ್ನು ನೋಡಲು ಅಮೆರಿಕಾಕ್ಕೆ ಹೋಗಿರುತ್ತಾಳೆ. ಅವರ ಗೆಳೆಯರ ಮಗಳಾದ ಮೀನಾ ಎಂಬ ವಿದ್ಯಾರ್ಥಿನಿ ಅಪಘಾತವೊಂದರಲ್ಲಿ ಕಾಲು ಮುರಿದು ಅವರ

ಬಿ. ವಿ. ವೀರಭದ್ರಪ್ಪ

ಮನೆಯಲ್ಲಿ ಆಶ್ರಯಪಡೆದಿರುತ್ತಾಳೆ. ಈ ಕಾದಂಬರಿಯಲ್ಲಿ ಮೂರ್ತಿಯ ನಂತರ ಬಹು ಮುಖ್ಯಪಾತ್ರವೆಂದರೆ ಮೀನಾ. ಅವಳು ಕಾಲಿಗೆ ಪ್ಲಾಸ್ಟರ್ ಹಾಕಿಸಿಕೊಂಡು ಕೋಣೆಯೊಳಗೇ ಊರುಗೋಲುಗಳ ಸಹಾಯದಿಂದ ನಡೆಯಬೇಕಾಗಿದ್ದರೂ ತನ್ನ ಅದ್ಭುತ ಕ್ರಿಯಾಶಕ್ತಿಯಿಂದ ದೂರವಾಣಿಯ ಮೂಲಕವೇ ತನ್ನ ಗೆಳೆಯ ಗೆಳತಿಯರನ್ನು ಸಂಪರ್ಕಿಸಿ ಡಾ|| ಮೂರ್ತಿಯವರ ಬೆಂಬಲಕ್ಕೆ ಸಿದ್ಧವಾಗುತ್ತಾಳೆ.

ಇತಿಹಾಸ ಸುರಕ್ಷಾ ಮಂಚವು ಮೂರು ಬೇಡಿಕೆಗಳನ್ನು ಮುಂದಿಡುತ್ತದೆ: ೧. ಅವರ ಭಾವನೆಗಳನ್ನು ಆಘಾತಗೊಳಿಸಿದುದಕ್ಕಾಗಿ ಲೇಖಕರು ಮತ್ತು ವಿಭಾಗದ ಮುಖ್ಯರು ಪ್ರತ್ಯೇಕವಾಗಿ ಕ್ಷಮಾಪಣೆ ಕೇಳಬೇಕು. ೨. ಪಠ್ಯ ಭಾಗವನ್ನು ಎಲ್ಲ ವಿದ್ಯಾರ್ಥಿಗಳು, ಅಧ್ಯಯನ ಕೇಂದ್ರಗಳು ಮತ್ತು ಗ್ರಂಥಾಲಯಗಳಿಂದ ಹಿಂದಕ್ಕೆ ಪಡೆಯಬೇಕು. ೩. ಪುನರ್ ರಚಿತ ಪಠ್ಯವನ್ನು ಮುದ್ರಣಕ್ಕೆ ಒಪ್ಪಿಸುವ ಮೊದಲು ಇತಿಹಾಸ ಸುರಕ್ಷಾ ಮಂಚದ ಅನುಮತಿಗೆ ಸಮರ್ಪಿಸಬೇಕು. ಡಾ|| ಮೂರ್ತಿ 'ನಾನು ಕ್ಷಮಾಪಣೆ ಕೇಳುವುದಿಲ್ಲ' ಎಂದು ಸ್ಪಷ್ಟವಾಗಿ ಹೇಳಿಬಿಡುತ್ತಾರೆ. ಸುರಕ್ಷಾ ಮಂಚವು ಇತಿಹಾಸ ತಜ್ಞರಿಂದ ಕೂಡಿರದೆ ಆಳುವ ವರ್ಗವನ್ನು ಓಲೈಸುವ ಮತಾಂಧ ಹಿಂದುತ್ವವಾದಿಗಳ ಒಂದು ಘಟಕವಾಗಿರುತ್ತದೆ.

ಮೂರ್ತಿಗೆ ದೂರವಾಣಿ ಮೂಲಕ, ಅಂಚೆ ಪತ್ರಗಳ ಮೂಲಕ ಬೆದರಿಕೆಯ ಅನಾಮಧೇಯ ಕರೆಗಳು ಲಗ್ಗೆ ಇಡುತ್ತವೆ. ಅಂತಹ ವೇಳೆಯಲ್ಲಿ ಅವನಿಗೆ ಕಾಲು ಮುರಿದು ಮೂಲೆಯಲ್ಲಿ ಕುಳಿತ ಮೀನಾಳಿಂದ ಅದ್ಭುತ ನೈತಿಕ ಬೆಂಬಲ ದೊರೆಯುತ್ತದೆ. ದೂರವಾಣಿಯ ಮೂಲಕ ಕ್ರಿಯಾಶೀಲ ವಿದ್ಯಾರ್ಥಿ ಮುಖಂಡರನ್ನು ಸಂಪರ್ಕಿಸಿ ಒಂದು ಬೃಹತ್ ಕಾರ್ಯಕ್ರಮವನ್ನೇ ಹಮ್ಮಿಕೊಳ್ಳುತ್ತಾಳೆ. ಅವಳ ಕೋಣೆಯೇ ಅವಳ ಕ್ರಿಯಾಶೀಲ ಚಟುವಟಿಕೆಗಳ ಕಛೇರಿಯಾಗಿ ರೂಪಾಂತರಗೊಳ್ಳುತ್ತದೆ.

ಇನ್ನೊಂದು ಕಡೆ ಅನೇಕ ಶಿಕ್ಷಣ ತಜ್ಞರು, ಪ್ರಖ್ಯಾತ ಇತಿಹಾಸಕಾರರು ಸಭೆ ಸೇರಿ ವಿಶ್ವವಿದ್ಯಾಲಯವು 'ಮಧ್ಯಕಾಲೀನ ಸಮಾಜ ಸುಧಾರಕ ಬಸವಣ್ಣನನ್ನು ಕುರಿತ ಬಿ. ಎ. ಪಠ್ಯವನ್ನು ತಾತ್ಕಾಲಿಕವಾಗಿಯಾದರೂ ಹಿಂತೆಗೆದುಕೊಂಡ ಕ್ರಮವನ್ನು ತೀಕ್ಷ್ಣವಾಗಿ ವಿಮರ್ಶೆಗೆ ಒಳಪಡಿಸುತ್ತಾರೆ. ಇತಿಹಾಸ ಸುರಕ್ಷಾ ಮಂಚದ ಗೂಂಡಾಗಿರಿಯನ್ನು ಎಲ್ಲೂ ಪ್ರಸ್ತಾಪಿಸದೆ ವಿಶ್ವವಿದ್ಯಾಲಯ ಮರು ವಿಮರ್ಶೆ ಮಾಡಲು ಪಠ್ಯವನ್ನು ಹಿಂತೆಗೆದುಕೊಂಡ ಕ್ರಮದಲ್ಲಿ ಆಳುವ ಪ್ರಭುಗಳ ಕೈವಾಡವಿರುವುದನ್ನು ಅವರು ಪ್ರಸ್ತಾಪಿಸುತ್ತಾರೆ. ಇದರ ಹಿಂದೆ ಹಿಂದುತ್ವವಾದಿಗಳು ಸದಾ ಪ್ರತಿಪಾದಿಸುವ ಭಾರತೀಯ ಸುವರ್ಣಯುಗ ಪರಂಪರೆಗೆ ಭಂಗ ತರುವುದೆಂಬ ಭ್ರಮಾತ್ಮಕ ಕಲ್ಪನೆಯೇ ಕಾರಣವೆಂದು ಅವರು ಒತ್ತಿ ಹೇಳುತ್ತಾರೆ. ಗತಕಾಲದ ಇತಿಹಾಸದಲ್ಲಿ ನಡೆದುಹೋದ ಉತ್ತಮ ಘಟನಾವಳಿಗಳಿಂದ ಸ್ಫೂರ್ತಿ ಪಡೆಯಲು ಮತ್ತು ಕೆಟ್ಟ ಸಂಪ್ರದಾಯಗಳಿಂದ ಆದ ದುಷ್ಪರಿಣಾಮಗಳಿಂದ ಪಾಠ ಕಲಿಯಲು ಇತಿಹಾಸವನ್ನು ಅಭ್ಯಾಸ ಮಾಡಬೇಕೆಂಬುದು ಅವರ ಧೋರಣೆಯಾಗಿರುತ್ತದೆ.

ಇದರಿಂದ ಮೂರ್ತಿ ಸಮಕಾಲೀನ ಮಾಧ್ಯಮಗಳಲ್ಲಿ ಮಿಂಚುತ್ತಾರೆ. ದೂರದರ್ಶನ ಅವರ ಸಂದರ್ಶನ ನಡೆಸುತ್ತದೆ. ಜೊತೆಜೊತೆಗೆ ಸಂಪ್ರದಾಯವಾದಿಗಳು ತಮ್ಮದೇ ಆದ ಭಾರತೀಯ ಭವ್ಯತೆಯನ್ನು ಬಣ್ಣಕಟ್ಟಿ ಬಣ್ಣಿಸುತ್ತಾ ವಿಚಾರವಾದಿಗಳನ್ನು ಅರೆ-ಜಾತ್ಯಾತೀತರು, ಮಾರ್ಕ್ಸ್‌ವಾದಿಗಳು, ಮದರಸ ವಾದಿಗಳು ಎಂದು ಪ್ರಚಾರ ಮಾಡುತ್ತಾರೆ.

ಒಂದು ಪತ್ರಿಕೆಯ ಸಂಪಾದಕರಿಗೆ ಬರೆದ ಒಂದು ಅನಾಮಧೇಯ ಪತ್ರ ಹೀಗಿರುತ್ತದೆ: ಪ್ರಿಯ ಸಂಪಾದಕರೆ, ಹಿಂದೂ ಧರ್ಮದ ಸಹನಶೀಲತೆಯನ್ನು ನಮ್ಮ ಇತಿಹಾಸಕಾರರು ಇನ್ನಾದರೂ ವಾಸ್ತವ ಬೆಳಕಿನಲ್ಲಿ ನಿರೂಪಿಸಬೇಕಾಗಿದೆ. ಈ ಪ್ರಾಧ್ಯಾಪಕ ಮೂರ್ತಿ ಮಹಾ ಸಂತರಾದ ಬಸವಣ್ಣನವರನ್ನು ಜಾತಿ ಮತ್ತು ಮತಭೇದಗಳಿಂದ ಕೂಡಿದ ಸಮಾಜಕ್ಕೆ ಅನ್ವಯವಾಗುವ ಕೇವಲ ಒಬ್ಬ ರಾಜಕಾರಣಿಯನ್ನಾಗಿ ಚಿತ್ರಿಸಿದ್ದಾರೆ. ಗೌರವಾನ್ವಿತ ಪ್ರಾಧ್ಯಾಪಕರಿಗೆ ಇತ್ತೀಚಿನ ಚರಿತ್ರೆಯ ಒಂದು ನವೀಕರಣ ಪಾಠಕ್ರಮದ ಅಗತ್ಯವಿರುವಂತೆ ತೋರುತ್ತದೆ. ಪೋಪ್ ಭಾರತಕ್ಕೆ ಬಂದಿದ್ದಾಗ ಕ್ರೈಸ್ತ ಮತಾಂತರಕ್ಕೆ ಕ್ಷಮಾಪಣೆ ಕೇಳಲು ಒಪ್ಪಲಿಲ್ಲ, ಆದರೂ ಅವರನ್ನು ಹಿಂದೂ ಆದರಾತಿಥ್ಯಗಳಿಂದ ಗೌರವಿಸಲಾಯಿತು. ಇಸ್ಲಾಂ ಬಗ್ಗೆ ಹೇಳಬೇಕಾದರೆ ಅದರ ಅನ್ವೇಷಣೆ ಅದರ ಹೆಸರಿನಲ್ಲಿ ಒಟ್ಟುಗೂಡಿದ ಅರಬ್ಬರಿಗೆ ಅದೊಂದು ವರವಾಗಿರಬಹುದು. ಆದರೆ ಅರಬ್ ಪ್ರಪಂಚದ ಹೊರಗಿನ ಜನರಿಗೆ ಅದೊಂದು ಶಾಪವಾಗಿದೆ. ಇಸ್ಲಾಂ ಗುಂಪುಗಳು ದಾಳಿ ಮಾಡಿದ ಪ್ರದೇಶಗಳನ್ನೆಲ್ಲಾ ಗೆದ್ದರು, ಜನರನ್ನು ಕೊಂದರು ಮತ್ತು ಕೊಳ್ಳೆ ಹೊಡೆದರು. ಖಡ್ಗ ಬಲವುಳ್ಳವನಿಗೇ ರಾಜಾಧಿಕಾರ ಎಂಬ ಇಸ್ಲಾಂ ನಂಬಿಕೆ ರಾಜಪೀಠದ ವಂಶಪಾರಂಪರ್ಯ ವಾರಸುದಾರಿಕೆಗೆ ವಿರುದ್ಧವಾಗಿದೆ. ಅಲ್ಲದೆ ಅದು ದಂಗೆ, ಕಪಟ, ಒಳ ಜಗಳ ಮತ್ತು ಮಗನಿಂದ ತಂದೆಯ ಹಾಗೂ ಸೋದರನಿಂದ ಸೋದರನ ಕೊಲೆಯನ್ನು ಬೆಂಬಲಿಸುತ್ತದೆ. ಅಷ್ಟೇ ಅಲ್ಲ, ಸೇವಕ ಅಥವಾ ಗುಲಾಮನಿಂದ ಒಡೆಯನ ಕೊಲೆಗೂ ಅದು ಕುಮ್ಮಕ್ಕು ನೀಡುತ್ತದೆ.

ನಮ್ಮ ದಾರಿ ತಪ್ಪಿದ ಇತಿಹಾಸಕಾರರು ಮತ್ತು ಇತರ ಕಿಡಿಗೇಡಿಗಳು ಹಿಂದು ಧರ್ಮವನ್ನು ಅದರ ಜಾತಿ ಪದ್ಧತಿಗಾಗಿ ಟೀಕಿಸುತ್ತಾರೆ. ನಮ್ಮ ಸಂತರನ್ನು ಪೀಠಗಳಿಂದ ಕೆಳಗೆಳೆಯುತ್ತಾರೆ. ಆದರೆ ಅವರು ಕ್ರಿಶ್ಚಿಯಾನಿಟಿ ಅಥವಾ ಇಸ್ಲಾಂ ಬಗ್ಗೆ ಮೌನ ತಾಳುತ್ತಾರೆ. ನಮ್ಮ ದೇಶ ಮತ್ತು ಸಂಸ್ಕೃತಿಯನ್ನು ಗೌರವಿಸಿದಾಗ ಮಾತ್ರ ಇಲ್ಲಿ ಅಲ್ಪಸಂಖ್ಯಾತರು ನೆಮ್ಮದಿಯಾಗಿರಬಹುದು. ಆಗ ನಾವು ಮೂವತ್ತು ಮೂರು ಕೋಟಿ ದೇವತೆಗಳ ಜೊತೆಗೆ ಇನ್ನೂ ಇಬ್ಬರು (ಅಲ್ಲಾ ಮತ್ತು ಕ್ರಿಸ್ತ) ದೇವತೆಗಳಿಗೆ ಅವಕಾಶ ಕಲ್ಪಿಸಬಹುದು. ನಿಮ್ಮವ – ಪ್ರೊ|| (ಶ್ರೀ) ಎಂ. ಎಂ. ಬಿಹೋಷಿ (ಅನುತ್ತೀರ್ಣ ಆಕ್ಸನ್, ೧೯೪೨).

ಮೀನಾ ಆ ಪತ್ರಿಕೆಯನ್ನು ಒಂದು ಅಂಟುರೋಗದ ಕಸವನ್ನು ಎಸೆಯುವಂತೆ ಎಸೆದು ಬಿಸಾಡುತ್ತಾಳೆ. ಈ ಪಠ್ಯದಿಂದ ಉದ್ಭವಿಸಿದ ವಾದ ವಿವಾದಗಳು ಮೂರ್ತಿಯನ್ನು ಜರ್ಜರಿತಗೊಳಿಸುತ್ತವೆ. ಟಪಾಲಿನಲ್ಲಿ ಬರುವ ಪರ ವಿರೋಧ ಪತ್ರಗಳ, ಪ್ರಶ್ನಾವಳಿಗಳ, ಸಂದರ್ಶನಗಳ, ಕ್ಯಾಮರಾಗಳ, ಫ್ಲಾಷ್ ಬಲ್ಬುಗಳ ಹಾಗೂ ಬೆವರು ಮತ್ತು ಪೌಡರುಗಳ ಸೋಂಕಿನಲ್ಲಿ ಆತ ಬಸವಳಿದು ಹೋಗುತ್ತಾನೆ.

ಸ್ವಹಿತಾಸಕ್ತಿಗಳು ಇತಿಹಾಸದ ಮುಸುಕನ್ನು ಧರಿಸಿ ವಿವಿಧ ಆಕಾರಗಳಲ್ಲಿ ಕಾಣಿಸಿಕೊಳ್ಳುತ್ತವೆ. ವಿರೋಧಿಯನ್ನು ಬಗ್ಗುಬಡಿಯುವ ಆಯುಧವನ್ನಾಗಿ ಮತ್ತು ಪ್ರಚಾರಕ್ಕಾಗಿ ಹಿಂದುತ್ವೀಕರಣವು ಇತಿಹಾಸವನ್ನು ಯುದ್ಧಭೂಮಿಯನ್ನಾಗಿ ಬಳಸಿಕೊಳ್ಳುತ್ತದೆ.

ಮೂರ್ತಿಯ ತಲೆ ಗಿರ್ರನೆ ಸುತ್ತುತ್ತದೆ. ಗುರು ಖೋಟ್ ಎಂಬ ಕೊಟೇಷನ್ ಪಂಡಿತ ಆ ವಾರದ ಮೂರನೆ ವಿಚಾರಗೋಷ್ಠಿಯಲ್ಲಿ ನುಡಿಮುತ್ತುಗಳ ಸುರಿಮಳೆಯನ್ನೇ ಸುರಿಸುತ್ತಾನೆ. ಪ್ರೊ|| ಫಾಡ್ಲಿ ಎಂಬ ವಿದೇಶಿ ಮೂಲದ ಭಾರತೀಯ ಶಾಸ್ತ್ರಜ್ಞ ದೆಹಲಿಗೆ ಧಾವಿಸಿ ವೃತ್ತ ಪತ್ರಿಕೆಗಳಿಗೆ, ವೆಬ್‌ಸೈಟುಗಳಿಗೆ ತನ್ನ ಕಾಣಿಕೆ ನೀಡುತ್ತಾನೆ. ಭಾರತೀಯ ಸಂಸ್ಕೃತಿ ಆಧ್ಯಾತ್ಮ ಪ್ರಧಾನವಾದುದು. ಅದೇ Spirtual Quotient (SQ) ಅತ್ಯುನ್ನತವಾದುದು ಎಂದು ಘೋಷಿಸುತ್ತಾನೆ.

ಇತಿಹಾಸ ಸುರಕ್ಷಾ ಮಂಚದ ಒಬ್ಬ ವಕ್ತಾರ 'ಮಾನವ ಮೊಟ್ಟಮೊದಲು ಭಾರತದ ಒಂದು ಭಾಗವಾದ ಟಿಬೆಟ್



ಆಸ್ಪತ್ರೆಯಿಂದ ಆಸ್ಪತ್ರೆಗೆ ವೈದ್ಯಸಾಹಿತ್ಯ ಪ್ರಚಾರ ಆಂದೋಲನ ಯಶಸ್ವಿಯಾಗಿ ನಡೆಯುತ್ತಿದೆ. ಅಕ್ಟೋಬರ್ ೬ ರಂದು ಬೆಂಗಳೂರಿನ ಇಂದಿರಾನಗರದಲ್ಲಿರುವ ಚಿನ್ಮಯ ಮಿಷನ್ ಆಸ್ಪತ್ರೆಯಲ್ಲಿ ವೈದ್ಯಕೀಯ ನಿರ್ದೇಶಕರಾದ ಡಾ|| ಎಂ. ಆರ್. ಚಂದ್ರಶೇಖರ್ ಪುಸ್ತಕ ಪ್ರದರ್ಶನ ಕಾರ್ಯಕ್ರಮ ಉದ್ಘಾಟಿಸಿದರು.

ಸತ್ಯ ಯುಗಮಹಾದಿ. ಅವನು ಆರ್ಯ. ಮಾನವರೆಲ್ಲಾ ಆರ್ಯ ಮೂಲದವರು. ಮಾನವ ಈ ಭೂಮಿಯ ಮೇಲೆ ಕಾಲಿಟ್ಟು ೧೭೯ ಮಿಲಿಯ ಕೋಟಿ, ೧೯ ಲಕ್ಷ ೫೯ ಸಾವಿರದ ೮೪ ವರ್ಷಗಳಾದುವು' ಎಂದು ಮಾನವ ಇತಿಹಾಸವನ್ನು ಕರಾರುವಾಕ್ಕಾಗಿ ದಾಖಲಿಸುತ್ತಾನೆ.

ವಿದೇಶಿ ವ್ಯಾಮೋಹಿಗಳನ್ನು ನಮ್ಮ ದೇಶದವರೆಂದು ಅಂಗೀಕರಿಸಲು ಸಾಧ್ಯವಿಲ್ಲ. ನಮ್ಮ ಸಂಪ್ರದಾಯಗಳನ್ನು ಯಾರು ಒಪ್ಪಿಕೊಳ್ಳುವರೋ ಅವರನ್ನು ಮಾತ್ರ ನಾವು ನಮ್ಮ ನಾಯಕರೆಂದು ಪರಿಗಣಿಸುತ್ತೇವೆ ಎಂಬುದು ಡಾ|| ಆರ್ಯರ ಸಿದ್ಧಾಂತ.

ಫ್ರಾಡ್ಲಿ ಉವಾಚ : ಸಂಸ್ಕೃತ ಮೃತ ಭಾಷೆಯಲ್ಲ, ಅದು ಸಾಂಸ್ಕೃತಿಕ ಏಕತೆಯ ಸಂಕೇತ. ಅದು ಜಾತಕಗಳನ್ನು ಓದಲು ನೆರವಾಗುವ ಪ್ರಾಚೀನ ಭಾಷೆಯಷ್ಟೇ ಅಲ್ಲ; ಸಾಫ್ಟ್‌ವೇರ್ ಭಾಷೆಗೆ ಸಂಸ್ಕೃತ ಅತ್ಯಂತ ಸೂಕ್ತ ಭಾಷೆ ಎಂದು ಕಂಪ್ಯೂಟರ್ ತಜ್ಞರೇ ಒಪ್ಪಿಕೊಂಡಿದ್ದಾರೆ.

ಈ ಎಲ್ಲಾ ವಾದ, ವಿವಾದ ಗೊಂದಲಗಳ ನಡುವೆ ಮೀನಾ ಮತ್ತು ಅವರ ಸಂಗಡಿಗರು ಒಂದು ಸಾರ್ವಜನಿಕ ಪ್ರತಿಭಟನಾ ಸಮಾರಂಭವನ್ನು ಏರ್ಪಡಿಸುತ್ತಾರೆ. ಅದರಲ್ಲಿ ಭಾಗವಹಿಸಲು ತಜ್ಞ ಇತಿಹಾಸಕಾರರು, ಶಿಕ್ಷಣ ತಜ್ಞರು, ಖ್ಯಾತ ಲೇಖಕರು, ಗಣ್ಯಪತ್ರಿಕೋದ್ಯಮಿಗಳು, ಮಹಿಳಾ ಮುಖಂಡರು ಮತ್ತು ವಿದ್ಯಾರ್ಥಿ ನಾಯಕರನ್ನು ಆಹ್ವಾನಿಸಲಾಗಿರುತ್ತದೆ. ಒಂದು ಬೃಹತ್ ಮೆರವಣಿಗೆಯಲ್ಲಿ ಬ್ಯಾನರ್‌ಗಳನ್ನು ಹೊತ್ತ ಕಾರ್ಯಕರ್ತರು ಪಥ ಸಂಚಲನ ಮಾಡುತ್ತಾರೆ. ಧಿಕ್ಕಾರ, ಜಯಕಾರ ಘೋಷಣೆಗಳು ದೂರದಿಂದಲೇ ಕೇಳಿಬರುತ್ತವೆ. ಮೀನಾಳ ಗೆಳತಿ ಜ್ಯೋತಿ ಸ್ಫುಟವಾದ ಧ್ವನಿಯಲ್ಲಿ 'ಹಿಟ್ಲರ್ ಕಿ ಥಿ ಕಿಸ್ಸೆ ಯಾರಿ ?' (ಹಿಟ್ಲರನ ಗೆಳೆಯರು ಯಾರು ?) ಎಂದು ಪ್ರಶ್ನಿಸುತ್ತಾಳೆ. ಗುಂಪಿನಿಂದ ಎತ್ತರಿಸಿದ ಧ್ವನಿಯಲ್ಲಿ 'ನಿಕ್ಕರ್ ಧಾರಿ, ನಿಕ್ಕರ್ ಧಾರಿ' ಎಂಬ ಉದ್ಘೋಷ ಕೇಳಿಬರುತ್ತದೆ. ವೇದಿಕೆ ಸಮೀಪಿಸುತ್ತಿದ್ದಂತೆ ಮೆರವಣಿಗೆಯಲ್ಲಿ ಮುನ್ನಡೆಯುತ್ತಿದ್ದ ಮೂರ್ತಿಯತ್ತ ಟಿವಿ ಕ್ಯಾಮರಾಗಳು ತಿರುಗುತ್ತವೆ.

ವೇದಿಕೆ ಹಾಗೂ ಪ್ರೇಕ್ಷಕ ಸಮುದಾಯದ ಸುತ್ತಾ ಅಸಂಖ್ಯ ಪೊಲೀಸರು ಜಮಾಯಿಸಿರುತ್ತಾರೆ. ಕೆಲವರ ಕೈಯಲ್ಲಿ ವಾಕಿ-ಟಾಕಿಗಳು ಮತ್ತೆ ಕೆಲವರ ಕೈಯಲ್ಲಿ ಲಾಟಿಗಳು ಇರುತ್ತವೆ. ಪ್ರೇಕ್ಷಕರ ನಡುವೆ ಬಗೆಬಗೆಯ ಬ್ಯಾನರ್‌ಗಳು ಎದ್ದು ಕಾಣಿಸುತ್ತವೆ. ''ಪುರುಷ ದಬ್ಬಾಳಿಕೆಯ ವಿರುದ್ಧ ಜಾತ್ಯಾತೀತ ಮಹಿಳಾ ಸಂಘಟನೆ'', ''ಹಿಂದು ಭಯೋತ್ಪಾದಕ ವಿರೋಧಿ ವೇದಿಕೆ'', ''ಜ್ಯಾತ್ಯಾತೀತ ವಿಜ್ಞಾನಿಗಳ ಜನತಾ ಸಂಘಟನೆ'', ಇತ್ಯಾದಿ ಹೆಸರುಗಳು ಎದ್ದು ಕಾಣಿಸುತ್ತವೆ. 'ತಿರುಚಿದ ಇತಿಹಾಸ', 'ಮಂಚಕ್ಕೆ ಯಾರು ಹೆದರುತ್ತಾರೆ ?' ಇತ್ಯಾದಿ ಘೋಷಣಾ ಫಲಕಗಳು ಅಲ್ಲಲ್ಲಿ ಕಾಣುತ್ತವೆ.

ಹೀಗೆ ಕಾದಂಬರಿಯು ಮೂಲಭೂತವಾದಿಗಳ ಮತ್ತು ಜಾತ್ಯತೀತ ವಿಚಾರವಾದಿಗಳ ಸಂಘರ್ಷಕ್ಕೆ ಕನ್ನಡಿ ಹಿಡಿಯುತ್ತಾ ಪ್ರತಿಯೊಂದು ಸನ್ನಿವೇಶದ ಸೂಕ್ಷ್ಮಾತಿಸೂಕ್ಷ್ಮಗಳನ್ನು ತಿಳಿಹಾಸ್ಯ, ವಿಡಂಬನೆಗಳಿಂದ ವಾಸ್ತವಿಕತೆಗೆ ಚ್ಯುತಿಯಾಗದಂತೆ ಚಿತ್ರಿಸುವಲ್ಲಿ ಯಶಸ್ವಿಯಾಗಿದೆ.

ಭಾರತದ ಇಂದಿನ ರಾಜಕೀಯ ಸಂದರ್ಭದಲ್ಲಿ ಮಧ್ಯಕಾಲೀನ ಇತಿಹಾಸದ ಬಸವಣ್ಣ, ಕಲ್ಯಾಣ ಮತ್ತು ವಿಜಯನಗರದ ಪುನರಾವಲೋಕನ ಇತಿಹಾಸದ ಮೇಲೆ ಹೊಸಬೆಳಕನ್ನು ಚೆಲ್ಲುವುದನ್ನು ಓದುಗರು ಗಮನಿಸಬಹುದು.

ಗೀತಾ ಹರಿಹರನ್ ಅವರಿಗೆ ಕನ್ನಡ ಭಾಷಾ ಪ್ರೌಢಿಮೆ ಅಷ್ಟಾಗಿ ಇದ್ದಂತೆ ಕಾಣುವುದಿಲ್ಲವಾದರೂ ಅವರು ಅನೇಕ ಇಂಗ್ಲಿಷ್ ಅನುವಾದಗಳ ನೆರವಿನಿಂದ ಹಾಗೂ ಎಚ್. ಎಸ್. ಶಿವಪ್ರಕಾಶರಂತಹ ಕನ್ನಡ ಲೇಖಕರ ಒಡನಾಟದಿಂದ ಬಸವಣ್ಣನವರ ವ್ಯಕ್ತಿತ್ವದ ಹಲವಾರು ಮಗ್ಗಲುಗಳನ್ನು ನಮ್ಮ ಮುಂದೆ ತೆರೆದಿಟ್ಟಿದ್ದಾರೆ.

ಈ ಲೇಖಕಿಯ 'ರಾತ್ರಿಯ ಸಹಸ್ರ ಮುಖಗಳು' ಎಂಬ ಕಾದಂಬರಿಗೆ ಈಗಾಗಲೇ ಕಾಮನ್‌ವೆಲ್ತ್ ಬರಹಗಾರರ ಬಹುಮಾನ ದೊರಕಿದೆ. ದಕ್ಷಿಣ ಭಾರತದ ಭಾಷೆಗಳ ಆಯ್ದ ಕಥೆಗಳ ಸಂಕಲನವೊಂದನ್ನು ಅವರು ಸಂಪಾದಿಸಿದ್ದಾರೆ.

ಕನ್ನಡ ನಾಡು ನುಡಿಗಳ ಸೀಮಾರೇಖೆಯಲ್ಲೇ ಬಂದಿಯಾಗಿದ್ದ ಬಸವಣ್ಣನನ್ನು ಇಂಗ್ಲಿಷ್ ಭಾಷೆಯ ಮೂಲಕ ಅಂತರರಾಷ್ಟ್ರೀಯ ವಾಚಕ ಸಮುದಾಯಕ್ಕೆ ಪರಿಚಯಿಸಿದ ಲೇಖಕಿ ಗೀತಾ ಹರಿಹರನ್ ಮತ್ತು ಪ್ರಕಾಶಕರಾದ ವೈಕಿಂಗ್-ಪೆಂಗ್ವಿನ್ ಸಂಸ್ಥೆ ಕನ್ನಡಿಗರ ಅಭಿನಂದನೆಗೆ ಅರ್ಹರಾಗಿದ್ದಾರೆ.

ಬ. ವಿ. ವೀರಭದ್ರಪ್ಪ
ಬಿ-೧೮, ವಿದ್ಯಾನಗರ, ದಾವಣಗೆರೆ - ೫೭೭ ೦೦೫

ಕರ್ನಾಟಕದಲ್ಲಿ ಸುಸ್ಥಿರ ಆಂದೋಲನ ಹುಟ್ಟುಹಾಕಲು ತನ್ನದೇ ನಿಲುವು ದೃಷ್ಟಿಕೋನಗಳಿಂದ
ಕರ್ನಾಟಕದ ಮೂಲೆಗಳಲ್ಲಿರುವ ಕೃಷಿಕರಲ್ಲಿ ಹೊಸ ಚೈತನ್ಯ ಮೂಡಿಸಲು ಸಫಲವಾಗಿರುವ




**ಸಿರಿ ಸಮೃದ್ಧಿ**

ಮಾಸಿಕ ಕೃಷಿ ಪತ್ರಿಕೆ







ಗ್ರಾಮೀಣಾಭಿವೃದ್ಧಿಯಲ್ಲಿ ಅಭೂತಪೂರ್ವ ಪ್ರಯೋಗಗಳನ್ನು ಕೈಗೊಂಡಿರುವ ಬೈಫ್ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯಿಂದ ಪ್ರಕಟಿತ.
ಆಜೀವ ಸದಸ್ಯರಿಗೆ '**ನಾಡ ಹಸುಗಳಿಂದ ಮಿಶ್ರತಳಿ ಸಂವರ್ಧನೆ**' ಎಂಬ ಪುಸ್ತಕವನ್ನು ಉಚಿತವಾಗಿ ಕಳುಹಿಸಲಾಗುವುದು.

ಚಂದಾ ವಿವರ

| | | | |
|---|---|---|---|
| ವಾರ್ಷಿಕ | ರೂ. ೧೦೦ | ಪಂಚವಾರ್ಷಿಕ | ರೂ. ೪೫೦ |
| ತ್ರೈವಾರ್ಷಿಕ | ರೂ. ೨೭೫ | ಆಜೀವ | ರೂ. ೧೦೦೦ |

ನಿಮ್ಮ ಚಂದಾ ಹಣವನ್ನು ಡಿಡಿ/ಎಂ.ಓ. ಮೂಲಕ ಕೆಳಗಿನ ವಿಳಾಸಕ್ಕೆ ಕಳುಹಿಸಿ

**ಬೈಫ್ ಗ್ರಾಮೀಣ ಅಭಿವೃದ್ಧಿ ಸಂಸ್ಥೆ**

ಅಂಚೆ ಪೆಟ್ಟಿಗೆ ನಂ. ೩, ಶಾರದಾನಗರ, ತಿಪಟೂರು - ೫೭೨ ೨೦೨, ತುಮಕೂರು ಜಿಲ್ಲೆ
ಫೋನ್ : ೦೮೧೩೪-೨೫೦೬೫೯, ಫ್ಯಾಕ್ಸ್: ೨೫೧೩೩೭ e-mail : baif1@sancharnet.in



# ಲಕ್ಕೀ ಜಾನನ ಗಲ್ಲು ಪ್ರಕರಣ

ಮೂಲ : ಲಿಯೊ ಟಾಲ್‌ಸ್ಟಾಯ್

ಆದರೆ ನನ್ನ ಬದುಕೂ ಎಲ್ಲರದ್ದೂ ಇದ್ದ ಹಾಗೇ ಏರಿಳಿತಗಳನ್ನು ಕಂಡಿದೆ. ಕುತೂಹಲದ ವಿಚಾರ ಅಂದರೆ, ನನ್ನ ಅದೃಷ್ಟ ಖುಲಾಯಿಸಿದ್ದು ಇಂಥದೇ ಒಂದು ಜೂಜಿನ ಮನೆಯಲ್ಲಿ. ತಮಾಷೆ ಅಂದರೆ, ಜೂಜಿನಲ್ಲಿ ಹಣವನ್ನು ಗೆದ್ದು ನಾನು ಶ್ರೀಮಂತನಾಗಲಿಲ್ಲ. ಹಣವನ್ನು ಕಳೆದುಕೊಂಡು ಶ್ರೀಮಂತನಾದೆ!... ಹೀಗೇ ಹೇಳ್ತಾ ಹೋದರೆ, ನಿಮಗೆ ಬೋರಾಗಬಹುದು. ಆದ್ದರಿಂದ, ಬರೀ ಎರಡು ವರ್ಷಗಳ ಹಿಂದೆ, ಇಂಥದ್ದೇ ಕ್ಲಬ್ಬಿನಲ್ಲಿ ನಡೆದ ಘಟನೆಯ ಫ್ಲಾಷ್ ಬ್ಯಾಕನ್ನು ನೀವೇ ಕಣ್ಣಾರೆ ನೋಡಿ :

*(ಜಾನ್ ಜೂಜುಕೋರರೊಂದಿಗೆ ಸೇರಿಕೊಳ್ಳುತ್ತಾನೆ. ಕುಡಿಯುತ್ತ, ಜೂಜಾಡುತ್ತ ಇದ್ದಾಗ ಇದ್ದಕ್ಕಿದ್ದಂತೆ ಜಗಳ ಪ್ರಾರಂಭವಾಗುತ್ತದೆ. ನೋಡು ನೋಡುತ್ತಿದ್ದಂತೆ ಕೈ ಕೈ ಹತ್ತುತ್ತದೆ. ಸಿಟ್ಟಿನಲ್ಲಿ ಜಾನ್ ಕಿಸೆಯಿಂದ ಚಾಕುವನ್ನು ತೆಗೆದು ಒಬ್ಬ ವ್ಯಕ್ತಿಯನ್ನು ಇರಿಯುತ್ತಾನೆ. ಕ್ಷಣಾರ್ಧದಲ್ಲಿ ಆತ ಹೆಣವಾಗಿ ಬಿದ್ದಿದ್ದಾನೆ. ಜನರಿಗೆ ಅರ್ಥವಾಗುವಷ್ಟರಲ್ಲಿ ಎಲ್ಲ ಮುಗಿದು ಹೋಗಿದೆ. ಪೊಲೀಸರು ಬರುತ್ತಾರೆ. ಇಬ್ಬರು ಮಹಜರ್ ನಡೆಸಿದ್ದಾರೆ; ಇನ್ನಿಬ್ಬರು ಜಾನ್‌ನ ಕೈಗೆ ಬೇಡಿ ಹಾಕಿ ಕರೆದುಕೊಂಡು ಹೋಗುತ್ತಾರೆ.*

*ಈಗ ಜಾನ್ ಕೋರ್ಟಿನಲ್ಲಿ ಜಜ್ ಸಾಹೇಬರ ಮುಂದೆ ನಿಂತಿದ್ದಾನೆ; ಒಬ್ಬ ವಕೀಲ ಏರು ಧ್ವನಿಯಲ್ಲಿ ವಾದ ಮಾಡುತ್ತಿದ್ದಾನೆ)*

**ವಕೀಲ** : ಮೈಲಾರ್ಡ್! ನಮ್ಮದು ಶಾಂತಿಪ್ರಿಯ ದೇಶ; ನಾವು ಶಾಂತಿಗಾಗಿ ಹೋರಾಡುತ್ತೇವೆ – ಯುದ್ಧ ಮಾಡುತ್ತೇವೆ. ನಮ್ಮ ಪೂರ್ವಜರೂ ಕೂಡ ಶಾಂತಿಗಾಗಿ ಹೋರಾಡುತ್ತಾ ಚಿರಶಾಂತಿಯನ್ನು ಪಡೆದಿದ್ದಾರೆ. ಹೀಗಿರುವಾಗ, ಮೈಲಾರ್ಡ್! ಈ ನೀಚ ನಮ್ಮ ದೇಶದ ಪ್ರಶಾಂತ ಕೊಳಕ್ಕೆ ಕಲ್ಲೆಸೆದಿದ್ದಾನೆ; ನಿರ್ಮಲವಾದ ಜಲವನ್ನ ರಕ್ತದ ಮಡುವನ್ನಾಗಿ ಮಾಡಿದ್ದಾನೆ. ಮೈಲಾರ್ಡ್! ಇದಕ್ಕೆ ಪರಿಹಾರ ಒಂದೇ – ಮೈಲಾರ್ಡ್! ಗಲ್ಲು, ಮರಣ ದಂಡನೆ.

### ದೃಶ್ಯ-೧

*(ರಂಗದ ಮೇಲೆ ಬೆಳಕಾಗುತ್ತಿದ್ದಂತೆ, ಜೂಜು ಕೇಂದ್ರದ ದೃಶ್ಯ; ಜನರು ಬೇರೆ ಬೇರೆ ರೀತಿಯ ಜೂಜಿನಲ್ಲಿ ತೊಡಗಿದ್ದಾರೆ. ಕೆಲವರು ಕುಡಿಯುತ್ತಿದ್ದಾರೆ; ಕೆಲವರು ತಮ್ಮಷ್ಟಕ್ಕೆ ಮಾತನಾಡಿಕೊಳ್ಳುತ್ತಿದ್ದಾರೆ; ಗಲ್ಲಾ ಪೆಟ್ಟಿಗೆಯ ಮೇಲಿದ್ದ ನಡು ವಯಸ್ಸಿನ ಜಾನ್, ಎದ್ದು ಬಂದು ಪ್ರೇಕ್ಷಕರಿಗೆ ನಮಸ್ಕರಿಸುತ್ತಾನೆ.)*

**ಜಾನ್** : ನಮಸ್ಕಾರ. ನನ್ನ ಹೆಸರು ಜಾನ್ ಅಂತ. ನನ್ನನ್ನ ಜನ 'ಲಕ್ಕೀ ಜಾನ್' ಅಂತ ಕರೀತಾರೆ. ಲಕ್ಕೀ ಜಾನ್ ಅಂದ್ರೆ, ಅದೃಷ್ಟವಂತ ಜಾನ್ ಅಂತ. ಇದು ಲಕ್ಕೀ ಜಾನ್ಸ್ ಕ್ಲಬ್: ಇವರೆಲ್ಲ ನನ್ನ ಕ್ಲಬ್ಬಿನ ಖಾಯಂ ಸದಸ್ಯರು. ಇಲ್ಲಿ, ಏನೆಲ್ಲಾ ಸವಲತ್ತುಗಳಿವೆ ಅನ್ನೋದನ್ನ ನಾನೇನೂ ಹೇಳಬೇಕಾಗಿಲ್ಲ – ನಿಮ್ಮ ಕಣ್ಣೇ ನಿಮಗೆ ಹೇಳ್ತಾವೆ. ಇಲ್ಲಿಗೆ ಬರುವವರೆಲ್ಲಾ ಅದೃಷ್ಟವಂತರೇನೂ ಅಲ್ಲ; ಇಲ್ಲಿ ಕೆಲವರು ಕಳ್ಕೋತಾರೆ – ಕೆಲವರು ಗಳಿಸ್ಕೋತಾರೆ. ಇವತ್ತು ಗಳಿಸಿಕೊಂಡವನು ನಾಳೆ ಕಳ್ಕೋಬಹುದು. ಅಥವಾ ನಾಳೆ ಕಳ್ಕೊಂಡವನು ನಾಡಿದ್ದು ಗಳಿಸ್ಕೋಬಹುದು. ನನ್ನ ಕ್ಲಬ್ಬಿನ ಎಲ್ಲ ಸದಸ್ಯರಲ್ಲೂ ಒಂದು ದೊಡ್ಡ ಗುಣ ಇದೆ – ಇವರು ಹಣಕ್ಕೆ ಕಾಸಿನ ಕಿಮ್ಮತ್ತನ್ನೂ ಕೊಡೋದಿಲ್ಲ. ಜಗತ್ತಿನ ಎಲ್ಲಾ ಧರ್ಮಗಳು ಹೇಳಿದ್ದೂ ಇದೇ ತಾನೆ? ಆದರೆ, ನಾನು ಧರ್ಮಕ್ಕೆ ಈ ಕ್ಲಬ್ಬನ್ನು ನಡಸ್ತಾ ಇಲ್ಲ. ಇಲ್ಲಿಗೆ ಬರುವ ಪ್ರತಿಯೊಬ್ಬನೂ ಆಡುವ ಮೊದಲು ನನ್ನ ಫೀಸನ್ನ ಕೊಟ್ಟುಬಿಡಬೇಕು. ಅವನು ಜೂಜಿನಲ್ಲಿ ಹಣ ಗಳಿಸ್ತಾನೋ, ಕಳ್ಕೋತಾನೋ ನನಗೆ ಸಂಬಂಧ ಇಲ್ಲ. ಅದಕ್ಕೇ ಜನಾ ನನ್ನನ್ನ ಲಕ್ಕೀ ಜಾನ್ ಅಂತ ಕರಿಯೋದು!

**ಜಜ್** : *(ನಿಧಾನವಾಗಿ ಓದುತ್ತಾನೆ)* ನಮ್ಮದು ಶಾಂತಿಪ್ರಿಯ ದೇಶ. ನಾವು ಶಾಂತಿಗಾಗಿ ಹೋರಾಡುತ್ತೇವೆ – ಯುದ್ಧ ಮಾಡುತ್ತೇವೆ. ನಮ್ಮ ಪೂರ್ವಜರೂ ಶಾಂತಿಗಾಗಿ ಹೋರಾಡುತ್ತಾ ಶಾಶ್ವತ ಶಾಂತಿಯನ್ನು ಪಡೆದಿದ್ದಾರೆ. ಹೀಗಿರುವಾಗ....

**ವಕೀಲ** : *(ಅದೇ ಧಾಟಿಯಲ್ಲಿ ಮುಂದುವರಿಸುತ್ತಾನೆ)* ಈ ನೀಚ, ನಮ್ಮ ದೇಶದ ಪ್ರಶಾಂತ ಕೊಳಕ್ಕೆ ಕಲ್ಲೆಸೆದಿದ್ದಾನೆ.

**ಜಜ್** : *(ಅನುಮಾನದಿಂದ)* 'ನೀಚ' ಅನ್ನೋ ಪದ... ಅನ್ಪಾರ್ಲಿಮೆಂಟರಿ... ಅಲ್ವಾ?

**ವಕೀಲ** : ಅದ್ಯಾಕೆ ಮೈಲಾರ್ಡ್! ದಿನ ಬೆಳಗಾದರೆ ಪಾರ್ಲಿಮೆಂಟಲ್ಲಿ ಬಳಸ್ತಾರೆ?

**ಜಜ್** : ಸರಿ. ಈ ನೀಚ ನಮ್ಮ ಪ್ರಶಾಂತ ಕೊಳಕ್ಕೆ ಕಲ್ಲೆಸೆದಿದ್ದಾನೆ. ನಿರ್ಮಲವಾದ ನಮ್ಮ ಕೊಳವನ್ನು ರಕ್ತದ ಮಡುವನ್ನಾಗಿ ಮಾಡಿದ್ದಾನೆ; ಇದಕ್ಕೆ ಪರಿಹಾರ ಒಂದೇ... ಗಲ್ಲು ಶಿಕ್ಷೆ ಒಂದೇ... ಗಲ್ಲು ಶಿಕ್ಷೆ.

*(ಎಲ್ಲರೂ ಚಪ್ಪಾಳೆ ತಟ್ಟುತ್ತಾರೆ; ಜಾನ್ ತಲೆ ತಗ್ಗಿಸಿ ನಿಂತಿದ್ದಾನೆ... ನಿಧಾನವಾಗಿ ಕತ್ತಲಾಗುತ್ತದೆ. ಮತ್ತೆ ಬೆಳಕಾದಾಗ, ಮೊದಲಿನಂತೆ ಕ್ಲಬ್ಬಿನ ದೃಶ್ಯ; ಜಾನ್, ಅಲ್ಲೇ ನಿಂತಿದ್ದಾನೆ)*

**ಜಾನ್** : ಹೀಗೆ ನಾನು, ನನ್ನ ಪಾಪಕ್ಕೆ, ತಕ್ಕ ಶಿಕ್ಷೆಯನ್ನು ಪಡೆದೆ. ನಿಮಗೇ ಗೊತ್ತು, ಇಂಥ ತೀರ್ಪಿನಿಂದ ಯಾರೂ ವಿಚಲಿತರಾಗೋದಿಲ್ಲ.

ಒಬ್ಬ: ಯಾಕೆ ಅಂತಂದ್ರೆ, ಅದೇ ಅಂತಿಮ ತೀರ್ಪೇನೂ ಆಗಿರೋದಿಲ್ಲ.

ಮತ್ತೊಬ್ಬ : ಒಂದು ನ್ಯಾಯಾಲಯ ನೇಣುಗಂಬಕ್ಕೆ ಏರಿಸಿದವರನ್ನು , ಇನ್ನೊಂದು ನ್ಯಾಯಾಲಯ ಕೆಳಗೆ ಇಳಿಸಿದ್ದನ್ನು ನಾನು ನೀವೂ ದಿನನಿತ್ಯ ಕೇಳುತ್ತಿದ್ದೇವೆ.... ನೋಡುತ್ತಿದ್ದೇವೆ....

ಜಾನ್ : ಆದರೆ, ನಾನು ಇಲ್ಲಿ ಇಂಥ ಆಶಾದಾಯಕ ತೀರ್ಪಿಗೆ ಕಾದು ನಿಂತವನಲ್ಲ. ಯಾಕೇ ಅಂತಂದ್ರೆ, ಊರು ಊರಿಗೂ ನ್ಯಾಯಾಲಯ ಇರುವ ಭಾರತ ದೇಶದಲ್ಲಿ ಈ ಘಟನೆ ನಡೆದದ್ದಲ್ಲ....

ಮಗದೊಬ್ಬ : ಇದು ನಡೆದದ್ದು – ಮೊನಾಕೋ ದೇಶದಲ್ಲಿ, ಫ್ರಾನ್ಸ್ ಹಾಗೂ ಇಟಲಿ ದೇಶಗಳ ಗಡಿಯಲ್ಲಿದ್ದ ಒಂದು ಪುಟಾಣಿ ದೇಶ ಅದು.

ಜಾನ್ : ಅದು ಎಷ್ಟು ಪುಟಾಣಿ ದೇಶ ಅಂದ್ರೆ, ಭಾರತ ದೇಶದ ಒಂದು ಹಳ್ಳೀನಲ್ಲಿ ಇರುವಷ್ಟು ಜನ ಕೂಡಾ ಅಲ್ಲಿರಲಿಲ್ಲ. ಮೊನಾಕೋ ದೇಶದ ಒಟ್ಟು ಜನಸಂಖ್ಯೆ – ಬರೀ ಏಳು ಸಾವಿರ !

ಒಬ್ಬ : ಆದರೂ ಅದಕ್ಕೊಬ್ಬ ರಾಜನಿದ್ದ.

ಮತ್ತೊಬ್ಬ : ರಾಜ ಇದ್ದಮೇಲೆ, ರಾಣಿ, ಯುವರಾಜ, ರಾಜಭಟರು, ಪರಿವಾರ ಇರಬೇಕಲ್ಲವೇ ?.... ಎಲ್ಲರೂ ಇದ್ದರು.



ಮಗದೊಬ್ಬ : ಇನ್ನು ಆಸ್ಥಾನಿಕರು, ಮಂತ್ರಿಗಳು, ರಾಜಪುರೋಹಿತರು, ದಂಡ ನಾಯಕ, ಸೈನ್ಯ..... ಹೀಗೆ, ಯಾವುದೇ ರಾಜ್ಯದಲ್ಲಿ, ಎಲ್ಲಾ ಕಡೆ ಇರುವ ಹಾಗೆ, ಅಲ್ಲೂ ಇದ್ದರು.

ಜಾನ್ : ಈಗಾಗಲೇ ಹೇಳಿದ್ದೇನೆ.... ಆ ಪುಟ್ಟ ದೇಶದ ಒಟ್ಟು ಜನಸಂಖ್ಯೆ, ಕೇವಲ ಏಳು ಸಾವಿರ ಮಾತ್ರ. ಈ ದೇಶ.... ಹಾಗೂ ಜನತೆಯ ರಕ್ಷಣೆಗಾಗಿ ಒಂದು ಸೈನ್ಯವೂ ಇತ್ತು. ಅದು ಎಷ್ಟು ಚಿಕ್ಕದಾಗಿತ್ತು ಅಂದರೆ...

ಮತ್ತೊಬ್ಬ : ಅದರಲ್ಲಿ ಬರೀ ೬೦ ಜನ ಸೈನಿಕರಿದ್ದರು.

ಮಗದೊಬ್ಬ : ನನ್ನನ್ನೂ ಸೇರಿ !

ಜಾನ್ : ಹೀಗೆ ಎಲ್ಲಾ ದೇಶದ ಹಾಗೆ, ಈ ದೇಶದಲ್ಲೂ ಜನ ತೆರಿಗೆ ಕೊಡಬೇಕಿತ್ತು.

ಒಬ್ಬ : ಹೆಂಡದ ತೆರಿಗೆ....

ಮತ್ತೊಬ್ಬ : ತಂಬಾಕಿನ ತೆರಿಗೆ...

ಮಗದೊಬ್ಬ : ಚುನಾವಣೆ ತೆರಿಗೆ....

ಜಾನ್ : ಹೀಗೆ.... ಆದರೆ ಹೀಗೆ ಬಂದ ಆದಾಯ ಅರಮನೆಯ ಅಧಿಕಾರಿಗಳ ಸಂಬಳ ಸಾರಿಗೆಗೂ ಸಾಕಾಗ್ತಾ ಇರಲಿಲ್ಲ.

ಒಬ್ಬ : ಅದಕ್ಕೇ ಅಲ್ಲಿಯ ರಾಜರು ಆದಾಯಕ್ಕೆ ಇನ್ನೊಂದು ಮಾರ್ಗವನ್ನು ಹುಡುಕಿಕೊಂಡಿದ್ದರು.

ಜಾನ್ : ಅದೇನೂ ಅಂದರೆ, ಜೂಜಿನ ಮೇಲಿನ ತೆರಿಗೆ. ಇಡೀ ಯೂರೋಪ್ ಖಂಡದಲ್ಲಿ ಮೊನಾಕೋ ದೇಶವನ್ನು ಬಿಟ್ಟರೆ, ಮತ್ತೆ ಎಲ್ಲೂ ಸರಕಾರದ ಮಾನ್ಯತೆ ಪಡೆದ ಜೂಜಿನ ಮನೆಗಳು ಇರಲಿಲ್ಲ.

ಒಬ್ಬ : ಅದಕ್ಕಾಗಿ, ದೇಶ-ವಿದೇಶಗಳಿಂದ ಮರ್ಯಾದಸ್ಥ ಜನ ಇಲ್ಲಿಗೆ ಬಂದು ಜೂಜನ್ನು ಆಡ್ತಿದ್ದರು.

ಮತ್ತೊಬ್ಬ : ನನ್ನ ಹಾಗೆ...

ಮಗದೊಬ್ಬ : ಆದರೆ, ಪ್ರತಿಯೊಬ್ಬ ಜೂಜುಗಾರನೂ ಭಾರಿ ತೆರಿಗೆ ಕೊಡಬೇಕಿತ್ತು.

ಜಾನ್ : ಸ್ವಾಮೀ, ನಿಮಗೆ ಗೊತ್ತು. ಸತ್ಯಮಾರ್ಗದಲ್ಲಿ ನಡೆದರೆ ಹೆಚ್ಚು ದಿನ ದೇಶ ನಡೆಸಲಿಕ್ಕೆ ಸಾಧ್ಯ ಇಲ್ಲ. ಕಲ್ಲಿನ ಅರಮನೆ ಕಟ್ಟಬೇಕು ಅಂದರೆ ಕೊಳ್ಳೆ ಹೊಡಿಯಲೇಬೇಕು. ಮೊನಾಕೋ ದೇಶದ ಅರಸನಿಗೆ ಗೊತ್ತಿತ್ತು.... ತನ್ನ ದೇಶ ಹೊಲಸು ಮಾರ್ಗದ ಸಂಪಾದನೆಯಲ್ಲಿ ನಡಿತಾ ಇದೆ ಅಂತ. ಆದರೆ, ಏನ್ ಮಾಡೋದು ?.... ರಥ ನಡೀಬೇಕಲ್ಲವೆ ?.... ನಡೀತಾ ಇತ್ತು.... ಸುಖವಾಗಿ ನಡೀತಾ ಇತ್ತು. ಇರಲಿ, ನೀವು, ಈಗತಾನೆ, ಆ ದೇಶದ ನ್ಯಾಯಾಲಯವನ್ನ ನೋಡಿದಿರಿ.... ಈಗ ಅಲ್ಲಿಯ ಅರಸನನ್ನೂ, ಆಸ್ಥಾನಿಕರನ್ನೂ ನೋಡಿ....

*(ಹೊರಡುತ್ತಾನೆ - ಪುನಃ ಹಿಂದಕ್ಕೆ ಬಂದು)*

ಹಂ ! ಆಸ್ಥಾನದಲ್ಲಿ ಒಂದು ಕುತೂಹಲಕಾರೀ ಚರ್ಚೆ ನಡೀತಾಯಿದೆ... ಅದು ನನ್ನ ಬಗ್ಗೇನೆ... ನೋಡಿ.... *(ಹೋಗುತ್ತಾನೆ)*

**ದೃಶ್ಯ-೨**

*(ಮೊನಾಕೋ ದೇಶದ ರಾಜನ ಆಸ್ಥಾನ)*

ರಾಜ : ಮಂತ್ರಿಗಳೇ ಹಾಗೂ ಆಸ್ಥಾನಿಕರೆ, ನಮ್ಮ ನ್ಯಾಯಾಲಯ ಸರಿಯಾದ ತೀರ್ಪನ್ನೇ ಕೊಟ್ಟಿದೆ. ಇತ್ತೀಚೆಗೆ ಬೆಳಕಿಗೆ ಬಂದಿರುವಂತೆ, ಜಾನ್ ಕೊಲೆ ಮಾಡಿರುವ ವ್ಯಕ್ತಿ ವಿದೇಶದವನು. ಹೀಗೆ ಆದರೆ, ಬೇರೆ ದೇಶದವರು ನಮ್ಮ ದೇಶಕ್ಕೆ ಏಕೆ ಬಂದಾರು ? ಅವರು ಬರದೇ ಹೋದರೆ ನಮ್ಮ ಜೂಜಿನ ಮನೆಗಳು ಮುಚ್ಚಿಹೋಗುತ್ತವೆ. ಹಾಗೇನಾದರೂ ಆದರೆ, ನಮ್ಮ ಬೊಕ್ಕಸಕ್ಕೆ ತೆರಿಗೆ ಎಲ್ಲಿಂದ ಬರಬೇಕು, ಹೇಳಿ. ನಮ್ಮ ದೇಶದ ಗತಿ ಏನಾದೀತು ? ಆದ್ದರಿಂದ ಅವನು ಮಾಡಿದ ಕೊಲೆ ದೇಶದ್ರೋಹದ ಕೆಲಸ. ಅದಕ್ಕೇ ನ್ಯಾಯಾಲಯ ಮರಣದಂಡನೆಯನ್ನು ವಿಧಿಸಿರುವುದು ಸರಿಯಾಗಿಯೇ ಇದೆ. ಈ ಕೂಡಲೇ ಅವನನ್ನು ಗಲ್ಲಿಗೆ ಏರಿಸಲು ಎಲ್ಲ ವ್ಯವಸ್ಥೆಯನ್ನು ಮಾಡಿ.

ಗೃಹಮಂತ್ರಿ : ಪ್ರಭುಗಳೆ, ನಿಮ್ಮ ಆಜ್ಞೆಯನ್ನು ನಾನು ಶಿರಸಾವಹಿಸಿ ಮಾಡುತ್ತೇನೆ; ಆದರೆ, ಇಲ್ಲೊಂದು ತೊಡಕಿದೆ....

ರಾಜ : ಇದು ರಾಜಾಜ್ಞೆ!

ಗೃಹಮಂತ್ರಿ : ಹೌದು ಪ್ರಭುಗಳೇ. ಆದರೆ, ಅವನನ್ನು ಗಲ್ಲಿಗೆ ಏರಿಸಲಿಕ್ಕೆ ನಮ್ಮಲ್ಲಿ ಗಲ್ಲುಗಂಬಗಳೇ ಇಲ್ಲ! ತಮಗೇ ತಿಳಿದಿರುವಂತೆ, ಇದೇ ಮೊದಲ ಬಾರಿಗೆ ಇಂಥ ಶಿಕ್ಷೆ ಜಾರಿಯಾಗ್ತಾ ಇದೆ. ಈ ಹಿಂದೆ, ನಮಗೆ ಎಂದೂ ಗಲ್ಲುಗಂಬದ ಅವಶ್ಯಕತೆಯೇ ಬಂದಿರಲಿಲ್ಲ.

ರಾಜ : ಅದ್ಯಾವ ದೊಡ್ಡ ಕೆಲಸ ! ರಕ್ಷಣಾ ಮಂತ್ರಿಗಳೇ, ನಿಮ್ಮ ಯೋಧರು ಯುದ್ಧದಲ್ಲಿ ನೂರಾರು ತಲೆಗಳನ್ನು ಉರುಳಿಸುತ್ತಾರೆ. ಅವರಲ್ಲಿ ಒಬ್ಬ ಯೋಧನನ್ನು ಕಳಿಸಿಕೊಡಿ. ಆತ, ಈ ವ್ಯಕ್ತಿಯ ತಲೆಯನ್ನು ಹಾರಿಸಲಿ ಅಷ್ಟೆ.

ರಕ್ಷಣಾ ಮಂತ್ರಿ : ಕ್ಷಮಿಸಬೇಕು ಪ್ರಭುಗಳೇ, ಈ ಬಗ್ಗೆ ಈಗಾಗಲೇ ನಮ್ಮ ಸೈನ್ಯದ ದಂಡನಾಯಕರೊಂದಿಗೆ ಚರ್ಚೆ ಮಾಡಿಯಾಗಿದೆ; ಅವರೂ ಕೂಡ ಸೈನಿಕರನ್ನು ಕರೆಸಿ ಕೇಳಿದ್ದಾರೆ. ಆದರೆ ಯಾವೊಬ್ಬ ಸೈನಿಕನೂ ಈ ಕೆಲಸಕ್ಕೆ ಸಿದ್ಧನಾಗಿಲ್ಲ. ''ನಾವು ಹೊರದೇಶದ ಶತ್ರುಗಳನ್ನು ಯುದ್ಧದಲ್ಲಿ ಮಾತ್ರ ಕೊಲ್ಲುತ್ತೇವೆ ವಿನಃ ನಮ್ಮ ದೇಶದ ಪ್ರಜೆಯನ್ನಲ್ಲ – ಆ ಬಗ್ಗೆ ನಮಗೆ ತರಬೇತಿ ಕೊಟ್ಟಿಲ್ಲ – ನಾವು ಅದನ್ನು ಮಾಡುವುದೂ ಇಲ್ಲ'' ಎಂದು ಸೈನಿಕರು ಖಡಾಖಡಿಯಾಗಿ ಹೇಳಿದ್ದಾರೆ ಪ್ರಭುಗಳೇ.

ರಾಜ : ಅವರು ಹೇಳುವುದೂ ಸರಿಯಾಗೇ ಇದೆ ಬಿಡಿ. ನಮ್ಮ ವಿದೇಶಾಂಗ

ಸಚಿವರು ಏನಾದರೂ ಪರಿಹಾರವನ್ನು ಸೂಚಿಸಬಲ್ಲರೆ ?...

**ವಿದೇಶಾಂಗ ಸಚಿವ :** ಪ್ರಭುಗಳೇ, ಇದು ನನ್ನ ಖಾತೆಗೆ ಸಂಬಂಧಿಸಿದ ವಿಚಾರ ಅಲ್ಲ. ಆದರೂ, ವಿದೇಶಗಳಲ್ಲಿ ಇಂಥ ಸನ್ನಿವೇಶದಲ್ಲಿ ಏನು ಮಾಡುತ್ತಾರೆ ಎನ್ನುವುದನ್ನು ಹೇಳಬಲ್ಲೆ.

**ರಾಜ :** ಬಹಳ ಸಂತೋಷ! ಇಂಥ ತಲೆ ತೆಗೆಯುವ ವಿಚಾರವನ್ನು ಯಾವ ದೇಶದಿಂದ ಕಲಿತರೂ ತಪ್ಪೇನಿಲ್ಲ. ಹೇಳಿ.

**ವಿದೇಶಾಂಗ ಸಚಿವ :** ಪ್ರಭುಗಳೇ, ನಮ್ಮ ನೆರೆಯ ರಾಷ್ಟ್ರವಾದ ಫ್ರಾನ್ಸಿನಲ್ಲಿ ಗಿಲಟಿನ್ ಎನ್ನುವ ಒಂದು ಯಂತ್ರವಿದೆ. ಅದು ಒಂದೇ ಬಾರಿಗೆ ಹತ್ತು ತಲೆಗಳನ್ನು ತೆಗೆಯಬಲ್ಲದು.

**ರಾಜ :** ಸದ್ಯ ನಮಗೆ ಒಂದು ತಲೆಯನ್ನು ತೆಗೆದರೆ ಸಾಕು – ಮುಂದೆ ಹೇಳಿ.

**ವಿದೇಶಾಂಗ ಸಚಿವ :** ನಾನು ಅನೇಕ ದೇಶಗಳನ್ನು ಸುತ್ತಿದ್ದೇನೆ. ಆದರೆ, ನಾನು ನೋಡಿರುವ ಅತ್ಯಂತ ಸರಳ ಸುಂದರ ಸಾಧನ – ಗಿಲಟಿನ್ !

**ರಾಜ :** ಬಹಳ ಸಂತೋಷ. ಅಂತೂ ನಿಮ್ಮ ವಿದೇಶ ಯಾತ್ರೆ ಸಾರ್ಥಕವಾದ್ಹಾಗಾಯಿತು. ನಮಗೂ ಅಂಥದ್ದೇ ಸಾಧನದ ಅವಶ್ಯಕತೆ ಇದೆ. ತುರ್ತಾಗಿ ಈ ಯಂತ್ರವನ್ನು ತರಿಸುವ ವ್ಯವಸ್ಥೆ ಮಾಡಿ.

**ವಿದೇಶಾಂಗ ಸಚಿವ :** ಪ್ರಭುಗಳೇ, ತಾವು ಒಪ್ಪಿಗೆ ಕೊಟ್ಟರೆ ನಾಳೆಯೇ ನಮ್ಮ ಅಧಿಕಾರಿಗಳೊಂದಿಗೆ ಹೋಗಿ ಯಂತ್ರವನ್ನು ತರುವ ವ್ಯವಸ್ಥೆ ಮಾಡಬಹುದು.

**ಗೃಹ ಸಚಿವ :** ಪ್ರಭುಗಳೇ, ಇದು ಗೃಹ ಖಾತೆಗೆ ಸಂಬಂಧಿಸಿದ ವ್ಯವಹಾರ; ಆದ್ದರಿಂದ... ತಾವು ಒಪ್ಪಿಗೆ ಕೊಟ್ಟರೆ ನಾನು ಬೇಕಾದರೆ ಒಬ್ಬನೇ ಹೋಗಿ ತರಬಲ್ಲೆ.

**ರಾಜ :** ನೋಡಿ ನಿಮಗೆಲ್ಲ ಗೊತ್ತು – ನಮ್ಮದು ಪುಟ್ಟ ದೇಶ; ನಮ್ಮ ಆದಾಯದ ಮಿತಿಯಲ್ಲಿಯೇ ನಾವು ಇಂಥ ಅನಿರೀಕ್ಷಿತ ಖರ್ಚನ್ನು ಹೊಂದಿಸಿಕೊಳ್ಳಬೇಕಾಗಿದೆ. ಆದ್ದರಿಂದ, ಗೃಹಮಂತ್ರಿಗಳೇ, ಈ ಕೂಡಲೇ ಫ್ರಾನ್ಸ್ ದೇಶಕ್ಕೆ ಪತ್ರವನ್ನು ಬರೆಯಿರಿ; ಒಂದು ಗಿಲಟಿನ್ ಯಂತ್ರ ಹಾಗೂ ಅದರ ಚಾಲಕನನ್ನು ಕಳಿಸಿಕೊಡಿ – ಹಾಗೂ ಅದಕ್ಕೆ ಬೀಳುವ ವೆಚ್ಚದ ಬಗ್ಗೆಯೂ ತಿಳಿಸಿ – ಎಂದು.

**ಗೃಹಮಂತ್ರಿ :** ಪ್ರಭುಗಳು ಕ್ಷಮಿಸಬೇಕು. ಇದು ವಿದೇಶಾಂಗ ಖಾತೆಗೆ ಸಂಬಂಧಿಸಿದ ವಿಚಾರ....

**ರಾಜ :** ಸರಿ ವಿದೇಶಾಂಗ ಸಚಿವರೆ, ಈ ಕ್ಷಣದಲ್ಲಿ ಪತ್ರವನ್ನು ಬರೆಯಿರಿ. ಮುಂದಿನ ಸಭೆಯಲ್ಲಿ ನೀವು ಫ್ರಾನ್ಸಿನ ಉತ್ತರದೊಂದಿಗೆ ಸಿದ್ಧರಾಗಿರಬೇಕು. ತಿಳೀತಲ್ಲ?

**ವಿದೇಶಾಂಗ ಸಚಿವ :** ಆಗಲಿ ಪ್ರಭುಗಳೇ.

**ರಾಜ :** ಮುಂದಿನ ವಾರ ಪುನಃ ಸಭೆ ಸೇರೋಣ.

### ದೃಶ್ಯ-೩

**ಜಾನ್ :** ಮಹಾಜನರೆ, ಒಂದು ವಾರದ ನಂತರ ಪುನಃ ರಾಜಸಭೆ ನಡೆಯಿತು. ಆ ಸಭೆಯಲ್ಲೂ ಚರ್ಚೆ ನನ್ನ ಬಗ್ಗೆಯೇ. ಫ್ರಾನ್ಸ್ ದೇಶದಿಂದ ಬಂದ ಪತ್ರವನ್ನು ವಿದೇಶಾಂಗ ಸಚಿವರು ದೊಡ್ಡದಾಗಿ ಓದಿದರು : ನಿಮ್ಮ ಪತ್ರ ತಲುಪಿದೆ. ವಿಚಾರವನ್ನು ಕೇಳಿ ಬಹಳ ಸಂತೋಷವಾಯಿತು. ಪ್ರಪಂಚದ ಮೂಲೆ ಮೂಲೆಗಳಿಗೆ, ಈ ತಲೆ ಕಡಿಯುವ ಗಿಲಟಿನ್ ಯಂತ್ರವನ್ನು ೫೦ ವರ್ಷಗಳಿಂದ ರಫ್ತು ಮಾಡುತ್ತಿರುವ ಕೀರ್ತಿ ನಮ್ಮದು. ನಮ್ಮ ನೆರೆಯ ರಾಷ್ಟ್ರಕ್ಕೆ ಇಂಥ ಯಂತ್ರವನ್ನು ನಾವು ಉಡುಗೊರೆಯಾಗಿಯೇ ಕೊಡಬಹುದಾಗಿತ್ತು. ಆದರೆ ಇತ್ತೀಚಿನ ವರ್ಷಗಳಲ್ಲಿ ಈ ಯಂತ್ರಕ್ಕೆ ಭಾರೀ ಬೇಡಿಕೆ ಇರುವುದರಿಂದ ಹಾಗೂ ಯಂತ್ರದ ಉತ್ಪಾದನಾ ವೆಚ್ಚವೂ ದುಪ್ಪಟ್ಟು ಆಗಿರುವುದರಿಂದ ಅದು ಸಾಧ್ಯವಾಗಲಾರದು. ಆದರೆ ನಮ್ಮ ನೆರೆಯ ಪ್ರೀತಿಯ ಪುಟ್ಟ ರಾಜ್ಯವಾದ ಮೊನಾಕೋ ದೇಶಕ್ಕೆ ಕೇವಲ ೧೬ ಸಾವಿರ ಫ್ರಾಂಕ್‌ಗಳಿಗೆ ಈ ಯಂತ್ರವನ್ನು ಕೊಡುತ್ತಿದ್ದೇವೆ. ಇದರಲ್ಲಿ ಸಾಗಣೆ ವೆಚ್ಚವೂ ಸೇರಿದೆ. ಆದರೆ, ಯಂತ್ರ ಚಾಲಕನಿಗೆ ಪ್ರತ್ಯೇಕವಾಗಿ ಗೌರವಧನವನ್ನು ನೀಡುವುದು. ಈ ಬಗ್ಗೆ ತಮ್ಮ ಉತ್ತರಕ್ಕಾಗಿ ಎದುರು ನೋಡುತ್ತಿರುವ, ತಮ್ಮ ವಿಶ್ವಾಸಿ,...

ಸಹಿ – ವಿದೇಶಾಂಗ ಸಚಿವ, ಫ್ರಾನ್ಸ್ ಗಣರಾಜ್ಯ

*(ನಿಧಾನವಾಗಿ ಕತ್ತಲಾಗಿ ಬೆಳಕಾದಾಗ, ರಾಜಸಭೆ – ವಿದೇಶಾಂಗ ಸಚಿವರು ಪತ್ರ ಹಿಡಿದು ನಿಂತಿದ್ದಾರೆ)*

**ರಾಜ :** ಮಂತ್ರಿಗಳೇ, ಕುಳಿತುಕೊಳ್ಳಿ. ಇದು ಸಾಧ್ಯವಾಗದ ಮಾತು. ೧೬ ಸಾವಿರ ಫ್ರಾಂಕುಗಳು! ಒಬ್ಬ ಯಃಕಶ್ಚಿತ್ ವ್ಯಕ್ತಿಯ ತಲೆಯನ್ನು ತೆಗೀಲಿಕ್ಕೆ ೧೬ ಸಾವಿರ ಫ್ರಾಂಕುಗಳು! ಅಸಾಧ್ಯ! ಅಸಾಧ್ಯ!! ಒಬ್ಬ ವ್ಯಕ್ತಿಯ ತಲೆ ಉರುಳಿಸಲಿಕ್ಕೆ ನಮ್ಮ ದೇಶದ ಒಬ್ಬೊಬ್ಬ ಪ್ರಜೆಯೂ ತಲಾ ಎರಡೆರಡು ಫ್ರಾಂಕುಗಳನ್ನು ತೆತ್ತರೂ ಹಣ ಸಾಕಾಗುವುದಿಲ್ಲ. ಜನ ಸಿಟ್ಟಾಗಿ ದಂಗೆ ಎದ್ದಾರು... ಮಂತ್ರಿಗಳೇ, ಇದಕ್ಕೆ ಏನಾದರೂ ಪರಿಹಾರ ಹುಡುಕಲೇಬೇಕು. ಕಾನೂನು ಸಚಿವರು ಏನನ್ನುತ್ತೀರಿ ?

**ಕಾನೂನು ಸಚಿವ :** ಪ್ರಭುಗಳೇ, ನಾನೂ ಅದನ್ನೇ ಯೋಚಿಸ್ತಾ ಇದ್ದೆ. ಇನ್ನೊಂದು ಪರಿಹಾರವಿದೆ.

**ರಾಜ :** ಹೇಳಿ.

**ಕಾನೂನು ಸಚಿವ :** ತಾವು ಅನ್ಯಥಾ ಭಾವಿಸಬಾರದು....

**ರಾಜ :** ಇಲ್ಲ ನಮ್ಮ ಸಮಸ್ಯೆ ಪರಿಹಾರವಾಗುವುದಾದರೆ, ನಾವು ಎಲ್ಲಕ್ಕೂ ಸಿದ್ಧ, ಹೇಳಿ.

**ಕಾನೂನು ಸಚಿವ :** ನ್ಯಾಯಾಧೀಶರು ವಿಧಿಸಿರುವ ಗಲ್ಲು ಶಿಕ್ಷೆಯನ್ನು ಹಿಂದಕ್ಕೆ ಪಡೆಯುವುದು.

**ರಾಜ :** ರಾಜಾಜ್ಞೆಯನ್ನು ಹಿಂದಕ್ಕೆ ಪಡೆಯುವುದೇ ?

**ಕಾನೂನು ಸಚಿವ :** ಅಂದರೆ, ಸಂಪೂರ್ಣವಾಗಿ ಹಿಂದಕ್ಕೆ ಪಡೆಯಬೇಕಿಲ್ಲ... ಅದರಲ್ಲಿ ಸ್ವಲ್ಪ ಮಾರ್ಪಾಡು ಮಾಡುವುದು, ಅಷ್ಟೆ.

**ರಾಜ :** ಮಾರ್ಪಾಡು ಅಂದರೆ ?...

**ಕಾನೂನು ಸಚಿವ :** ಗಲ್ಲು ಶಿಕ್ಷೆಯ ಬದಲಾಗಿ ಆಜೀವ ಶಿಕ್ಷೆಯನ್ನು ವಿಧಿಸುವುದು.

**ರಾಜ :** ಅಂದರೆ, ಆತನನ್ನು ಕೂಡಲೇ ಸಾಯಿಸುವುದಲ್ಲ.

**ಕಾನೂನು ಸಚಿವ :** ಆತ ನಮ್ಮ ಸೆರೆಮನೆಯಲ್ಲೇ ಮುದುಕನಾಗಿ, ಕಾಲಕ್ರಮದಲ್ಲಿ ಸಾಯುತ್ತಾನೆ.

**ಮತ್ತೊಬ್ಬ ಸಚಿವ :** ಇದರಿಂದಾಗಿ ಪ್ರಭುಗಳಿಗೆ ಕರುಣಾಳು ಎಂಬ ಕೀರ್ತಿಯೂ ಬರುತ್ತದೆ.

**ಇನ್ನೊಬ್ಬ ಸಚಿವ :** ಹಣವೂ ಉಳಿಯುತ್ತದೆ.

**ಮತ್ತೊಬ್ಬ ಸಚಿವ :** ಪುರುಷ ಹತ್ಯೆಯ ಪಾಪದಿಂದಲೂ ತಾವು ಮುಕ್ತರಾಗುತ್ತೀರಿ.

**ರಾಜ :** ಹೌದು.... ಹೌದು... ಪುಣ್ಯವಶಾತ್ ಸಮಸ್ಯೆ ಪರಿಹಾರವಾಯ್ತು. ಕಾನೂನು ಸಚಿವರೆ, ಕೂಡಲೇ ನ್ಯಾಯಾಧೀಶರಿಗೆ, ಅವರ ತೀರ್ಪಿನಲ್ಲಿ ತಿದ್ದುಪಡಿ ಮಾಡಲು ಮನವಿಯನ್ನು ಸಲ್ಲಿಸಿ. ನಾನು ಆಮೇಲೆ ರಾಜಾಜ್ಞೆಯನ್ನು ಹೊರಡಿಸುತ್ತೇನೆ. ಇಲ್ಲಿಗೆ ಸಭೆ.... (ಗೃಹ ಸಚಿವರು ಎದ್ದು ನಿಂತಿದ್ದನ್ನು ನೋಡಿ) ಏನು, ಗೃಹ ಸಚಿವರು ಏನೋ ಗೊಂದಲದಲ್ಲಿರುವ ಹಾಗಿದೆ ?

**ಗೃಹ ಸಚಿವ :** ಹೌದು... ಪ್ರಭುಗಳೇ... ಇಲ್ಲಿ ಇನ್ನೊಂದು ಚಿಕ್ಕ ತೊಡಕಿದೆ.

**ರಾಜ :** ಇನ್ನೂ ತೊಡಕೆ ? ಏನು ? ಹೇಳಿ...

**ಗೃಹ ಸಚಿವ :** ಪ್ರಭುಗಳೇ, ನಿಮಗೇ ತಿಳಿದಿರುವಂತೆ ನಮ್ಮಲ್ಲಿರುವುದು ಬಂದೀಖಾನೆಗಳು ಮಾತ್ರ. ಅಂದರೆ, ಇಲ್ಲಿ ಸಣ್ಣ ಪುಟ್ಟ ಅಪರಾಧಿಗಳನ್ನು ಸ್ವಲ್ಪ ದಿನಗಳ ಮಟ್ಟಿಗೆ ಬಂಧಿಸಿಡಬಹುದು ಅಷ್ಟೆ. ಆದರೆ, ಜೀವಾವಧಿ ಶಿಕ್ಷೆಗೆ ಗುರಿಯಾಗಿರುವ ಖೈದಿಗಳನ್ನು ಇಡಲಿಕ್ಕೆ ಕಾರಾಗೃಹಗಳೇ ಬೇಕು. ನಮ್ಮ ದೇಶದಲ್ಲಿ ಅಂಥ ಕಾರಾಗೃಹಗಳಿಲ್ಲ. ಆದ್ದರಿಂದ....

**ರಾಜ :** ಅರ್ಥವಾಯಿತು ಬಿಡಿ. ಅದೇನೂ ದೊಡ್ಡ ಸಮಸ್ಯೆ ಅಲ್ಲ. ನಮ್ಮ ಅರಮನೆಯ ಸಮೀಪದಲ್ಲಿ ಒಂದು ಪ್ರವಾಸಿ ಮಂದಿರವಿದೆ. ಅದರಲ್ಲೊಂದು ಕೊಠಡಿಯಲ್ಲಿ ಇವನನ್ನು ಬಂಧಿಸಿಡಿ. ನಾಲ್ಕು ಜನ ಸೈನಿಕರು ಕಟ್ಟೆಚ್ಚರ ವಹಿಸಲಿ.

**ಗೃಹ ಸಚಿವ :** ಅವನಿಗೆ ಊಟದ ವ್ಯವಸ್ಥೆ...

**ರಾಜ :** ಅದ್ಯಾವ ದೊಡ್ಡ ಸಮಸ್ಯೆ? ನಮ್ಮ ಅರಮನೆಯಿಂದ ಆಹಾರ ಕಳಿಸಿದರಾಯಿತು - ಅಷ್ಟೆ. ಇನ್ನು ಯಾವ ಸಮಸ್ಯೆಯೂ ಇಲ್ಲವಷ್ಟೆ?... ಸರಿ... ಸಭೆಯನ್ನು ಇಲ್ಲಿಗೆ ಮುಕ್ತಾಯಗೊಳಿಸೋಣ.

*(ನಿಧಾನವಾಗಿ ಕತ್ತಲಾಗುತ್ತದೆ)*

### ದೃಶ್ಯ-೪

*(ಪ್ರವಾಸಿ ಮಂದಿರದ ಒಂದು ಕೋಣೆಯ ಹೊರಗೆ ಜಾನ್ ಕುಳಿತಿದ್ದಾನೆ; ಸೇವಕರಿಬ್ಬರು ಕಾವಲು ಕಾಯುತ್ತಿದ್ದಾರೆ; ಒಬ್ಬ ಸೇವಕ ತಟ್ಟೆಯಲ್ಲಿ ತಿಂಡಿಯನ್ನು ತಂದು ಜಾನನ ಮುಂದಿಡುತ್ತಾನೆ)*

**ಜಾನ್ :** ಇಂಥ ಭಾಗ್ಯ ಎಷ್ಟು ಜನಕ್ಕೆ ಸಿಕ್ಕೀತು ! ಬೆಳಿಗ್ಗೆ ಸೂರ್ಯೋದಯಕ್ಕೂ ಮುಂಚೆ ಕಹಳೆಯಾದಾಗ ನಾನೂ ಏಳ್ತೀನೆ. ಅರಮನೆಯಿಂದ ಬಿಸಿ ನೀರು ಬರುತ್ತೆ. ಸ್ನಾನ ಮಾಡಿ ತೊಳೆದ ಬಟ್ಟೆಯನ್ನು ಹಾಕಿಕೊಳ್ತೀನೆ; ಅಷ್ಟರಲ್ಲಿ ರುಚಿ-ರುಚಿಯಾದ ಬೆಳಗಿನ ಉಪಾಹಾರ ಬರುತ್ತೆ – ತಿಂದು ಮಲಗ್ತೀನೆ. ಮತ್ತೆ ಏಳೋದು ಈ ಸೇವಕ ಬಾಗಿಲು ಬಡಿದಾಗಲೇ, ಮಧ್ಯಾಹ್ನದ ಊಟಕ್ಕೆ... ಪುಷ್ಕಳವಾದ ಊಟದ

ನಂತರ ನಿದ್ದೆ ತಾನೇ ತಾನಾಗಿ ಬಂದುಬಿಡುತ್ತೆ. ರಾತ್ರಿಯೂ ಹೀಗೇ... ಇದೇ ರೀತಿ ಒಂದು ವರ್ಷದಿಂದ ಸ್ವರ್ಗ-ಸುಖದಲ್ಲಿದ್ದೇನೆ....

**ಸೇವಕ** : ಆದರೆ, ಸುಖದ ಹಿಂದೆ ದುಃಖವೂ ಇರುತ್ತೆ ಅನ್ನೋದನ್ನ ಮರೀಬೇಡ.

**ಜಾನ್** : ಯಾಕಪ್ಪ, ಏನೋ ಹೊಸಾ ಸುದ್ದಿ ಹೇಳ್ತಾ ಇದ್ದೀಯ ? ನನ್ನ ಅನುಭವದಲ್ಲಿ ಸುಖದ ಹಿಂದೆ ಸುಖಾನೇ ಇರೋದು !

**ಸೇವಕ** : ಇರಬಹುದು. ಆದರೆ ಕಾಲ ಒಂದೇ ತರಾ ಇರುತ್ತೆ ಅಂದ್ಕೋಬೇಡ. ಮೊನ್ನೆ ರಾಜಸಭೆಯಲ್ಲಿ ಮತ್ತೆ ನಿನ್ನ ವಿಚಾರ ಚರ್ಚೆಗೆ ಬಂತು. ನಾನೂ ಅಲ್ಲೇ ಇದ್ದೆ. ಗೃಹ ಸಚಿವರು ನಿನ್ನ ಈ ಕಾರಾಗೃಹದ ನಿರ್ವಹಣ ವೆಚ್ಚಕ್ಕಾಗಿ 2000 ಫ್ರಾಂಕುಗಳ ಬೇಡಿಕೆಯನ್ನು ಮುಂದಿಟ್ಟರು. ಅದನ್ನ ಹಣಕಾಸು ಸಚಿವರು ವಿರೋಧಿಸಿದರು.

**ಜಾನ್** : ಯಾಕೆ ? ನಾನು ಉಪವಾಸ ಇರಬೇಕಂತ ?

**ಸೇವಕ** : ಹಾಗಲ್ಲಪ್ಪ. ಅವರ ಲೆಕ್ಕಾಚಾರ ಏನೂ ಅಂದರೆ, ಕೇವಲ ಕಾರಾಗೃಹದ ಖರ್ಚಿನ ಬಾಬ್ತು ಪ್ರತಿಯೊಬ್ಬ ಪ್ರಜೆಯಿಂದ ತಲಾ ಒಂದೊಂದು ಫ್ರಾಂಕುಗಳ ಸುಲಿಗೆ ಮಾಡಬೇಕಾಗಿದೆ. ಇದು ಅನ್ಯಾಯ ಅಂತ. ಆದರೆ, ಗೃಹ ಸಚಿವರು ವಿವರವಾದ ಖರ್ಚಿನ ಪಟ್ಟಿಯನ್ನೇ ಕೊಟ್ಟರು. ನಿನಗೆ ಊಟ, ಬಟ್ಟೆ, ಔಷಧಿ, ನನ್ನ ಸಂಬಳ ಹೀಗೆ ಅವರ ಖರ್ಚಿನ ಪಟ್ಟಿ ಎಷ್ಟು ವಿವರವಾಗಿತ್ತೂ ಅಂದರೆ, ತಿಂಗಳಿಗೊಮ್ಮೆಯಂತೆ ನಿನ್ನ ತಲೆ ಕ್ಷೌರಕ್ಕೆ ೧೨ ಫ್ರಾಂಕುಗಳನ್ನೂ ಸೇರಿಸಿದ್ದರು !

**ಜಾನ್** : ನಾನು ಪ್ರತೀ ವಾರವೂ ಮುಖ ಕ್ಷೌರ ಆಗಬೇಕು ಅಂತ ಬೇಡಿಕೆ ಇಟ್ಟಿದ್ದೆ – ಆದರೆ ಅವರು ಅದಕ್ಕೆ ಆಗೋಲ್ಲ ಅಂದರು – ಹೋಗಲಿ ಬಿಡು.

**ಸೇವಕ** : ನಿನ್ನ ಕಾರಾಗೃಹದ ಖರ್ಚಿನ ಪಟ್ಟಿಯನ್ನು ನೋಡಿ ಅರಸರೂ ದಂಗಾಗಿಬಿಟ್ಟರು. ಖರ್ಚನ್ನು ಕಡಿಮೆ ಮಾಡುವ ಬಗ್ಗೆ ತಾಸುಗಟ್ಟಲೆ ಚರ್ಚೆ ನಡೀತು. ಕೊನೆಯಲ್ಲಿ ತೀರ್ಮಾನವಾದ ವಿಚಾರವೆಂದರೆ, ನಿನ್ನ ಕಾವಲು ಭಟರನ್ನು ಕೆಲಸದಿಂದ ತೆಗೆದುಹಾಕುವುದು. ಅರಮನೆಯಿಂದ ನಿನಗೆ ಊಟವನ್ನು ತರುತ್ತಿದ್ದ ನನಗೂ ಅದೇ ಗತಿಯಾಯಿತು.

**ಜಾನ್** : ಅಂದರೆ, ಇನ್ನು ನನ್ನ ಊಟಕ್ಕೆ ವ್ಯವಸ್ಥೆ?

**ಸೇವಕ** : ಇನ್ನು ನೀನೇ ಅರಮನೆಗೆ ಹೋಗಿ, ಊಟ ಮಾಡ್ಕೊಂಡು ಬರಬೇಕು !

**ಜಾನ್** : ಈಗ ನನ್ನ ಕಷ್ಟವನ್ನ ನೋಡು. ಪ್ರತೀ ದಿನ ಊಟಕ್ಕೆ ಅರಮನೆಗೆ ನಾನೇ ನಡೆದುಕೊಂಡು ಹೋಗಬೇಕು ! ಅದು ಹೋಗಲಿ.... ಕಾವಲುಗಾರರೇ ಇಲ್ಲದ ಕಾರಾಗೃಹವನ್ನು ಎಲ್ಲಾದರೂ ನೋಡಿದ್ದೀಯಾ ? ಪ್ರಾಯಶಃ ಇಡೀ ಪ್ರಪಂಚದಲ್ಲೇ ಇಂತಹ ಏಕೈಕ ಕಾರಾಗೃಹ ಇದಾಗಿರಬಹುದು ! ಸರಿ, ನಾನೀಗ ಏನ್ ಮಾಡ್ಲೀ ?

**ಸೇವಕ** : ಅಯ್ಯೋ! ದಡ್ಡ! ತಪ್ಪಿಸಿಕೊಂಡು ಓಡಿಹೋಗು. ಅದನ್ನೂ ನಾನು ಹೇಳಿಕೊಡಬೇಕಾ ?

**ಜಾನ್** : ನಿನ್ನಿಂದ ಅಂಥ ಸಲಹೆಗಾಗಿ ನಾನು ಕಾದು ನಿಂತಿಲ್ಲ. ನನಗೆ ಅಷ್ಟು ತಿಳುವಳಿಕೆ ಖಂಡಿತಾ ಇದೆ. ಆದರೂ ಓಡಿಹೋಗಲ್ಲ. ಯಾಕೆ ಅಂದರೆ, ನಾನು ನೀನು ಅಂದುಕೊಂಡದ್ದಕ್ಕಿಂತ ಹೆಚ್ಚು ಜಾಣ. ಆಯ್ತು, ನೀನು ಈಗ ಹೋಗಪ್ಪ. ನಾಳೆಯಿಂದ ಅರಮನೆ ಊಟಕ್ಕೆ ನಾನೇ ಹೋಗ್ಬೇಕು – ಅಷ್ಟೇ ತಾನೆ? ಸರಿ. ನೀನು ಹೋಗು.

**ಸೇವಕ** : ಅಯ್ಯೋ! ಬರೀ ಒಂದು ಊಟಕ್ಕಾಗಿ ಸ್ವಾತಂತ್ರ್ಯ ಮಾರ್ಕೋತಾನಲ್ಲ – ಏನು ಹೇಳೋದು ! ಸರಿ. ಅವರವರು ಪಡ್ಕೊಂಡು ಬಂದಿದ್ದು ! ನಾನು ಹೋಗ್ತೀನಪ್ಪ.

**ಜಾನ್** : ಹೋಗಪ್ಪಾ ಹೋಗು. *(ಪ್ರೇಕ್ಷಕರಿಗೆ)* ನೋಡಿದ್ರಾ ನನ್ನ ಪಾಡು ? ಆದರೆ, ಆ ಸೇವಕ ಹೇಳಿದ ಹಾಗೆ ನೀವೂ ನನ್ನ ಕೇಳಬಹುದು – ನೀನು ಯಾಕೆ ಓಡಿಹೋಗಬಾರದು ಅಂತ. ನೀವು ಹೇಳೋದೂ ಸರೀನೆ. ಆದರೆ ಈ ದೇಶಕ್ಕೊಬ್ಬ ರಾಜರಿದ್ದಾರಲ್ಲವೆ. ಅವರು ಈ ಮಾತನ್ನು ಹೇಳಬೇಕಲ್ಲವೆ ?

*(ನಿಧಾನವಾಗಿ ಕತ್ತಲಾಗುತ್ತದೆ)*



ದೃಶ್ಯ-೩

*(ರಾಜರ ಸಭೆ ಸೇರಿದೆ; ಜಾನ್ ನಿಂತುಕೊಂಡಿದ್ದಾನೆ)*

**ರಾಜ** : ನೀನು ಯಾಕೆ ಓಡಿಹೋಗಬಾರದು ? ನಿನಗೆ ಗೊತ್ತು: ನಿನ್ನ ಕೋಣೆಯ ಬಾಗಿಲಿಗೆ ಬೀಗ ಹಾಕುತ್ತಿಲ್ಲ. ಅದನ್ನ ಸೇವಕರು ಕಾಯುತ್ತಲೂ ಇಲ್ಲ. ನೋಡು, ನಾನು ಅರಸ ಹೇಳುತ್ತಿದ್ದೇನೆ – ನಿನಗೆ ಇಷ್ಟಬಂದಲ್ಲಿಗೆ ಹೋಗು. ನೀನು ಸ್ವತಂತ್ರ...

**ಜಾನ್** : ಕ್ಷಮಿಸಿ ಪ್ರಭುಗಳೇ, ನನಗೆ ಗೊತ್ತು: ನಾನು ಓಡಿಹೋದರೆ ಇಲ್ಲಿ ಯಾರೂ ನನ್ನನ್ನು ತಡೆಯುವುದಿಲ್ಲ. ನೀವು ಕಾವಲು ಭಟರನ್ನು ಹಿಂದಕ್ಕೆ ತೆಗೆದುಕೊಂಡಾಗಲೇ ನನಗೆ ಈ ವಿಚಾರ ಅರ್ಥವಾಗಿತ್ತು... ಆದರೆ, ಹೇಳಿ, ನಾನು ಎಲ್ಲಿಗೆ ಹೋಗಲಿ ? ಏನನ್ನು ಮಾಡಲಿ ?...

**ರಾಜ** : ನಿನ್ನ ಊರಿಗೆ ಹೋಗು. ಸಂಸಾರ ಮಾಡು.

**ಜಾನ್** : ಯಾವ ಊರು ? ಯಾವ ಸಂಸಾರ ? ನನ್ನ ಗುಣ, ಸ್ವಭಾವ, ನಡತೆ ಎಲ್ಲವನ್ನೂ ನೀವು ನಾಶ ಮಾಡಿದ್ದೀರಿ. ನನ್ನ ಹೆಂಡತಿ ನನ್ನೊಂದಿಗೆ ಸಂಸಾರ ಮಾಡ್ತಾಳ ? ನನ್ನ ಮಕ್ಕಳು ನನ್ನನ್ನು ಅಪ್ಪ ಅಂತ ಕರೀತಾರ ? ನನ್ನ ಊರು ನನ್ನನ್ನ ಮತ್ತೆ ಹ್ಯಾಗೆ ಸೇರಿಸಿಕೊಂಡೀತು ಹೇಳಿ ?

**ರಾಜ** : ಎಲ್ಲಾದರೂ ದೂರ ಹೋಗಿ ದುಡಿದು ತಿನ್ನು..

**ಜಾನ್** : ಹ್ಯಾಗೆ ದುಡಿಯಲಿ ?... ಇಷ್ಟು ದಿವಸಗಳಿಂದ ಸೋಮಾರಿಯಾಗಿ ಉಂಡು ತಿಂದುಕೊಂಡಿದ್ದ ಈ ಮೈ, ಈಗ ಕೆಲಸಕ್ಕೆ ಬಗ್ಗೀತೆ ? ಖಂಡಿತಾ ಸಾಧ್ಯವಿಲ್ಲ! ನೀವು ನನ್ನನ್ನು ಕೆಟ್ಟದಾಗಿ ನೋಡಿಕೊಂಡಿದ್ದೀರಿ; ನನಗೆ ಅನ್ಯಾಯ ಮಾಡಿದ್ದೀರಿ... ನೀವು ನನಗೆ ಮರಣ ದಂಡನೆಯನ್ನು ವಿಧಿಸಿದಾಗಲೇ ನನ್ನನ್ನು ಕೊಂದು ಹಾಕಬೇಕಿತ್ತು. ಆದರೆ, ನೀವು ಹಾಗೆ ಮಾಡಲಿಲ್ಲ. ಹೋಗಲಿ, ಅದಕ್ಕೂ ನನ್ನ ಅಭ್ಯಂತರವಿಲ್ಲ. ಆಮೇಲೆ ನನಗೆ ಜೀವಾವಧಿ ಶಿಕ್ಷೆಯನ್ನು ಕೊಟ್ಟರಿ. ಕೊಠಡಿಯೊಳಗೆ ಕೂಡಿಹಾಕಿ ಸೇವಕರ ಕಾವಲಿಟ್ಟಿರಿ. ಹೊತ್ತು-ಹೊತ್ತಿಗೆ ಊಟ ಕೊಟ್ಟರಿ. ಆಮೇಲೆ ಸೇವಕರನ್ನೂ ತೆಗೆದು ಹಾಕಿದಿರಿ. ಆಗಲೂ ನಾನು ನಿಮ್ಮನ್ನು ದೂರಲಿಲ್ಲ. ಅರಮನೆಗೆ ಬಂದು ಊಟ ಮಾಡ್ಕೊಂಡು ವಾಪಾಸು ನನ್ನ ಕೋಣೆಗೆ ಹೋಗಿ ಮಲ್ಕೋತಿದ್ದೆ. ಆದರೆ ಈಗ, ನೀವು ನನಗೆ ಓಡಿಹೋಗು ಅಂತಾ ಇದ್ದೀರಿ. ನಾನು ಇದನ್ನು ಒಪ್ಪೋದಿಲ್ಲ; ನೀವು ನಿಮಗೆ ಇಷ್ಟ ಬಂದ ಹಾಗೆ ಮಾಡಿ. ನಾನು ಮಾತ್ರ ಖಂಡಿತಾ ಓಡಿಹೋಗೋದಿಲ್ಲ! *(ಅಲ್ಲೇ ಕೂರುತ್ತಾನೆ)*

*(ರಾಜ ಹಾಗೂ ಮಂತ್ರಿಗಳು ಪರಸ್ಪರ ಚರ್ಚಿಸಿ ಏನೋ ನಿರ್ಧರಿಸಿಕೊಂಡು)*

**ರಾಜ** : ಇರಲಿ. ನೀನು ಸದ್ಯ ಸಭಾಭವನದ ಆಚೆ ಕೂತಿರು; ನಾನು ಕರೆಸಿದಾಗ ಬರಬಹುದು....

*(ಜಾನ್ ಹೊರಗೆ ಹೋಗುತ್ತಾನೆ)*

**ರಾಜ** : ಮಂತ್ರಿಗಳೇ, ಈಗ ಏನು ಮಾಡೋಣ ?

**ಮಂತ್ರಿ-೧** : ಪ್ರಭುಗಳೇ, ಆತ ನಮ್ಮ ಸೆರೆಮನೆಯಲ್ಲೇ ಕೊಳೆತು ಸಾಯಲಿ ಬಿಡಿ.

**ಮಂತ್ರಿ-೨** : ಆತನ ಆರೋಗ್ಯವನ್ನು ನೋಡಿದರೆ, ಇನ್ನೂ ಕನಿಷ್ಠ ೫೦ ವರ್ಷ ಬದುಕಿಯಾನು.

**ಮಂತ್ರಿ-೩** : ಜನರ ಮೇಲೆ ಬಂದೀಖಾನೆ ತೆರಿಗೆ ಅಂತ ಹಾಕಿ ಅಷ್ಟೆ

**ಮಂತ್ರಿ-೪** : ಸಾಧ್ಯವಿಲ್ಲ. ಈಗಾಗಲೇ ಅವರ ಮೇಲೆ ಬೇಕಾದಷ್ಟು ತೆರಿಗೆ ಹೇರಿಯಾಗಿದೆ.

**ರಾಜ** : ನೋಡಿ, ನಾವು ಹೇಗಾದರೂ ಮಾಡಿ ಅವನನ್ನು ತೊಲಗಿಸಲೇಬೇಕು.

**ಮಂತ್ರಿ-೫** : ಹಾಗಾದರೆ, ಇನ್ನೊಂದು ಪರಿಹಾರ ಇದೆ; ಅವನಿಗೆ ಪ್ರತೀ ವರ್ಷವೂ ಪಿಂಚಣಿಯಾಗಿ ಒಂದಿಷ್ಟು ಹಣವನ್ನು ಕೊಟ್ಟುಬಿಡುವುದು....

**ರಾಜ** : ಒಂದಿಷ್ಟು ಹಣ ಅಂದರೆ ?

**ಮಂತ್ರಿ-೫** : *(ಯೋಚಿಸಿ)* ಸುಮಾರು ೫೦೦ ಫ್ರಾಂಕುಗಳು....

**ರಾಜ** : ಆಗಬಹುದು - ಆದರೆ... ಆತ ಒಪ್ಪಬೇಕಲ್ಲ? ಮಂತ್ರಿಗಳೇ, ನೀವೇ ಕೇಳಿ, ನೋಡೋಣ.

*(ಮಂತ್ರಿ-೫, ಹೊರಗೆ ಹೋಗಿ ಮತ್ತೆ ಬರುತ್ತಾನೆ)*

**ಮಂತ್ರಿ-೫** : ಸಾಧ್ಯವಿಲ್ಲವಂತೆ.

**ರಾಜ** : ಇನ್ನೆಷ್ಟು ಬೇಕಂತೆ ?.......... ೬೦೦ ಫ್ರಾಂಕುಗಳು....

**ಮಂತ್ರಿ-೫** : 2000 ಫ್ರಾಂಕುಗಳು ! ಅಂದರೆ, ನಾವು ಅವನಿಗಾಗಿ ಪ್ರತೀ ವರ್ಷ ಮಾಡುತ್ತಿದ್ದ ಖರ್ಚಿನ ಹಣ ಅಷ್ಟೆ!

**ರಾಜ** : ಆಗಲಿ. ಅದನ್ನು ಕೊಡೋಣ. ಮೊದಲು

ಅವನು ತೊಲಗಿದರೆ ಸಾಕು.

**ಮಂತ್ರಿ-೫** : ಆ ಹಣವನ್ನು ಮುಂಗಡವಾಗಿ ಇಂದೇ ಕೊಡಬೇಕಂತೆ.

**ರಾಜ** : ಆಗಲಿ. ಅದನ್ನೂ ಕೊಡೋಣ. ಮತ್ತೇನು ಅವನ ಬೇಡಿಕೆ ?

**ಮಂತ್ರಿ-೫** : ಆಜೀವ ಪರ್ಯಂತ ಪ್ರತೀ ವರ್ಷವೂ ತಪ್ಪದೇ ಕೊಡುವುದಾಗಿ ತಾವು ಮುದ್ರೆಯೊತ್ತಿದ ಪತ್ರವನ್ನು ಕೊಡಬೇಕಂತೆ...

**ರಾಜ** : ಅದನ್ನೂ ಕೊಡಬಹುದು. ಬಿಡಿ.... ಅಷ್ಟೆ ತಾನೆ ?

**ಮಂತ್ರಿ-೫** : ಅಷ್ಟೆ ಪ್ರಭುಗಳೇ.

**ರಾಜ** : ಸಂತೋಷ... ಅಂತೂ ಸಮಸ್ಯೆ ಬಗೆ ಹರಿಯಿತಲ್ಲ. ವಿತ್ತ ಮಂತ್ರಿಗಳೆ, ರಾಜ ಬೊಕ್ಕಸದಿಂದ ಹಣದ ವ್ಯವಸ್ಥೆಯಾಗಲಿ; ಕಾನೂನು ಸಚಿವರೆ, ಒಪ್ಪಂದದ ಪತ್ರವನ್ನು ಸಜ್ಜುಗೊಳಿಸಿ; ಕಂದಾಯ ಸಚಿವರೆ, ನಮ್ಮ ದೇಶದ ಪ್ರತಿಯೊಬ್ಬ ಪ್ರಜೆಯಿಂದ ತಲಾ ಒಂದೊಂದು ಫ್ರಾಂಕ್ ತೆರಿಗೆಯನ್ನು ಹೆಚ್ಚುವರಿಯಾಗಿ ವಸೂಲು ಮಾಡಲು ಆಜ್ಞೆ ಹೊರಡಿಸಿ. ಸರಿ ನಾವೀಗ ಸಭೆಯನ್ನು ಮುಕ್ತಾಯಗೊಳಿಸೋಣ...

*(ಸಭೆ ಮುಕ್ತಾಯವಾಗುತ್ತಿದ್ದಂತೆ, ಜಾನ್ ಪ್ರವೇಶ)*

**ಜಾನ್** : ಆತ್ಮೀಯರೇ, ಹೀಗೆ ನಾನು ಜೂಜುಕೋರ ಜಾನ್ ಆಗಿದ್ದವನು, ಕೊಲೆಗಾರನಾಗಿ, ಖೈದಿಯಾಗಿ, ಈಗ ಲಕ್ಕೀ ಜಾನ್ ಆಗಿದ್ದೇನೆ. ನಾನೀಗ ಮೊನಾಕೋ ದೇಶದಲ್ಲಿ ಇಲ್ಲ; ಅದರ ಪಕ್ಕದ ದೇಶದಲ್ಲಿದ್ದೇನೆ. ಇಲ್ಲಿಂದ ಅಲ್ಲಿಗೆ ಕೇವಲ ಮೂರು ತಾಸಿನ ಪ್ರಯಾಣ, ಅಷ್ಟೆ. ಪ್ರತಿ ವರ್ಷ ಸಮಯಕ್ಕೆ ಸರಿಯಾಗಿ, ಮೊನಾಕೋ ದೇಶಕ್ಕೆ ಹೋಗಿ ನನ್ನ ಪಿಂಚಣಿ ಹಣವನ್ನು ತರುತ್ತೇನೆ. ಮೊದಲೇ ಹೇಳಿದ ಹಾಗೆ, ನಾನು ಇಲ್ಲಿ ಒಂದು ಜೂಜಾಟದ ಕ್ಲಬ್ಬನ್ನು ನಡೆಸುತ್ತಿದ್ದೇನೆ – ಲಕ್ಕೀ ಜಾನ್ಸ್ ಕ್ಲಬ್ ಅಂತ. ನಾನೀಗ ಸುಖವಾಗಿ, ನೆಮ್ಮದಿಯಿಂದ ಇದ್ದೇನೆ.

ಆದರೂ ಒಂದೊಂದು ಸಾರಿ ಯೋಚನೆ ಮಾಡ್ತೇನೆ. ಪುಣ್ಯ ! ನನ್ನ ಅದೃಷ್ಟ ಚೆನ್ನಾಗಿತ್ತು. ನಾನು ಮೊನಾಕೋ ದೇಶದಲ್ಲಿ ಕೊಲೆ ಮಾಡಿ, ಜೈಲಿಗೆ ಹೋದೆ. ಆದರೆ, ಎಷ್ಟು ದೇಶಗಳು, ಮೊನಾಕೋ ದೇಶದ ಹಾಗೆ, ಒಬ್ಬ ವ್ಯಕ್ತಿಯ ತಲೆಯನ್ನು ತೆಗೆಯೋದಕ್ಕೆ ಅಥವಾ ಅವನನ್ನು ಜೈಲಿನಲ್ಲಿ ಇಡೋದಕ್ಕೆ, ಖರ್ಚಿನ ಬಗ್ಗೆ ತಲೇ ಕೆಡಿಸಿಕೊಳ್ಳುತ್ತೆ, ಹೇಳಿ ? ಅದಕ್ಕೇ ನಾನು ಹೇಳಿದ್ದು, ನಾನು ಅದೃಷ್ಟವಂತ ಜಾನ್ ಅಂತ ! ಆತ್ಮೀಯರೆ, ನಿಮ್ಮ ವಿರಾಮದಲ್ಲಿ ನನ್ನ ಲಕ್ಕೀ ಜಾನ್ಸ್ ಕ್ಲಬ್ಬಿಗೆ ಬನ್ನಿ. ಆದರೆ ಕೊಲೇ ಮಾಡೀರಿ – ಜೋಕೆ !.... ನಮಸ್ಕಾರ.

*(ಪ್ರಸಿದ್ಧ ಫ್ರೆಂಚ್ ಕತೆಗಾರ, ಗಾಯ್ ಡೆದ ಮೊಪಾಸಾ ಇವರ ಕತೆಯನ್ನು ಆಧರಿಸಿ, ಪ್ರಸಿದ್ಧ ರಷಿಯನ್ ಕತೆಗಾರ, ಲಿಯೊ ಟಾಲ್‌ಸ್ಟಾಯ್ ಬರೆದ ಕತೆಯೊಂದರ ನಾಟಕ ರೂಪ. ಕನ್ನಡ ರೂಪಾಂತರ ಲಕ್ಷ್ಮೀನಾರಾಯಣ ಎಚ್. ವಿ.)*

**ಲಕ್ಷ್ಮೀನಾರಾಯಣ ಎಚ್. ವಿ.**
೮೨, 'ಅಲಕ', ತ್ಯಾಗರಾಜ ರಸ್ತೆ, ಬೆಟ್ಟಮಕ್ಕಿ ಬಡಾವಣೆ
ಸೀಬಿನಕೆರೆ ಅಂಚೆ, ತೀರ್ಥಹಳ್ಳಿ - ೫೭೭ ೫೩೨

## ಪ್ರಿಯ ಮಾವನಿಗೆ


ಯ ಮಾವ
ನೀನು ನನ್ನ ನೋಡಿದ್ದು
ನಾನು ನಿನ್ನ ನೋಡಿದ್ದು
ಎರಡು ದಶಕ ಕಳೆದು ಹೋಗಿದೆ
ನೆನಪು ಮಾತ್ರ ಉಳಿದಿದೆ.

ಅವ್ವ
ಹೇಳುತ್ತಿರುತ್ತಾಳೆ
ನೀನು ಡ್ರೆಸು ತೊಟ್ಟು
ಬೂಟು ಮೆಟ್ಟು ಲಾಠಿ ಹಿಡಿದು
ಮನೆಗೆ ಬಂದದ್ದು
ಮನೆಯ ಮೂಲೆಯೊಂದರಲ್ಲಿ
ಪಾಠಿ ಪೆನ್ ಹಿಡಿದು
ಕುಳಿತ ನನ್ನ ನೋಡಿ :
'ಅಕ್ಕಾ,
ಕೂಲಿ ನಾಲಿ ಮಾಡಿಯಾದರೂ
ನಿನ್ನ ಮಗನ್ನ ಓದಿಸು
ದೊಡ್ಡ ವ್ಯಕ್ತಿಯಾಗುತ್ತಾನೆ' ಎಂದಿದ್ದು

ಹೌದು ಮಾವ
ನಿನ್ನ ಮಾತಿಗೆ ತಪ್ಪದ ಅವ್ವ
ನನ್ನನ್ನು ಓದಿಸಿದ್ದಾಳೆ
ಗೌಡರ ಮನೆಯ
ಹೆಂಡಿ - ಕಸ ಬಳೆದು.
ನೀನು ನುಡಿದಂತೆ
ನಾನೂ ऽऽ
ಬೆಳೆದಿದ್ದೇನೆ ! ಬೆಳೆಯುತ್ತಿದ್ದೇನೆ !!

ಮಾವ,
ನೋಡಿಲ್ಲಿ :
ಅರಿವಿಲ್ಲದವರು
ನನ್ನ ಅಣ್ಣ - ತಮ್ಮಂದಿರಿಗೆ
ಎಳೆದೆಳೆದು ಒದೆಯುತ್ತಿದ್ದಾರೆ !
ನನ್ನ ಅಕ್ಕ-ತಂಗಿಯರ
ಬಾಳು
ಹಗಲು, ರಾತ್ರಿಯಾಗಿದೆ !!

ಒಂದೆಡೆ
ಅರಿವಿಲ್ಲದವರ ದಬ್ಬಾಳಿಕೆ
ಇನ್ನೊಂದೆಡೆ
ನನ್ನವರ ಅವಸ್ಥೆಗೆ
ಧಿಕ್ಕಾರ ಹೇಳಿದ್ದೇನೆ.
ಕೆಲವರ ಕೋಪಕ್ಕೆ ಗುರಿಯಾಗಿದ್ದೇನೆ.

ಈ ವ್ಯವಸ್ಥೆ ಕಂಡು
ಕೇರಿಯ ಅಜ್ಜ
'ಲೋ ಊರಿಗೆ ಉಪಕಾರ ಮಾಡಲು ಹೋದ
ಬಸವಣ್ಣನನ್ನು ಕೊಂದರು !
ಗಾಂಧಿಯನ್ನು ಕೊಂದರು !!
ಹಾಗೆ,
ನಿನ್ನ ಮಾವ ಹವಾಲ್ದಾರನನ್ನು ಕೊಂದರು !!!
ಸುಮ್ಮನೆ ಊರ ಉಸಾಬರಿ ಬಿಟ್ಟು
ನಿನ್ನಷ್ಟಕ್ಕೆ ನಿನು ಇದ್ದು ಬಿಡು
ಇಲ್ಲದಿದ್ದರೆ ಊರು ಬಿಡು' ಎನ್ನುತ್ತಿದ್ದಾನೆ.

ಮಾವ
ಅಜ್ಜ
ಈಗ ಉಪದೇಶ ಮಾಡುವುದು ಬಿಟ್ಟಿದ್ದಾನೆ.
ಅವ್ವ
ನಿನ್ನ ಬಗ್ಗೆ ಮಾತನಾಡುವುದೇ ಇಲ್ಲ.

ಎಸ್ಸಾರ್. ರಾಮರಥ
ಹೊಂಬೆಳಕು, ಮುರನಾಳ ಅಂಚೆ, ಬಸವನ ಬಾಗೇವಾಡಿ ತಾಲ್ಲೂಕು
ಬಿಜಾಪುರ ಜಿಲ್ಲೆ

ನಿಂತ ನೆಲದ ಗುಣವೋ ಬಂದ ಕಾಲ ಗುಣವೋ ಏನೋ, ಅಂತೂ ಆದಿವಾಸಿಗಳು ಈಗ ತಮ್ಮ ನೆಲದ ಮೇಲೆಯೇ ಅವರು ಅತಿಕ್ರಮಣಕಾರರೆಂದು ಪರಿಗಣಿಸಲ್ಪಡುತ್ತಿದ್ದಾರೆ. ಸುಪ್ರೀಂ ಕೋರ್ಟಿನ ಆದೇಶದ ಮೇರೆಗೆ, ಸಂವಿಧಾನಬದ್ಧ ಬದುಕುವ ಹಕ್ಕಿನ ಹೊರತಾಗಿ, ಅವರು ತಮ್ಮ ನೆಲಸುಗಳಿಂದ ಎತ್ತಂಗಡಿಯಾಗುತ್ತಿದ್ದಾರೆ. ಜಾಗತೀಕರಣದ ಕತ್ತಿಯನ್ನು ಆದಿವಾಸಿಗಳ ನೆತ್ತಿಯ ಮೇಲೆ ಮಸೆಯಲಾಗುತ್ತಿದೆ. ಈ ಅನ್ಯಾಯ ಇಂದು ನೆನ್ನೆಯದೇನಲ್ಲ. ವಸಾಹತುಶಾಹಿ ಸಾಮ್ರಾಜ್ಯವಾದಿಗಳ ಒತ್ತುವರಿ ದಂಧೆ ಆರಂಭಗೊಂಡಂದಿನಿಂದಲೂ ನಿರಂತರವಾಗಿ ನಡೆದುಬರುತ್ತಿರುವ ಒಂದು ದಾರುಣ ಪ್ರಕ್ರಿಯೆಯೇ ಆಗಿದೆ. ಆದ್ದರಿಂದ ಅದು ನಡೆದುಬಂದ ದಾರಿಯತ್ತ ಒಂದು ಸಿಂಹಾವಲೋಕನ ಕ್ರಮದ ನೋಟ ಅಗತ್ಯವಾಗಿದೆ.

ಹೆಸರೇ ಸೂಚಿಸುವಂತೆ ಆದಿವಾಸಿಗಳೆಂದರೆ ಒಂದು ದೇಶದ ಮೂಲ ನಿವಾಸಿಗಳು. ಯೂರೋಪಿಯನ್ನರು ಕಾಲಿಡುವ ಮೊದಲು ಆಯಾ ದೇಶಗಳಲ್ಲಿದ್ದ ಮೂಲನಿವಾಸಿಗಳಿಗೆ ಈ ಹೆಸರಿದೆ. ಅಮೆರಿಕದ ರೆಡ್ ಇಂಡಿಯನ್ನರು, ಆಸ್ಟ್ರೇಲಿಯಾದ ಮಾವೊರಿಗಳು, ಆಫ್ರಿಕದ ಬುಷ್‌ಮನ್‌ಗಳು, ಇಂಡಿಯಾದ ಕೋಲರು, ಮುಂಡರು, ಅಂಡಮಾನಿನ ಜರವಾಗಳು, ಓಂಗೆಗಳು ಮೊದಲಾದವರು ಆಯಾ ಖಂಡಗಳ ಆದಿವಾಸಿಗಳಾಗುತ್ತಾರೆ. ಇವರು ಮೊದಲು ಪ್ರಧಾನವಾಗಿ ಅಲೆಮಾರಿಗಳಾಗಿದ್ದವರು. ತಮಗೂ ತಮ್ಮ ಪರಿವಾರ ಹಾಗೂ ಜಾನುವಾರುಗಳಿಗೂ ಆಹಾರ ನೀರನ್ನು ಅರಸುತ್ತ ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಹೋಗುತ್ತಿದ್ದವರು. ಗುಂಪು ಅಥವಾ ಪಂಗಡಗಳಲ್ಲಿ ವಾಸ ಮಾಡುವವರು. ಹೊಟ್ಟೆಪಾಡಿಗಾಗಿ ಬೇಟೆಯನ್ನೂ ಗೆಡ್ಡೆಗೆಣಸು ಕಂದ ಮೂಲಗಳನ್ನೂ ನಂಬಿರುವವರು. ಅನಂತರ ಬೇಸಾಯವನ್ನೂ ಪಶುಪಾಲನೆಯನ್ನೂ

**ಇತಿಹಾಸದುದ್ದಕ್ಕೂ ದಮನಕ್ಕೆ , ಶೋಷಣೆಗೆ ಒಳಗಾಗಿರುವ ಆದಿವಾಸಿಗಳ ಜೀವನ ಈಗ ಜಾಗತೀಕರಣದ ಪ್ರಕ್ರಿಯೆಗೆ ಸಿಕ್ಕಿ ಮತ್ತೂ ಜರ್ಜರಿತವಾಗಿದೆ. ಶತ ಶತಮಾನಗಳಿಂದಲೂ ಅವರು ವಾಸ ಮಾಡಿದ್ದ ನೆಲೆಯಿಂದ ಬಲಾತ್ಕಾರವಾಗಿ ಅವರನ್ನು ಹೊರಗೆ ದಬ್ಬಲಾಗುತ್ತಿದೆ. ಜೈವಿಕ ವೈವಿಧ್ಯತೆಗಳ ರಕ್ಷಣೆ, ವನ್ಯಪ್ರಾಣಿಗಳ ರಕ್ಷಣೆ, ಪಕ್ಷಿಧಾಮ, ಆರಕ್ಷಿತ ಕಾಡು ಮುಂತಾದ ಹಲವು ಭೋಳೆ ಆದರ್ಶಗಳ ಮುಸುಕಿನಲ್ಲಿ ಮಾನವ ಜಾತಿಯ ಈ ಆದಿಯ ಬುಡಕಟ್ಟುಗಳ ಮೇಲೆ ದಬ್ಬಾಳಿಕೆ ದಿನದಿನವೂ ಹೆಚ್ಚುತ್ತಿದೆ.**



# ಜಾಗತೀಕರಣ V/S ಆದಿವಾಸಿಗಳು

ಇತರ ಗೃಹಕೈಗಾರಿಕೆಗಳನ್ನೂ ಕಲಿತು ತಮಗೆ ಸರಿದೋರಿರುವ ಸ್ಥಳಗಳಲ್ಲಿ ನೆಲಸಿದವರು. ಮೊದಮೊದಲು ಹೊರದೇಶದಿಂದ ಬಂದವರು ಈ ಆದಿವಾಸಿಗಳೊಡನೆ ಸೆಣಸಿ, ಅವರಲ್ಲನೇಕರನ್ನು ನಿರ್ನಾಮ ಮಾಡಿದರು. ಅಳಿದುಳಿದ ಆದಿವಾಸಿಗಳು ಹೆದರಿ ಕಾಡು ಮೇಡುಗಳ ಅಂತರಾಳವನ್ನು ಸೇರಿದರು. ಕೆಲವೊಮ್ಮೆ ವಲಸೆ ಬಂದವರಿಗೂ ಮೂಲ ನಿವಾಸಿಗಳಿಗೂ ತೀವ್ರತರ ಘರ್ಷಣೆ ಬಹುಕಾಲ ನಡೆದಿದ್ದುಂಟು. ಯೂರೋಪಿಯನ್ನರು ಹೋದ ಕಡೆಗಳಲ್ಲೆಲ್ಲ ಆದಿವಾಸಿಗಳನ್ನು ಸದೆಬಡಿದಿದ್ದಾರೆ, ಸುಲಿದಿದ್ದಾರೆ. ಈಚೆಗೆ ಆದಿವಾಸಿ ಸಂರಕ್ಷಣಾ ಸಂಘವೊಂದು (೧೮೮೩) ಸ್ಥಾಪಿತವಾದರೂ ಅದರ ಕ್ಷೀಣ ಪ್ರತಿಭಟನೆ ವಸಾಹತುಶಾಹಿಗಳಿಗೆ ಯಾವ ಲೆಕ್ಕ ? ಆದರೂ ತನ್ನ ೨೫ನೇ ವರ್ಷದಲ್ಲಿ ಬಿರ್ಸಾ ಮುಂಡಾ ಎಂಬ ಆದಿವಾಸಿ ಯುವಕ ಬ್ರಿಟಿಷ್ ಆಳರಸರ ಹಾಗೂ ಇಂಡಿಯಾದ ಜಮೀನ್ದಾರ ವರ್ಗದ ವಿರುದ್ಧ ದಂಗೆ ಎದ್ದ. ಬ್ರಿಟಿಷರು ಅವನನ್ನು ರಾಂಚಿ ಜೈಲಿನಲ್ಲಿಟ್ಟಾಗ ಅಕಾಲಿಕ ಮರಣಕ್ಕೆ ತುತ್ತಾದ. ಇವನ ಹೋರಾಟದ ಫಲವಾಗಿ ತದನಂತರ ಸರ್ಕಾರ ಹಲವಾರು ಭೂ ಸುಧಾರಣಾ ಶಾಸನಗಳನ್ನು ಜಾರಿಗೆ ತಂದಿದ್ದು ಈಗ ಇತಿಹಾಸ.

ಆದಿವಾಸಿ ಜನಾಂಗಗಳ ಬಹುಪಾಲು ಜನ ತಮ್ಮ ಸಮಗ್ರವಾದ ಹಾಗೂ ಸಾಂಪ್ರದಾಯಿಕವಾದ ಜೀವನ ಪದ್ಧತಿಗಳನ್ನು ಇನ್ನೂ ಉಳಿಸಿಕೊಂಡು ಬಂದಿದ್ದಾರೆ. ಅವರ ಸಮಾಜದಲ್ಲಿ ಸಮಸಮತಾ ಭಾವನೆಗಳಿವೆ. ಸ್ತ್ರೀಯರನ್ನು ಅವರು ದಾಸ್ಯ ಪದ್ಧತಿಯಲ್ಲಿ ನಡೆಸಿಕೊಳ್ಳುವುದಿಲ್ಲ. ಜೀವನದ ಉತ್ತಮ ವಸ್ತುಗಳಿಗೆ, ನೃತ್ಯಗಾನಗಳ ಬಗೆಗೆ ಒಲವನ್ನು ಉಳಿಸಿಕೊಂಡಿದ್ದಾರೆ.

ಆದಿವಾಸಿ ಧರ್ಮವು ಪೂರ್ವಜರ ಆರಾಧನೆಯಿಂದ ಹುಟ್ಟಿತು ಎಂದೂ ಯಕ್ಷಿಣಿ, ಮಾಟ-ಮಂತ್ರಗಳಿಂದ ಹುಟ್ಟಿತು ಎಂದೂ ಮಾನವಶಾಸ್ತ್ರಜ್ಞರು ಅಭಿಪ್ರಾಯ ಪಡುತ್ತಾರೆ. ಸತ್ತವನ ಆತ್ಮ ಹಿಂತಿರುಗಿ ಬರುತ್ತದೆ ಅಥವಾ ಇನ್ನೊಂದು ಲೋಕಕ್ಕೆ ಹೋಗುತ್ತದೆ ಎಂಬ ನಂಬಿಕೆಯಿದ್ದು, ಸತ್ತವರ ಪ್ರಿಯ ವಸ್ತುಗಳನ್ನು ಅವನ ಸಮಾಧಿಯಲ್ಲಿ ಗೋರಿಗೊಳಿಸುವ ಪದ್ಧತಿ ರೂಢಿಯಲ್ಲಿತ್ತು. ಆತ್ಮವೆಂಬ ಚೈತನ್ಯ ಶಕ್ತಿಯು ಗಿಡ, ಮರ, ಪ್ರಾಣಿ, ಬೆಟ್ಟ, ಗುಡ್ಡ, ಕಲ್ಲು, ನಕ್ಷತ್ರ, ಸೂರ್ಯ, ಚಂದ್ರ ಮೊದಲಾದವುಗಳಲ್ಲಿ ವಾಸಿಸುತ್ತದೆ ಎಂಬ ನಂಬಿಕೆ ಇದ್ದುದರ ಫಲವಾಗಿ ವೃಕ್ಷ ಪೂಜೆ, ಪ್ರಕೃತಿ ಆರಾಧನೆ, ಭೂತಾರಾಧನೆ, ಪೂರ್ವಜರ ಆರಾಧನೆ, ಇತ್ಯಾದಿ ಕಂಡು ಬರುತ್ತದೆ. ಸಿಡಿಲು, ಗುಡುಗು, ಮಳೆ, ಪ್ರವಾಹ, ಜ್ವಾಲಾಮುಖಿ, ಭೂಕಂಪಗಳು ಆದಿವಾಸಿಗಳ ಪ್ರಕೃತಿ ಪೂಜೆ, ದೈವ ಕಲ್ಪನೆಗಳಿಗೆ ಕಾರಣವಾಗಿರಬೇಕು. ಪೂರ್ವಜರ ಆತ್ಮಗಳನ್ನು ತಣಿಸುವ ಸಲುವಾಗಿ ನೃತ್ಯ, ಗೀತ, ಬಲಿ, ಕಾಣಿಕೆ ಮುಂತಾದ ಪೂಜಾಪದ್ಧತಿಗಳೂ ಪುರೋಹಿತರೂ ಹುಟ್ಟಿಕೊಂಡಿರಬೇಕು. ಮಾನವ ಸಮಾಜದ ವಿಕಾಸದ ಇತಿಹಾಸದಲ್ಲಿ ಆದಿವಾಸಿ ಧರ್ಮ ಹಿರಿಯ ಪಾತ್ರ ವಹಿಸಿದೆ ಎಂಬುದರಲ್ಲಿ ಎರಡು ಮಾತಿಲ್ಲ. (ಕನ್ನಡ ವಿಶ್ವಕೋಶ ಸಂ. ೧, ಪುಟ. ೭೬೧)

ಮೇಲೆ ಹೆಸರಿಸಿದ ಖಂಡಾಂತರ ಆದಿವಾಸಿ ಬುಡಕಟ್ಟುಗಳಲ್ಲದೆ ಇನ್ನೂ ಅನೇಕ ಸ್ಥಳಜನ್ಯ ಆದಿವಾಸಿ ಪಂಗಡಗಳಿವೆ. ಭಾರತದ ಮಟ್ಟಿಗೆ ಹೇಳುವುದಾದರೆ ಕೇರಳದ ಮಲೆಯ ಒರಿಯರು, ಪುಲಯರು, ವೆಡ್ಡರು, ಫಣಿಯರು; ಬಿಹಾರದ ಗಡಬರು, ಬಿಹಾರ-ಒರಿಸ್ಸಾದ ಮುಂಡರು; ಬಂಗಾಳದ ಸಂತಾಲರು; ಮಧ್ಯಪ್ರದೇಶದ ಭಿಲ್ಲರು; ಆಂಧ್ರದ ರೆಡ್ಡಿಗಳು; ಅಸ್ಸಾಮಿನ ಖಾಸಿಗಳು ಮುಂತಾದವರು ಮುಖ್ಯರಾಗಿದ್ದಾರೆ. ಸಾಮಾನ್ಯವಾಗಿ ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಧರ್ಮಗಳ ಸಂಸರ್ಗಕ್ಕಿರುವ ಆದಿವಾಸಿಗಳು ಆಯಾ ಧರ್ಮಗಳ ಪ್ರಭಾವಕ್ಕೆ ಒಳಗಾಗಿರುತ್ತಾರೆ. ಆದರೆ ಆಫ್ರಿಕ, ಆಸ್ಟ್ರೇಲಿಯ, ಅಸ್ಸಾಂ, ಅಂಡಮಾನಿನ ಕೆಲವು ಆದಿವಾಸಿ ಪಂಗಡಗಳು ಇನ್ನೂ ಯಾವ ಜಾಗತಿಕ ಧರ್ಮದ ಪ್ರಭಾವಕ್ಕೂ ಒಳಗಾಗದೆ ತಮ್ಮತನ (ಐಡಂಟಿಟಿ)ವನ್ನು ಉಳಿಸಿಕೊಂಡಿವೆ.

ಪ್ರಸ್ತುತ ಆದಿವಾಸಿಗಳ ಬದುಕು ಕಳ್ಳನಿಗೆ ಹೆದರಿ ಕಾಡು ಹೊಕ್ಕರೆ ಅಲ್ಲಿ ಹುಲಿ ಹಿಡಿಯಿತು ಎಂಬಂತಾಗಿದೆ. ಪುರಾಣ-ಇತಿಹಾಸದ ಕಾಲದಿಂದಲೂ ಅವರ ಗತಿ ಹೀಗೆಯೇ ಇದೆ. ಭಾರತೀಯ ಪುರಾಣಗಳಲ್ಲಿ ಅವರನ್ನು ದಸ್ಯುಗಳು, ರಾಕ್ಷಸರು ಮುಂತಾಗಿ ಕರೆದು ಸಿಕ್ಕಸಿಕ್ಕಲ್ಲಿ ಸಂಹಾರ ಮಾಡಲಾಗಿದೆ. ರಾಮಾಯಣ ಮಹಾಭಾರತಗಳಲ್ಲಿಯೂ ಈ ಸಂಹಾರ ಎಡೆಬಿಡದೆ ಸಾಗಿದೆ. ನಿದರ್ಶನಕ್ಕಾಗಿ ಭಾರತದ ಖಾಂಡವವನ ದಹನ ಸಂದರ್ಭವನ್ನು ಗಮನಿಸಿ. ಲೆಕ್ಕವಿಲ್ಲದಷ್ಟು ಜೀವಜಂತುಗಳೊಂದಿಗೆ ಆದಿವಾಸಿ ಗಿರಿಜನರನ್ನು ಅರ್ಜುನ ಅದರಲ್ಲಿ ಸುಟ್ಟುಹಾಕಿದ. ಇಂದ್ರಪ್ರಸ್ಥ ನಗರಾಭಿವೃದ್ಧಿಗಾಗಿ ಖಾಂಡವವನ ಸುಟ್ಟು ಒತ್ತುವರಿ ಮಾಡಲಾಗುತ್ತದೆ. ಅದಕ್ಕಾಗಿ ಆದಿವಾಸಿಗಳೇ ಮೊದಲು ಬಲಿಯಾದರು.

ಇನ್ನು ಇತಿಹಾಸ ಕಾಲದಲ್ಲಿ ಏನಾಯಿತೆಂಬುದು ಎಲ್ಲರಿಗೂ ಗೊತ್ತು. ಈಗಾಗಲೇ ಆರಂಭದಲ್ಲಿ ಸೂಚಿಸಿರುವಂತೆ ಜಾಗತೀಕರಣದ ರಥಚಕ್ರಕ್ಕೆ ಸಿಕ್ಕ ಆದಿವಾಸಿಗಳ ಬದುಕು ಜರ್ಜರಿತವಾಗುತ್ತಿದೆ. ಅವನ್ನು ಇನ್ನಿಷ್ಟು ವಿವರವಾಗಿ ಮುಂದೆ ಕಾಣಿಸಲಾಗಿದೆ. ಇದು ಜೀವ ವೈವಿಧ್ಯತೆಯ, ವನೌಷಧಿ ಗಿಡಮೂಲಿಕೆಗಳ ಹಾಗೂ ಖನಿಜ ಸಂಪನ್ಮೂಲಗಳ ಲೂಟಿಯ ಯುಗ. ವನೌಷಧಿ ಗಿಡ ಮೂಲಿಕೆಗಳು, ಜೈವಿಕಸಂಪನ್ಮೂಲಗಳು ಹಾಗೂ ಯುದ್ಧೋದ್ಯಮಕ್ಕೆ ಅಗತ್ಯವಾದ ಖನಿಜ ಸಂಪನ್ಮೂಲಗಳ ಮೇಲೆ ಕಣ್ಣಿಟ್ಟ ನವ ಸಾಮ್ರಾಜ್ಯಶಾಹಿಗಳು ಒತ್ತುವರಿ ತೆರವಿನ ಹೆಸರಿನಲ್ಲಿ ಕಾಡುಗಳನ್ನು ಜನರಿಂದ ಕಿತ್ತುಕೊಳ್ಳುವ ಸಂಚು ನಡೆಸುತ್ತಿದ್ದಾರೆ.

ಪ್ರೊ. [illegible]

ಜೈವಿಕ ತಂತ್ರಜ್ಞಾನದ ಬೆಳಕಿನಿಂದ ನೋಡಿದರೆ ಉಷ್ಣ ವಲಯದ ಕಗ್ಗತ್ತಲ ಖಂಡಗಳಲ್ಲಿ ಅಪೂರ್ವ ಬೆಲೆ ಬಾಳುವ ಜೈವಿಕ ಸಂಪನ್ಮೂಲವಿದೆ. ಅದನ್ನು ದೋಚುವು ದಕ್ಕಾಗಿ ಹೊರಟ ಪಾಶ್ಚಾತ್ಯರು ಅದಕ್ಕೆ 'ಕಾಡು ರಕ್ಷಣೆ' ಎಂದು ಕರೆದಿದ್ದಾರೆ. ಇದು ಸ್ಥಳೀಯರನ್ನು ದಿಕ್ಕು ತಪ್ಪಿಸುವ ಹುನ್ನಾರ. ಆದಿವಾಸಿಗಳು ಕಾಡಿನಲ್ಲಿದ್ದರೆ ತಮ್ಮ 'ಲೂಟಿ'ಗೆ ಅಡಚಣೆಯೆಂದು ಬಗೆದು ಅವರನ್ನು ಅಲ್ಲಿಂದ ಕಾನೂನು ಬದ್ಧವಾಗಿ ಹೊರಹಾಕಲು ಯತ್ನಿಸುತ್ತಿದ್ದಾರೆ.



೧೯೮೦ಕ್ಕಿಂತ ಮೊದಲು ಯಾರೂ ಈ ನಿಟ್ಟಿನಲ್ಲಿ ಚಿಂತಿಸಿರಲಿಲ್ಲ. ಆದರೆ ಜೈವಿಕ ತಂತ್ರಜ್ಞಾನ ಬೆಳೆದಂತೆಲ್ಲ ಮುಂದುವರಿದ ರಾಷ್ಟ್ರಗಳಿಗೆ ಜೀವ ವೈವಿಧ್ಯದ ಹಾಗೂ ವನೌಷಧೀಯ ತಾಣಗಳು ಖಜಾನೆಗಳಂತೆ ಕಂಡು ಬಂದುದರಲ್ಲಿ ಆಶ್ಚರ್ಯವಿಲ್ಲ. ಈ ಕಾರಣದಿಂದ ಅವರಿಗೆ ಎಲ್ಲಿಲ್ಲದ 'ಕಾಡು ಪ್ರೀತಿ' ಮೂಡಿಬಿಟ್ಟಿತು. ಏಕೆಂದರೆ ಬೆಲ್ಲ ಇದ್ದಲ್ಲಿ ತಾನೆ ನೊಣ ಮುತ್ತುವುದು? ಅದಕ್ಕಾಗಿ ೧೯೯೨ರಲ್ಲಿ ಬ್ರೆಜಿಲ್‌ನಲ್ಲಿ ಮೊಟ್ಟ ಮೊದಲ ಭೌಗೋಳಿಕ ಸಮ್ಮೇಳನವನ್ನು ಕರೆಯಲಾಯಿತು. ಅಲ್ಲಿ ವಾದ - ವಿವಾದ ಗಳು ನಡೆದು ಕಡೆಗೆ ೧೬೫ ದೇಶಗಳು ಒಂದು ಒಪ್ಪಂದಕ್ಕೆ ಬಂದುವು. ಅಲ್ಲಿಂದಲೇ 'ಜೈವಿಕ ಸಂಪನ್ಮೂಲ ನೆಲೆಗಳು ಜಾಗತಿಕ ಆಸ್ತಿ' ಎಂಬ ಠರಾವು ಅನುಷ್ಠಾನಕ್ಕೆ ಬಂದಿತು. ಶೃಂಗೇರಿಯ ಕಲ್ಕುಳಿ ವಿಠಲ ಹೆಗ್ಗಡೆಯವರು ಹೇಳುವಂತೆ ಜೈವಿಕ ಸಂಪನ್ಮೂಲಗಳನ್ನು ದೋಚಲು ಮಾಡಿಕೊಂಡ ಸಂಚು ಈ ಒಪ್ಪಂದ. ಮುಂದುವರಿದ ದೇಶಗಳ ಇಂಥ ಒಳಸಂಚನ್ನು ಅರ್ಥಮಾಡಿಕೊಳ್ಳಲಾರದ ಭಾರತ ದಂತಹ ಮೂರನೆ ಜಗತ್ತಿನ ರಾಷ್ಟ್ರಗಳು ಕಾಡು ರಕ್ಷಿಸುವ ಹೆಸರಿನಲ್ಲಿ ಬರುವ ದೇಣಿಗೆಗಾಗಿ ಕೈಚಾಚಿದ್ದು ಆದಿವಾಸಿ ಗಳ ದುರ್ದೈವವಾಗಿ ಪರಿಣಮಿಸಿತು. ಆದರೆ ಇದೆಲ್ಲ ಸಾರ್ವಜನಿಕವಾಗಿ ತಿಳಿದುಬಂದದ್ದು ತೀರ ಇತ್ತೀಚೆಗೆ.

ವರ್ಲ್ಡ್ ಬ್ಯಾಂಕ್, ವರ್ಲ್ಡ್ ರೀಸರ್ಚ್ ಇನ್‌ಸ್ಟಿಟ್ಯೂಟ್, ವರ್ಲ್ಡ್‌ವೈಡ್ ಫಂಡ್ ಫಾರ್ ನೇಚರ್, ಇಂಟರ್‌ನ್ಯಾಷನಲ್ ಯೂನಿಯನ್ ಫಾರ್ ಕನ್ಸರ್ವೇಶನ್ ಆಫ್ ನೇಚರ್ ಅಂಡ್ ನ್ಯಾಚುರಲ್ ರಿಸೋರ್ಸಸ್, ವರ್ಲ್ಡ್ ಹೆಲ್ತ್ ಆರ್ಗನೈಸೇಷನ್ – ಹೀಗೆ ಹತ್ತಾರು ಸಂಸ್ಥೆಗಳ ಹೆಸರಿನಲ್ಲಿ ಸಾಮ್ರಾಜ್ಯಶಾಹಿ ದೇಶಗಳು ಭಾರತದಂತಹ ದೇಶಗಳ ಅಪೂರ್ವ ಜೈವಿಕ ವೈವಿಧ್ಯದ ಸಂರಕ್ಷಣೆಗೆ ಯೋಜನೆಗಳನ್ನು ರೂಪಿಸಿ, ದೇಣಿಗೆಯನ್ನು ನೀಡುತ್ತಿವೆ. ಅಮೆರಿಕಾವೊಂದೇ ಎಂಟು ಬಿಲಿಯನ್ ಡಾಲರ್‌ನಷ್ಟು ಹಣವನ್ನು ಈ ಯೋಜನೆಗಳಿಗಾಗಿ ಸುರಿದಿದೆ. ಇದರ ಹಿಂದಿರುವ ಉದ್ದೇಶ ಸ್ಪಷ್ಟ. ಲಾಭವಿಲ್ಲದೆ ಈ ಯೋಜನೆಯ ಮೇಲೆ ಹಣ ಹೂಡಲು ಅವರೇನು ಮೂರ್ಖರೇ? ಇದೆಲ್ಲಾ ಉಷ್ಣವಲಯದ ಕಾಡುಗಳಲ್ಲಿ ರುವ ಜೈವಿಕ ಸಂಪನ್ಮೂಲಗಳ ಲೂಟಿಗಾಗಿಯೇ ಎಂಬ ಗುಟ್ಟು ಯಾರಿಗಾದರೂ ತಿಳಿದುಹೋಗುತ್ತದೆ. ಆದರೆ ನೆಲ, ಜಲ, ಖನಿಜ ಸಂಪನ್ಮೂಲಗಳನ್ನು ವಿದೇಶಿಯರಿಗೆ ಅಗ್ಗವಾಗಿ ಮಾರಿಕೊಳ್ಳುವ ಮೂಲಕ ವಿಶ್ವಬ್ಯಾಂಕಿನ ಸಾಲದ ಬಡ್ಡಿ ಕಟ್ಟುವ ನಮ್ಮ ಪ್ರಭುತ್ವಗಳು ವಿದೇಶಿಯರಿಗೆ ರತ್ನಗಂಬಳಿ ಹಾಸಿ ಸ್ವಾಗತಿಸುತ್ತಿವೆ. ಅವರು ಗುರ್ತಿಸಿರುವ ಕಾಡುಗಳನ್ನು ಅಭಯಾರಣ್ಯಗಳು, ರಾಷ್ಟ್ರೀಯ ಉದ್ಯಾನ ವನಗಳು ಮುಂತಾದ ಹೆಸರುಗಳಿಂದ ಕರೆದು ಅಲ್ಲಿರುವ ಆದಿವಾಸಿಗಳನ್ನು ಎತ್ತಂಗಡಿ ಮಾಡಲು ಹೊರಟಿವೆ. ರಕ್ಷಿತಾರಣ್ಯಗಳಲ್ಲಿ ಜನವಸತಿ ಇರಕೂಡದು ಎಂಬ ಕಾನೂನನ್ನು ಮಾಡಿ, ಅದನ್ನು ಆದಿವಾಸಿಗಳು ಮೀರುವವ ರಾದ್ದರಿಂದ ಕಾನೂನುರೀತ್ಯಾ ಅವರು ಹೊರಗೆ ಹೋಗಬೇಕೆಂದು ಸುಪ್ರೀಂ ಕೋರ್ಟಿನಿಂದ ಆದೇಶವನ್ನು ಹೊರಡಿಸಲಾಗಿದೆ. ಆದರೆ ಇದೇ ಸುಪ್ರೀಂ ಕೋರ್ಟ್ ಆದಿವಾಸಿಗಳ ಹಕ್ಕೊತ್ತಾಯದ ಮೇರೆಗೆ ಅವರನ್ನು ಇದ್ದಲ್ಲಿಯೇ ಉಳಿಸುವುದು ಎಂಬ ಆದೇಶವನ್ನು ೧೯೮೦ರಲ್ಲಿ ನೀಡಿತ್ತು.

ಈಗ 'ಜೀವ ವೈವಿಧ್ಯ' ತಾಣಗಳು ಅಂತರರಾಷ್ಟ್ರೀಯ 'ಆಸ್ತಿ' ಎಂದು ಒಪ್ಪಂದವಾಗಿರುವುದರಿಂದ ಆದಿವಾಸಿ ಗಳು ಅಲ್ಲಿಂದ ಕಾಲ್ತೆಗೆಯಬೇಕಾಗಿದೆ. ಕಳೆದ ಐವತ್ತು ವರ್ಷಗಳಲ್ಲಿ ಅಭಿವೃದ್ಧಿಯ ಹೆಸರಿನಲ್ಲಿ ಸು. ೩.೫ ಕೋಟಿ ಆದಿವಾಸಿಗಳು ನಿರ್ವಸಿತರಾಗಿದ್ದಾರೆ. ಇವರಲ್ಲಿ ಶೇ. ೭೦ ಜನರಿಗೆ ನಿಲ್ಲಲು ನೆಲೆ ಇಲ್ಲ, ಮೇಲೆ ಸೂರಿಲ್ಲ. ಹೀಗೆ ದಲಿತರನ್ನು, ಆದಿವಾಸಿಗಳನ್ನು ಅದೃಶ್ಯ ನಿರ್ವಸಿತರನ್ನಾಗಿ ಮಾಡುವುದರಲ್ಲಿಯೇ ಭವ್ಯ ಭಾರತ ದಿವ್ಯ ಕನಸು ಸಾಕಾರವಾಗುತ್ತಿದೆ!

ಬೆಟ್ಟದ ನೆಲ್ಲಿಕಾಯಿಗೂ ಸಮುದ್ರದ ಉಪ್ಪಿಗೂ ಎತ್ತಣಿಂದೆತ್ತ ಸಂಬಂಧವಯ್ಯಾ ಎಂಬಂತೆ ಜಾಗತೀ ಕರಣದ ನೇರ ಕೇಡಿಗೆ ತುತ್ತಾಗುತ್ತಿದ್ದಾರೆ ಅವರು. ಆದಿವಾಸಿಗಳ ನೆಲಸುಗಳಲ್ಲಿ ಜೈವಿಕ ತಂತ್ರಜ್ಞಾನಕ್ಕೆ ಬೇಕಾಗುವ ಸ್ಪೀಷೀಸ್ ಹಾಗೂ ಯುದ್ಧೋದ್ಯಮಗಳಿಗೆ ಬೇಕಾಗುವ ಅನೇಕ ಖನಿಜಗಳು ಇರುವುದರಿಂದ ಅವುಗಳನ್ನು ದೋಚುವುದಕ್ಕಾಗಿ ಸಿದ್ಧವಾಗಿರುವ ಬಹು ರಾಷ್ಟ್ರೀಯ ಕಂಪನಿಗಳು ಅವರನ್ನು ಕಾನೂನುರೀತ್ಯಾ ಹೊರಗಟ್ಟಲು ಪೊಲೀಸ್ ರಕ್ಷಣೆಯಲ್ಲಿ ಹೊರಟಿವೆ. ಒರಿಸ್ಸಾದಂತಹ ಬಂಜರು ಗುಡ್ಡ ಪ್ರದೇಶದಲ್ಲಿ ಕೃಷಿಯಿಂದ ಜೀವನ ಸಾಗಿಸುತ್ತಿದ್ದ ಆದಿವಾಸಿಗಳ ಮೇಲೆ ಲಾಠಿ ಚಾರ್ಜ್, ಗೋಲಿಬಾರ್ ನಡೆದಿವೆ. ಯಾಕೆಂದರೆ ಅಲ್ಲಿ ಯಥೇಚ್ಛ ದೊರೆಯುವ ಅಲ್ಯೂಮಿನಿಯಂ, ಫಾಸ್ಫೇಟ್ ಖನಿಜಗಳು ಯುದ್ಧಾಸ್ತ್ರಗಳ ತಯ್ಯಾರಿಕೆಗಾಗಿ ಅಪಾರ ಬೇಡಿಕೆಯಲ್ಲಿವೆ. ಆದ್ದರಿಂದ ೧೯೯೧ರ ಕೊಲ್ಲಿ ಯುದ್ಧದ ತರುವಾಯ ಒರಿಸ್ಸಾದಲ್ಲಿ ಗಣಿಗಾರಿಕೆ ಶೀಘ್ರ ಗತಿಯಲ್ಲಿ ನಡೆಯುತ್ತಿದ್ದ ಅಲ್ಲಿಂದ ಆದಿವಾಸಿಗಳ ಎತ್ತಂಗಡಿಯಾಗು ತ್ತಿದೆ. ಇದನ್ನು ಪ್ರತಿಭಟಿಸಿದ ಕಾಶಿಪುರ ಗ್ರಾಮದ ಆದಿವಾಸಿ ಗಳಲ್ಲಿ ಕೆಲವರನ್ನು ಗುಂಡಿಕ್ಕಿ ಕೊಲ್ಲಲಾಯಿತು. ಇದೇ ಪರಿಸ್ಥಿತಿ ಜಗತ್ತಿನ ಯಾವ ನ್ಯಾಷನಲ್ ಪಾರ್ಕ್‌ನ್ನು ಗಮನಿಸಿದರೂ ಈ ಮಾತು ವೇದ್ಯವಾಗುತ್ತದೆ. ನರ್ಮದಾ ಯೋಜನೆಯಂತಹ ಬೃಹತ್ ನೀರಾವರಿ ಅಣೆಕಟ್ಟುಗಳು ಆದಿವಾಸಿಗಳನ್ನು ಮುಳುಗಡೆ ಮಾಡುತ್ತಿವೆ. ದಿನ ಬೆಳಗಾದರೆ ನರ್ಮದಾ ಕಣಿವೆಯಲ್ಲಿ ಮುಷ್ಕರ, ಲಾಠಿ ಚಾರ್ಜುಗಳು ಸಾಮಾನ್ಯವಾಗುತ್ತಿವೆ. ಕೇರಳದ ವೈನಾಡಿನ ಮುತುಂಗಾದ ಗೋಲಿಬಾರ್ ಜಲಿಯನ್‌ವಾಲಾಬಾಗನ್ನು ನೆನಪಿಗೆ ತರುವಂತಿದೆ. ಜನತೆಯ ಪ್ರತಿನಿಧಿಗಳು ಮಾತ್ರ ಪಕ್ಷಭೇದವಿಲ್ಲದೆ ವಸಾಹತು ಕೊಳ್ಳೆ ನೀತಿಗೆ ಅನುಕೂಲಕರವಾಗಿಯೇ ನಡೆದುಕೊಳ್ಳುತ್ತಿದ್ದಾರೆ. ಹೀಗೆ ಸಂವಿಧಾನಬದ್ಧ ಹಕ್ಕುಗಳಿಗಾಗಿ ಹೋರಾಡುವ ಆದಿವಾಸಿ ಗಳನ್ನು ಶಾಸಕಾಂಗ, ನ್ಯಾಯಾಂಗ ಹಾಗು ಕಾರ್ಯಾಂಗ ಗಳು ಒಂದಾಗಿಯೇ ಹತ್ತಿಕ್ಕುತ್ತಿವೆ. ಆ ಬಡಪಾಯಿಗಳಿಗೆ ಇನ್ನಾವ ಆಸರೆ ? ಇನ್ನಾವ ದಿಕ್ಕು ? ಹಣಬಲ ಅಧಿಕಾರಬಲ ಇರುವವರ ಕಡೆಗೇ ಸಾಮಾನ್ಯವಾಗಿ ನ್ಯಾಯಾಂಗವೂ ಒಲಿಯುತ್ತಿರುವುದು ನಮ್ಮ ಪ್ರಜಾತಂತ್ರದ ಅಣಕವಾಗಿದೆ. ಈ ಎಲ್ಲ ವಿದ್ಯಮಾನಗಳು ಕೇವಲ ಆದಿವಾಸಿಗಳ ಮೇಲೆ ಮಾತ್ರ ನಡೆಸುವ ಆಕ್ರಮಣವಲ್ಲ. ಎಂದರೆ ಜಾಗತೀಕರಣದ ಹಿಂದಿನ ಶಕ್ತಿಗಳು ಸಾರ್ವಜನಿಕ ವಲಯದ ಉದ್ದಿಮೆಗಳನ್ನು ಖಾಸಗಿಯವರಿಗೆ ಹರಾಜು ಹಾಕುತ್ತಿವೆ. ಸಬ್ಸಿಡಿ ಸಾಲಗಳನ್ನು ಮನ್ನಾ ಮಾಡಿದ್ದರಿಂದ ರೈತರು ಸಾಮೂಹಿಕ ಆತ್ಮಹತ್ಯೆಯ ದಾರಿ ಹಿಡಿದಿದ್ದಾರೆ. ಕೃಷಿ-ಕಾರ್ಮಿಕರು ಬೀದಿ ಪಾಲಾಗುತ್ತಿದ್ದಾರೆ. ಆದರೆ ಇ-ಮೇಲ್, ಇ-ಟೆಕ್, ಕಂಪ್ಯೂಟರ್‌ತಜ್ಞರಾದ ಕೆಲವೇ ಮಂದಿಯ ಸ್ವತ್ತು-ಸಂಪತ್ತು ಅಧಿಕವಾಗುತ್ತಿದೆ. ಇದೆಂಥ ಆರ್ಥಿಕ ಸಾಮಾಜಿಕ ನ್ಯಾಯ? ಇದಕ್ಕಿಂತ ಭಯಂಕರ ಪಿಡುಗು ಎಂದರೆ ಸಾಂಸ್ಕೃತಿಕವಾಗಿ ಒಂದಾಗಿದ್ದ ಭಾರತ ಒಡೆದು ಹೋಗುತ್ತಿರುವುದು. ದಲಿತರು ಮತ್ತು ಆದಿವಾಸಿಗಳನ್ನು ದುರುಪಯೋಗಪಡಿಸಿಕೊಳ್ಳುತ್ತಿರುವ ಹಿಂದುತ್ವದ ಶಕ್ತಿಗಳು ಅಲ್ಪಸಂಖ್ಯಾತರನ್ನು ಬಗ್ಗು ಬಡಿಯುವುದರಲ್ಲಿ ಮಗ್ನವಾಗಿವೆ. ಒಡೆದು ಆಳುವ



ಅಳಿವಿನ ಅಂಚಿನಲ್ಲಿರುವ ಅಂಡಮಾನಿನ ಜರವಾ ಆದಿವಾಸಿಗಳು

ವಸಾಹತುಶಾಹಿ ನೀತಿಯನ್ನು ಕರಗತ ಮಾಡಿಕೊಂಡಿರುವ ಸಂಘ ಪರಿವಾರವು ಮತ್ತೆ ಅಧಿಕಾರದಲ್ಲಿ ಮುಂದುವರಿಯುವ ಲೆಕ್ಕಚಾರದಲ್ಲಿ ನಿರತವಾಗಿದೆ.

ವನವಾಸಿ ಕಲ್ಯಾಣ ಆಶ್ರಮ ಮತ್ತು ಕೇಸರೀ ಎನ್. ಜಿ. ಓ.ಗಳು ಭಾರತದ ಎಲ್ಲೆಡೆ ಆದಿವಾಸಿ ಸಮುದಾಯಗಳನ್ನು ತಮ್ಮ ಕಕ್ಷೆಗೆ ತೆಗೆದುಕೊಳ್ಳಲು ಪೈಪೋಟಿ ನಡೆಸುತ್ತಿವೆ. ಇವರಲ್ಲದೆ ಸಾಮ್ರಾಜ್ಯಶಾಹೀ ಏಜೆಂಟರುಗಳಾದ ಎನ್. ಜಿ. ಓ.ಗಳು ಬೇರೆ.

ದಲಿತರನ್ನು ಆದಿವಾಸಿಗಳನ್ನು ಬಿಕ್ಕು ತಿನ್ನಿಸುತ್ತಿದ್ದಾರೆ. ಕೇರಳದ ಆದಿವಾಸಿ ಗೋತ್ರ ಮಹಾಸಭಾದ ನೇತಾರರಾದ ಸಿ. ಕೆ. ಜಾನು ಅವರ ಪ್ರಕಾರ ಸು. ೧೫ ಜನ ಆದಿವಾಸಿಗಳಿಗೆ ೨೫ ಜನ ಎನ್. ಜಿ. ಓ.ಗಳಿರುತ್ತಾರೆ. ಸದ್ಯಕ್ಕೆ ಇವರಿಂದ ಆದಿವಾಸಿಗಳ ವಿಮೋಚನೆ ಆಗ ಬೇಕಾಗಿದೆ. ಯಾಕೆಂದರೆ ಸಂಘಟಿತರಾಗಿ ಹೋರಾಟಕ್ಕಿಳಿ ಯುವ ಆದಿವಾಸಿಗಳನ್ನು ವಿದೇಶೀ ಎಂಜಲುಕಾಸಿಗೆ ಕೈ ಚಾಚುವಂತೆ ಮಾಡುವ ಈ ಎನ್. ಜಿ. ಓ.ಗಳು ಅವರ ದಂಗೆಯ ಪ್ರವೃತ್ತಿಯನ್ನು ಶಮನ ಗೊಳಿಸುತ್ತಿದ್ದಾರೆ. ಜಾಗತೀಕರಣವೆಂದರೆ ಎನ್. ಜಿ. ಓ.ಗಳು ನೆಯ್ದ ಆಮಿಷಗಳ ಬಲೆಗೆ ಬೀಳುವುದು ಎಂಬಂತಾಗಿದೆ. ನಾಯಿಕೊಡೆಗಳಂತೆ ರಾಷ್ಟ್ರದ ಮೂಲೆ ಮೂಲೆಗಳಿಗೂ ಈ ಬಲೆ ನೆಯ್ದುಕೊಂಡಿದೆ. ತಮ್ಮ ಅರಿವಿಲ್ಲದೆಯೇ ವಿದೇಶೀ ಕೊಳ್ಳೆಗಾರರ ಏಜೆಂಟರುಗಳಾಗಿ ದಲಿತ ಹಾಗೂ ಆದಿವಾಸಿ ಯುವ ಜನಾಂಗ ಕಾರ್ಯ ನಿರ್ವಹಿಸುತ್ತಿರುವುದು ಕಂಡು ಬರುತ್ತಿದೆ. ಆದ್ದರಿಂದ ಮೊದಲು ಇವರನ್ನು ಎನ್.ಜಿ.ಓ. ಗಳು ಅಕ್ಟೋಪಸ್ ಹಿಡಿತದಿಂದ ಪಾರು ಮಾಡಬೇಕಾಗಿದೆ.

ಇದೂ ಅಲ್ಲದೆ ಗಾಯದ ಮೇಲೆ ಬರೆ ಎಂಬಂತೆ ಅಂತರರಾಷ್ಟ್ರೀಯ ವನ್ಯಪ್ರಾಣಿ ಸಂರಕ್ಷಣಾ ಯೋಜನೆಯ ವತಿಯಿಂದ ಸ್ಥಾಪಿಸಲ್ಪಡುತ್ತಿರುವ ಸಿಂಹಧಾಮ, ಹುಲಿ ಧಾಮ, ಪಕ್ಷಿಧಾಮ ಮುಂತಾದವುಗಳಿಗೆ ಅನುವು ಮಾಡಿ ಕೊಡಲು ಆದಿವಾಸಿಗಳು ತಮ್ಮ ನೆಲಸುಗಳಿಂದ ದೂರ ಹೋಗಬೇಕಾಗಿದೆ. ಡಾ. ಉಲ್ಲಾಸ ಕಾರಂತರಂತಹ ಪ್ರಾಣಿ ದಯಾ ಪ್ರೇಮಿಗಳು ಹುಲಿಗಳಿಗೆ ಮಿತ್ರರೂ ಆದಿವಾಸಿಗಳ ಹಿತಶತ್ರುಗಳೂ ಆಗಿ ಪರಿಣಮಿಸಿದ್ದಾರೆ. ಅವರಿಗೆ ವಿದೇಶಿ ಹಣ ಡಾಲರ್ ರೂಪದಲ್ಲಿ ಹೊಳೆಯಂತೆ ಹರಿದು ಬರುತ್ತಿದ್ದು ಅದರ ಸ್ವಲ್ಪ ಭಾಗವನ್ನು ಅರಣ್ಯ ಇಲಾಖೆಯ ನೌಕರರಿಗೂ ಪ್ಯಾಕೇಜ್ ಕೊಡುತ್ತಾರೆ; ಸೆಕೆಂಡ್ ಹ್ಯಾಂಡ್ ವಿದೇಶಿ ಜೀಪು ಹಾಗೂ ಬೆಲೆ ಬಾಳುವ ವಿದೇಶಿ ಕ್ಯಾಮರ ಗಳನ್ನು ಸರ್ಕಾರಕ್ಕೆ ಪುಕ್ಕಟೆ ನೀಡುವ ಮೂಲಕ ತಮ್ಮ ಅಸ್ತಿತ್ವವನ್ನು ಕಾಪಾಡಿಕೊಳ್ಳುತ್ತಿದ್ದಾರೆ, ಸರ್ಕಾರಕ್ಕೆ ಸಲಹೆಗಾರ ರಾಗಿದ್ದಾರೆ. ಈ ಮಹನೀಯರುಗಳಿಗೆ ಆದಿವಾಸಿಗಳಿರುವ ದಟ್ಟಾರಣ್ಯಗಳಲ್ಲಿ ಹುಲಿ ವಾಸಿಸಲಾರದು ಎಂಬ ಸಾಮಾನ್ಯ ತಿಳುವಳಿಕೆಯೂ ಇಲ್ಲ. ಆದರೂ ಆದಿವಾಸಿಗಳನ್ನು ಇಲ್ಲಿಂದ ಎತ್ತಂಗಡಿ ಮಾಡುವುದು ಏಕೆಂದರೆ ಅವರಿದ್ದರೆ ಕಾಡು ಕಳ್ಳರಿಗೆ, ವನೌಷಧಿಗಳಿಗೆ ಸಂಬಂಧಿಸಿದ ಗಿಡ ಮೂಲಿಕೆ ಗಳ ಅಂತರರಾಷ್ಟ್ರೀಯ ಲೂಟಿಕೋರರಿಗೆ ಅಡಚಣೆ ಯಾಗುತ್ತದೆ ಎಂಬ ಕಾರಣಕ್ಕಾಗಿ.

ಒಟ್ಟಾರೆಯಾಗಿ ಜೈವಿಕ ತಂತ್ರಜ್ಞಾನದಿಂದ ರಾಷ್ಟ್ರಕ್ಕೆ ಬರುವ ಆದಾಯದ ಬಗ್ಗೆ ಹುಸಿಭರವಸೆ ನೀಡುವ ವಿದೇಶೀ ಬಂಡವಾಳಗಾರರು, ಅವರಿಗೆ ಶಾಮೀಲಾಗಿ 'ಜೀವ ವೈವಿಧ್ಯದ ತಾಣಗಳು ಅಂತರರಾಷ್ಟ್ರೀಯ ಆಸ್ತಿ' ಎಂಬ ಘೋಷಣೆಗೆ ಸಹಿಮಾಡಿದ ಸರ್ಕಾರ, ಆ ಸರ್ಕಾರದ ಕಾನೂನನ್ನು ಪಾಲಿಸಬೇಕೆಂದು ಹೇಳುವ ನ್ಯಾಯಾಂಗ, ಅದಕ್ಕೆ ಪ್ರತಿರೋಧ ಬರದ ಹಾಗೆ ಆದಿವಾಸಿ ಗಳನ್ನು ಬಗ್ಗು ಬಡಿಯಲು ಸಿದ್ಧವಾಗಿ ನಿಂತಿರುವ ಪೊಲೀಸ್ ಇಲಾಖೆ. ಈ ಎಲ್ಲರ ಮುಂದಿರುವ ಒಂದೇ ಕಾರ್ಯಸೂಚಿ ಎಂದರೆ ವನವಾಸೀ ಆದಿವಾಸಿಗಳನ್ನು ಅವರಿರುವ ನೆಲಸುಗಳಿಂದ ಎತ್ತಂಗಡಿ ಮಾಡಿಸಿ ತಮ್ಮ ಆದಾಯದ ಮೂಲಗಳನ್ನು ದೋಚುವುದು.

ಇಂತಹ ವಿಷಮ ಸ್ಥಿತಿಯಲ್ಲಿರುವ ಆದಿವಾಸಿ ಸಮಾಜದ ಬಗ್ಗೆ ವಿಚಾರಿಸುವಂತಹ ಜನ ಕ್ಷಣ ಕಾಲ ಯೋಚಿಸಲಿ ! ಗುಬ್ಬಿ ಮೇಲೆ ಬ್ರಹ್ಮಾಸ್ತ್ರ ಪ್ರಯೋಗಿಸುವ ಹಾಗೆ ಅವರನ್ನು ಸರ್ವಥಾ ಆಕ್ರಮಣಕಾರರೆಂದು ನಿಂತ ನೆಲದಿಂದ ಹೊರಗೆ ಹಾಕುವುದು ಯಾವ ನ್ಯಾಯ ? ಇದಕ್ಕೂ ಬರ್ಬರವಾದ ನಾಗರಿಕತೆ ಇನ್ನುಂಟೆ ? ತೆಲುಗಿನ ಕ್ರಾಂತಿಕಾರಿ ಕವಿ ಹಾಗೂ ವಿಚಾರವಂತ ಲೇಖಕರಾದ ಶ್ರೀ ವರವರರಾವ್ ಎಂದಂತೆ ಆದಿವಾಸಿಗಳು ಅಡವಿ ಯಲ್ಲೂ ಇರಲಾರರು, ಏಕೆಂದರೆ ಅದು ರಾಷ್ಟ್ರೀಯ ಉದ್ಯಾನವನವಾಗಿ ಬದಲಾಗಿದೆ. ಮೈದಾನದಲ್ಲೂ ಇರ ಲಾರರು ಏಕೆಂದರೆ ಅವರು ಕಾಡಿನ ಮನುಷ್ಯರು. ಅವರಿಗೆ ಲ್ಲಾದರೂ ಜಾಗವಿದೆ ಎಂದರೆ ಅದು ಜೈಲುಗಳಲ್ಲಿ ಮಾತ್ರ.

ಇಂಥ ಪರಿಸ್ಥಿತಿಯಲ್ಲಿ ನಮ್ಮ ಸುದ್ದಿ ಮಾಧ್ಯಮಗಳ ಪಾತ್ರವಂತೂ ಬಹಳ ಮುಖ್ಯ. ಆದರೆ ಎಲ್ಲೋ ವನಾಂತರ ದಲ್ಲಿ ಜರುಗುವ ಆದಿವಾಸಿಗಳ ಪ್ರತಿಭಟನೆ, ಹೋರಾಟ ಗಳ ಬಗ್ಗೆ ಮಾಧ್ಯಮಗಳಿಗೆ ಅಷ್ಟು ತಿಳಿದಿರುವುದೇ ಇಲ್ಲ. ಗೊತ್ತಾದರೂ ನರಿಯ ಕೂಗು ಗಿರಿಯ ಮುಟ್ಟೀತೆ ಎಂಬಂತೆ ಕೊನೆಯ ಪುಟಗಳಲ್ಲಿ ಬರುವ ಚುಟುಕು ಸುದ್ದಿಗಳಿಗೆ ನಮ್ಮ ಸರ್ಕಾರದ ಜಡಯಂತ್ರ ಪ್ರತಿ ಸ್ಪಂದಿಸುವುದೇ ಇಲ್ಲ. ಆದ್ದರಿಂದ ಇನ್ನು ಮುಂದಾದರೂ ರೇಡಿಯೋ, ದೂರದರ್ಶನ, ಸುದ್ದಿಪತ್ರಿಕೆಗಳು ಆದಿವಾಸಿಗಳ ಸಂಘಟಿತ ಹೋರಾಟಗಳನ್ನು ಕುರಿತು ಮುನ್ನೆಲೆಯ ಸುದ್ದಿಗಳನ್ನಾಗಿ ಮಾಡಿ ಪ್ರಚಾರ ಕೊಡುವುದು ಪ್ರಜಾತಂತ್ರದಲ್ಲಿ ಭರವಸೆಯನ್ನು ಮೂಡಿಸುವಂತಾಗುತ್ತದೆ.

ಆದ್ದರಿಂದ ಆದಿವಾಸಿಗಳ ಹಕ್ಕೊತ್ತಾಯದ ಪ್ರಕಾರ ೧೯೮೦ರ ಸುಪ್ರೀಂ ಕೋರ್ಟ್ ಆದೇಶವನ್ನು ಮಾನ್ಯ ಮಾಡಿ, ಅವರ ಒತ್ತುವರಿ ಜಮೀನುಗಳಿಗೆ ಹಕ್ಕು ಪತ್ರ ದಾಖಲೆಗಳನ್ನು ನೀಡಿ ಮತ್ತು ಇನ್ನು ಮುಂದೆ ಒತ್ತುವರಿ ಇತ್ಯಾದಿ ಮಾಡದಂತೆ ನಿರ್ಬಂಧಿಸಿ, ಅವರು ಇರುವ ಕಡೆಯೇ ನೆಲಸುವಂತೆ ವ್ಯವಸ್ಥೆ ಮಾಡಿ ನಾಗರಿಕ ಸೌಲಭ್ಯಗಳನ್ನು ವಿಸ್ತರಿಸುವುದು ಸಂಬಂಧಪಟ್ಟ ಸರ್ಕಾರ ಗಳ ಆದ್ಯ ಕರ್ತವ್ಯ. ಹಾಗೆಯೇ ಅರಣ್ಯ ಇಲಾಖೆಯು ಸಹ ಅವರನ್ನು ಆಕ್ರಮಣಕಾರರು, ಭಯೋತ್ಪಾದಕರು ಎಂದು ಪರಿಗಣಿಸದೆ ವಿಶ್ವಾಸಕ್ಕೆ ತೆಗೆದುಕೊಂಡು ಕಾಡಿನ ರಕ್ಷಣೆ ಮಾಡುವುದು ಉಭಯತ್ರರಿಗೂ ಕ್ಷೇಮಕರ. ಕಳ್ಳ ನಾಟಾ ಸಾಗಾಣಿಕೆದಾರರನ್ನು ತಡೆಯಲು, ವನೌಷಧ ಮೂಲಿಕೆ ಗಳನ್ನು ತಮ್ಮ ಪರಂಪರಾನುಗತ ಜ್ಞಾನದಿಂದ ಪತ್ತೆ ಹಚ್ಚಿಕೊಡಲು ಅವರು ಸಹಕರಿಸುತ್ತಾರೆ. ಪ್ರಾಣಿ ಹಾಗೂ ಮರಗಿಡಗಳನ್ನು ದೇವರೆಂದು ಪೂಜಿಸುವ ಈ ಜನ ಕಾಡಿನ ನಾಶಕ್ಕೆ ಎಂದೂ ತೊಡಗಿದವರಲ್ಲ. ಸದ್ಯ ಇಷ್ಟಾದರೂ ಕಾಡು ಉಳಿದಿರುವುದು ಆದಿವಾಸಿಗಳಿರುವ ನೆಲಸುಗಳಲ್ಲಿಯೇ ಎಂಬುದನ್ನು ಪರಿಗಣಿಸಬೇಕು. ಆದ್ದರಿಂದ ಒರಿಸ್ಸಾದ ದೇಬರಂಜನ್ ಸಾರಂಗಿ ಎಂಬ ಆದಿ ವಾಸ ನೇತಾರರು ಕೇಳಿ ಕೊಳ್ಳುವಂತೆ ಅವರ ನೆಲಸುಗಳ ಬಳಿ ಪೊಲೀಸ್ ಸ್ಟೇಷನ್ ಗಳನ್ನು ತೆರೆಯುವುದನ್ನು ನಿಲ್ಲಿಸಿ, ಸ್ಕೂಲು ಆಸ್ಪತ್ರೆಗಳನ್ನು ತೆರೆಯುವುದು ನಾಗರಿಕ ಸರ್ಕಾರಗಳ ಆದ್ಯ ಕರ್ತವ್ಯವಲ್ಲವೆ ?

**ಪ್ರೊ. ಶಿವರಾಮಯ್ಯ**
ನಂ. ೧೭೨, ೨ನೇ ಅಡ್ಡರಸ್ತೆ, ಟೀಚರ್ಸ್ ಕಾಲೋನಿ
ನಾಗರಬಾವಿ, ಬೆಂಗಳೂರು - ೫೬೦ ೦೭೨

**'ಹೊಸತು' ಚಂದಾ ನೋಂದಣಿಗೆ ಮತ್ತು ಸದಭಿರುಚಿಯ ಪುಸ್ತಕಗಳಿಗೆ ಕೆಳಕಂಡ ನವಕರ್ನಾಟಕ ಪುಸ್ತಕ ಪ್ರದರ್ಶನಗಳಿಗೆ ಭೇಟಿ ನೀಡಿ**

**ನವಕರ್ನಾಟಕ ಪುಸ್ತಕ ಪ್ರದರ್ಶನ**
ದಸರಾ ವಸ್ತು ಪ್ರದರ್ಶನ ಮೈದಾನ, ಮೈಸೂರು - 570 001

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕಲಾ ಭವನ ಆವರಣ, ಕಡಪಾ ಮೈದಾನ, ಧಾರವಾಡ - 580 001

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಪುರಭವನದ ಆವರಣ, ಚಾಮರಾಜ ಒಡೆಯರ್ ವೃತ್ತ, ಮೈಸೂರು - 570 001

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಹೈಸ್ಕೂಲ್ ಮೈದಾನ, ಅಕ್ಕಮಹಾದೇವಿ ರಸ್ತೆ, ಪಿ. ಜೆ. ಬಡಾವಣೆ, ದಾವಣಗೆರೆ-577 002

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಜಿಲ್ಲಾ ಕೇಂದ್ರ ಗ್ರಂಥಾಲಯದ ಆವರಣ, ಬಸ್ ನಿಲ್ದಾಣದ ರಸ್ತೆ, ತುಮಕೂರು - 572 101

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಪಾಂಡುರಂಗ ಕಾಂಪ್ಲೆಕ್ಸ್, ಡಯಾನಾ ವೃತ್ತದ ಬಳಿ, ಕೋರ್ಟ್ ರಸ್ತೆ, ಉಡುಪಿ - 576 101

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಬಸವೇಶ್ವರ ಸರ್ಕಲ್ (ಕೋರ್ಟ್ ಸರ್ಕಲ್), ಬಸ್ ನಿಲ್ದಾಣದ ರಸ್ತೆ, ಗೋಕಾಕ್ - 591 307

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಶಂಕರ ಮಠದ ಬಳಿ, ಕಿರ್ಲೋಸ್ಕರ್ ಕಾಲೊನಿ, ಕುರುಬರಹಳ್ಳಿ ಮುಖ್ಯರಸ್ತೆ, ಬೆಂಗಳೂರು-560 079

**ನವಕರ್ನಾಟಕ ಪುಸ್ತಕ ಪ್ರದರ್ಶನ**
ತ್ರಿಪುರಸುಂದರಿ ಟಾಕೀಸ್ ಬಳಿ, ಯೂನಿಯನ್ ಕ್ಲಬ್ ಕಾಂಪೌಂಡ್, ಎಂ. ಜಿ. ರಸ್ತೆ, ಬಿಜಾಪುರ - 586 101




ನಾನೊಂದು ಎಮ್ಮೆ ಎಂದು ಹೇಳಿಕೊಳ್ಳುವುದು ನನಗೊಂದು ಹೆಮ್ಮೆ. ಯಾರ್‍ಯಾರಿಗೆ ಎಷ್ಟೆಷ್ಟೋ ಪುರಾಣಗಳಿರುವಾಗ ನನಗೊಂದು ಪುರಾಣ ಬೇಡವೆ? ಕೇಳಿ ನನ್ನ ಪುರಾಣ ನಾ ಕಂಡಂತೆ.

ನನಗೆ ಎರಡೆರಡು ವಾಸಸ್ಥಳಗಳು. ಒಂದು ಹೊರಗೆ ಮತ್ತೊಂದು ಒಳಗೆ. ಅದೇ ಕೊಟ್ಟಿಗೆ. ಹೆಚ್ಚು ಸಮಯ ನನ್ನ ಜೀವನ ಹೊರಗೆ. ಬಿಸಿಲು ಮಳೆ ಚಳಿ ಗಾಳಿ ಎಲ್ಲಕ್ಕೂ ಮೈಯೊಡ್ಡಿ ಸೀಸನ್ಡ್ ಆಗಿರ್‍ತೀನಿ. ಎಲ್ಲಾ ಕೋಟಲೆ ಅನುಭವಿಸಿ ಸಹಿಸಿಕೊಳ್ಳೋದಕ್ಕೆ ಒಂದು ದಪ್ಪ ಚರ್ಮ ಬೇಕಲ್ಲವೆ? ಎಷ್ಟೊಂದು ಉಪಕಾರ ಮಾಡಿದ್ದೀರಿ. ಆಮೇಲೆ ನೀವೇ ಅಂತೀರಿ ದಪ್ಪ ಚರ್ಮ ದಪ್ಪ ಚರ್ಮ ಅಂತ. ನಿಮ್ಮ ಉಪಚಾರಕ್ಕೆ ನಾನು ಋಣಿ.

ಪಟ್ಟಣ ನಗರಗಳಲ್ಲಿ ನನಗೆ ಜೈಲು ವಾಸ. ಕಿಷ್ಕಿಂಧಾ ಜಾಗ. ಹಳ್ಳಿಗಳಲ್ಲಿ ಬಯಲು ವಿಶಾಲ, ಮಲಗುವುದು ಭೂಮಿ ತಾಯಿ ಮಂಚ. ತಿನ್ನುವುದು ಹಸಿರು ಹುಲ್ಲು, ನನಗೆ ನೀರು ಕೆಸರು ಅಂದರೆ ಪಂಚಪ್ರಾಣ. ಆಹಾ ಏನು ಮಜಾ ಏನು ಮಜಾ ಅಂತ ಹಾಡ್ಕೋತೀನಿ. ನಿಮಗೆ ಕೇಳಿಸುವುದಿಲ್ಲ, ನಾನೇನ್ ಮಾಡ್ಲಿ. ನಮ್ಮಮ್ಮ ಭೂತಾಯಿ ಮಡಿಲಲ್ಲಿ ಕೆಸರು ಮಣ್ಣು ನೀರಲ್ಲಿ ಹಾಯಾಗಿ ಇರುತ್ತೀನಿ. ಅಲ್ಲಾ ಕಣ್ರೀ ಈ ಪಾಟಿ ಮಣ್ಣೇ ನಾನಾಗಿ, ನಾನೇ ಮಣ್ಣಾಗಿ ಹೊರಳಾಡುತ್ತಿರಬೇಕಾದರೆ ನೀವು ನಿಮ್ಮ ಜನ ನನ್ನನ್ನು ಬಿಟ್ಟು ನಾ ಮಣ್ಣಿನ ಮಗ ತಾ ಮಣ್ಣಿನ ಮಗಳು ಅಂತ ಭೋಂಗಿ ಬಿಟ್ಕಂಡು ಮೆರೀತೀರಲ್ಲ. ನಿಮಗೆ ಒಂದರಪಾವಿನಷ್ಟಾದರು ಮಾನ ಬೇಡವೆ? ಅಮ್ಮಮ್ಮಾ ಅಂದರೆ ಯಾವುದೋ ಚಿಕಿತ್ಸಾ ಕೇಂದ್ರಕ್ಕೆ ಹೋಗಿ ಮೈಗೆಲ್ಲಾ ಮಣ್ಣು ಬಳಿಸಿಕೊಂಡು ಫೋಟೋ ಹಿಡಿಸಿಕೊಂಡು ಬಿಟ್ರೆ ಮಣ್ಣಿನ ಮಕ್ಕಳು ಆಗೋದು ಉಂಟಾ? ಅಲ್ಲಾ ಕಣ್ರೀ ನೀವೇನು ಹೊಟ್ಟೇಗೆ ಮಣ್ಣು ತಿಂತೀರಾ? ಇಲ್ಲ ಮಣ್ಣು ತಿಂದು ತ್ರಿಭುವನ ತೋರಿಸುತ್ತೀರಾ? ನಮಗೆ ನೋಡಿ ಹುಲ್ಲು ಜೊತೇಲಿ ಸ್ವಲ್ಪ ಸ್ವಲ್ಪ ಮಣ್ಣು ತಿನ್ನಿಸುತ್ತೀರ? ನಾವೂ ತಿಂತೀವಿ ಜೀರ್ಣಿಸಿಕೊಳ್ಳುತ್ತೇವೆ. ನಮ್ಮ ಜಾನುವಾರು ಜಾತೀನೆ ಹಾಗೆ. ಆದರೆ ನಿಮಗ್ಯಾಕರಿ ಬೇಕು ಈ ಬೂಟಾಟಿಕೆ ಸೋಗಲಾಡಿತನ. ಮಣ್ಣಿನ ಮಗ, ಮಗಳು ಅಂತ ಹೇಳಿಕೊಳ್ಳೋದು. ನಾಚಿಕೆಯಾಗಬೇಕು ನಿಮ್ಮ ಮನುಷ್ಯ ಜನ್ಮಕ್ಕೆ. ಸುಳ್ಳು ಹೇಳೋದಿಕ್ಕೆ ಒಂದು ಮಿತಿ ಇರಬೇಡವೆ? ಅದಕ್ಕೇನೇಯ, ಹಜಾ ಹಜಾ ಮನುಷ್ಯರಾಗಿ ಹುಟ್ಟೋದೆ ಬೇಡ, ಎಮ್ಮೆ ದನ ಕರುಗಳಾಗೇ ಹುಟ್ಟೋಣ ಅನ್ನೋ ತೀರ್ಮಾನಕ್ಕೆ ಬಂದಿದೀವಿ. ನಾವೇ ನಿಜವಾದ ಮಣ್ಣಿನ ಮಕ್ಕಳು ಅಂತ ಪೇಟೆಂಟ್ ರಿಜಿಸ್ಟರ್ ಮಾಡಿಸುತ್ತೀವಿ.

ಅಲ್ಲಾ ನಮಗೆ ಸ್ವತಂತ್ರವಾಗಿ ಮಕ್ಕಳನ್ನು ಹೆರೋಕು ಬಿಡ್ತಾ ಇಲ್ಲವಲ್ಲ. ಈ ಜನ ನಡೀ ಆಸ್ಪತ್ರೇಗೆ ಗಬ್ಬಕ್ಕೆ ಅಂತ ಎಳಕೊಂಡು ಹೋಗ್ತೀರಾ. ನಮ್ಮ ಕರ್ಮಕ್ಕೆ ಏನು ಹೇಳೋಣ. ಪಟ್ಟಣಗಳಲ್ಲಿ ಎಂದಾದರೂ ಉಲ್ಲಾಸದಿಂದ ಸ್ನಾನ ಮಾಡುವುದಕ್ಕೆ ಬಿಟ್ಟಿದ್ದೀರಾ? ಉಹುಂ ಎಲ್ಲಾ ಕಂಟ್ರೋಲ್ ಮುಚ್ಚು ಮರೆ. ನಮ್ಮ ಸ್ವಾತಂತ್ರ್ಯ ಹರಣ ಮಾಡ್ತೀರಲ್ಲ ನಿಮ್ಮ ನಾಗರೀಕತೆ ಸೋಗಿನಲ್ಲಿ. ನಮ್ಮ ಪಾಡಿಗೆ ನಮ್ಮನ್ನು ಇರೋಕು ಬಿಡಲ್ಲ. ನಿಮ್ಮ ಪಾಡಿಗೆ ನೀವು ಇರೋದೂ ಇಲ್ಲ. ನೀವು ಮನುಷ್ಯರಾಗುವುದು ಯಾವಾಗ ಅಂತಾ? ಅಲ್ಲಾ ಕಣ್ರೀ ಮನುಷ್ಯರನ್ನು ರೈಲು ಸಮೇತ ಸುಡುವುದು ಯಾವ ಸೀಮೆ ನ್ಯಾಯಾರೀ. ಏನೇನೋ ಭೂಂಕತಾರೆ : ಮಾಡುವುದು ಅನಾಚಾರ ಮನೆ ಮುಂದೆ ಬೃಂದಾವನ ಅಂತ. ಬ್ಯಾಡಕಣ್ರಿ ನಿಮ್ಮ ಟೀವಿ, ವಾರ್ತೆಗಳು ಪೇಪರ್ ಸಮಾಚಾರ ಅದರ ಹಿಂದೆ ಮುಂದೆ ಕೂತು ಮಾತಾಡೋದು ಸಾಕಪ್ಪಾ ಸಾಕು. ಕೇಳಿಸಿಕೊಂಡು ತಲೆ ಝುಂ ಅನ್ನುತ್ತೆ. ಆಮೇಲೆ ಬರುತ್ತೆ ನೋಡಿ ಟೆನ್ಷನ್ನು ರಕ್ತದ ಒತ್ತಡ, ಶುಗರ್ರು ಅದೂ ಇದೂ ಯಾತರ ಜೀವನ ತಗಳ್ರಿ ನಿಮ್ದು. ಆ ದೇಶದಲ್ಲಿ ಹಿಂದೆ ಹಂಗೆ ಏನು ಚೆನ್ನ ಅಂತ ಬಾಯಿ ಚಪ್ಪರಿಸುತ್ತೀರಿ ನೀವ್ಯಾಕೆ ಹಿಂಗೆ. ನೀವ್ಯಾಕೆ ಹಂಗೆ?

ಮೊನ್ನೆ ಕಲಗಚ್ಚು ತಂದು ಇಟ್ಟರು. ಬಕೆಟ್ ತುಂಬ ಇತ್ತು. ಗಟಗಟ ಅಂತ ಕುಡಿದೆ. ಅವರು ಮಾತನಾಡಿಕೊಂಡರು. ಚೆನ್ನಾಗಿ ಕಲಗಚ್ಚು ಕುಡಿಸಿದರೆ ಹಾಲು ಹೆಚ್ಚಿಗೆ ಕೊಡುತ್ತೇನೆ ಅಂತ. ಮೊನ್ನೆ ಮಾತಾಡಿಕೊಳ್ಳುತ್ತಿದ್ದರು. ಹೋಟೆಲುಗಳಲ್ಲಿ ಎಮ್ಮೆ ಹಾಲು ಬೇಕು ಅಂತ ದುಂಬಾಲು ಬೀಳ್ತಾರಂತೆ. ನಮ್ಮ ಹಾಲು ನಮ್ಮಂಗೇ ಗಟ್ಟಿ. ಅವರ ವ್ಯಾಪಾರ ಬುದ್ಧಿ ಪಕ್ಕಕ್ಕಿಟ್ಟು ಒಂದು ಥರಾ ಸಂತೋಷವಾಯ್ತು. ನೋಡಿದ್ರಾ ನಾವು ಕಪ್ಪಾಗಿದ್ರೂ ನಮ್ಮ ಹಾಲು ಬೆಳ್ಳಗೆ ರುಚಿ ರುಚಿ. ಆದರೆ ನೀವು ಮಾನವರು ಎಷ್ಟೇ ಕೆಂಪಗಿದ್ದರೂ ಬೆಳ್ಳಗಿದ್ದರೂ ನಿಮ್ಮ ಅಂತರಂಗ ಕಪ್ಪು ಕೊಳಕು ಬರೀ ವಿಷ. ನೀವು ನಮ್ಮ ಥರಾ ಕಷ್ಟ ಸಹಿಷ್ಣುಗಳಲ್ಲ, ಸಂಯಮಿಗಳಲ್ಲ, ಸ್ವಾರ್ಥ ಆಸೆ ಬುರುಕರು. ನೀವು ನಮಗೆಲ್ಲಿಯ ಹೋಲಿಕೆ. ಅದಕ್ಕೇ ಇರಬೇಕು ಎಮ್ಮೇ ನಿನಗೆ ಸಾಟಿಯಿಲ್ಲ ಅಂತ ಖುಷಿ ಖುಷಿಯಾಗಿ ಹಾಡಿರುವುದು.

ನೋಡಿ ನಾನು ನೀಟಾಗಿ ಕಲಗಚ್ಚು ಕುಡಿದು ಮೂತಿಯನ್ನೆಲ್ಲಾ ನಾಲಿಗೆಯಲ್ಲಿ ಒರೆಸಿಕೊಂಡು ಚಂದಣ ಇರ್‍ತೀನಿ. ನೀವು ಕೈಗಳಿರೋ ಜನ ಮೊನ್ನೆ ಎಲ್ಲೋ ಮಂದ ಬೆಳಕಲ್ಲಿ ಕಲಗಚ್ಚು (ಕಾಕ್‌ಟೈಲ್) ಕುಡಿದು ತೂರಾಡ್ತಾ ಮನೆಗೆ ಬಂದು ಕೂಗಾಡಿ ಬಡಿದಾಡಿ ನಮಗೆ ನಿದ್ದೆ ಕೆಡಿಸಿದಿರಿ. ಸದ್ಯ ಎಮ್ಮೆ ಅಂತ ನಮ್ಮ ಕೊಟ್ಟಿಗೆಗೆ ಬರಲಿಲ್ಲ ನಮ್ಮ ಪುಣ್ಯ. ನೀವು ಎಮ್ಮೆಗಳಿಗಿಂತ ಕಡೆ ಅಂತ ಅನ್ನಿಸಿಕೊಂಡೇ ಬಿಟ್ಟಿರಿ.

ಅಲ್ಲ ಕಣ್ರೀ. ಎಮ್ಮೆ ಎಮ್ಮೆ ಅಂತ ಹೀಯಾಳಿಸೋದೇ ನಿಮ್ಮ ಸಕಲ ಗುಣಗಳ ದುರ್ಗುಣ ಆಗೋಯ್ತಲ್ರೀ. ನೋಡಿ ಜೀವನದಲ್ಲಿ ಜಿಗುಪ್ಸೆ ಹೊಂದಿ ಎಮ್ಮೆ ನೇಣು ಹಾಕಿಕೊಂಡಿತು ಎಂದು ಎಲ್ಲಿಯಾದ್ರೂ ಓದಿದ್ದೀರಾ? ಹೂ ಹೂಂ, ಚಾನ್ಸೇ ಇಲ್ಲ ಬಿಡಿ. ವರದಕ್ಷಿಣೆ ಕಿರುಕುಳ ಗಂಡ, ಅತ್ತೆ ಅವರೂ ಇವರೂ ಸೇರಿ ಸೀಮೆಎಣ್ಣೆ ಸುರಿದು ವಧು ದಹನ ಇದನ್ನೆಲ್ಲಾದ್ರೂ ಕೇಳಿದ್ದೀರಾ? ಚಾನ್ಸೇ ಇಲ್ಲ. ಅಲ್ಲ ಕಣ್ರೀ ಎಮ್ಮೆ ಎಮ್ಮೆ ಅಂತ ಹೀಯಾಳಿಸಿ ಎಗರಾಡೋ ಮಂದಿ ನೀವೆಂತಹ ಸುಸಂಸ್ಕೃತರು? ಕೆಲವಂ ಬಲ್ಲವರಿಂದ ಕಲ್ತು ಅನ್ನುವ ಹಾಗೆ ನಮ್ಮಿಂದ ಇದನ್ನೂ ಇನ್ನೂ

[illegible] ನೀವು ಯಾಕೆ ಕಲಿಯಬಾರದು ?

ಮೊನ್ನೆ ಎಲೆ ಅಡಿಕೆ ಜಗ್ಗಿಕೊಂಡು ಮಾತಾಡುತ್ತಾ ಇದ್ದರು. ಈ ಧಪ ಗಬ್ಬಾದರೆ ಈ ಎಮ್ಮೇನ ಮಾರಬೇಕು. ನಾಲ್ಕು ಕರು ಆಯ್ತು, ಮುದಿಯಾಯ್ತು. ಹಾಲು ಜಾಸ್ತಿ ಕರಿಯೋಂಗಿಲ್ಲ. ಇನ್ನು ಇದನ್ನು ಇಟಗೊಂಡು ನಫೆಯಿಲ್ಲ, ಮೇವು ಬೂಸ ಎಲ್ಲಾ ದಂಡ ಅಂತಿದ್ರೂ. ಬೂಸ ಅಂದ್ರೆ ಹೊಟ್ಟು ಸಿಪ್ಪೆ ತಾನೆ ? ಒಳ್ಳೇದೆಲ್ಲಾ ತಿಂದು ಬಿಸಾಡಿದ ಸಿಪ್ಪೆಯನ್ನು ನೀರಿನಲ್ಲಿ ಕಲೆಸಿ ಇಡೋದು. ಅಂಥ ಸಿಪ್ಪೆ ತಿಂದು ಅದರ ಎರಡರಷ್ಟು ಹಾಲು ಕರೆಯದೇ ಇದ್ದರೆ ಬೆನ್ನು ಮೇಲೆ ಗೂಸಾ. ಜಳ್ಳು ಬೂಸಾ ಜೊತೆಗೆ ಗೂಸಾ ಒಂದಕ್ಕೊಂದು ಮುಫತ್. ಹೇಗಿದೆ ಲೆಕ್ಕಾಚಾರ. ನಿಮ್ಮಲ್ಲಿ ಮಕ್ಕಳೆತ್ತು ಮುದಿಯಾದವರನ್ನು, ಮಕ್ಕಳನ್ನು ಹೆರದವರನ್ನು ಹೀಗೆ ಮಾರಾಕಿ ಬಿಡುತ್ತೀರಾ ? ಕಸಾಯಿಖಾನೆಗೆ ಕಳುಹಿಸುತ್ತೀರಾ ? ಯಾಕ್ರೀ ನಿಮಗೆ ಈ ಚಂಡಾಲ ಬುದ್ಧಿ ?

ಎಮ್ಮೆ ಗಂಡಾದರೆ ಉಳುವುದಕ್ಕೆ ಗಾಣಕ್ಕೆ ಕಟ್ಟಿ ಹಿಂಸಿಸುತ್ತೀರಾ. ಇನ್ನು ಹಾಲು ಕರೆಯೋ ಎಮ್ಮೆಯಾದರೆ ಬರೀ ಬಕೆಟ್ ತುಂಬಿತಾ, ಚರಿಗೆ ತುಂಬಿತಾ ಅಂತ ನೋಡೋದೇ ಕೆಲಸ. ಎಮ್ಮೆ ಕಡಸಿಗೆ ಏನಾರ ಉಳಿಯಿತಾ ? ಎಮ್ಮೆಗೆ ನೋವಾಯ್ತೇ, ಉಹುಂ ಏನೂ ಬ್ಯಾಡ, ಕೆಚ್ಚಲಲ್ಲಿ ರಕ್ತ ಬರೋವರೆಗೂ ಕರೆಯುವುದನ್ನು ನಿಲ್ಲಿಸುವುದಿಲ್ಲ. ಹೂಂ ಸಾಕಪ್ಪಾ ಸಾಕು ಈ ಎಮ್ಮೆ ಜಲುಮ.

ಒಂದು ದಿನ ಎಲ್ಲಾ ಪುರಾಣಗಳೂ ಮೂಲೆ ಗುಂಪಾಗಿ ಎಮ್ಮೆ ಪುರಾಣ ರಾರಾಜಿಸುವುದರಲ್ಲಿ ಸಂಶಯವಿಲ್ಲ ಅಂತ ನಮ್ಮ ಎಮ್ಮೆಗಳ ನಂಬುಗೆ. ಯಾಕೆ ಅಂದರೆ ಎಮ್ಮೆ ನೋಡಿ ಎಮ್ಮೆಲೆ, ಎಮ್ಮೆಲ್ಸಿ, ಅಂತ ನಮ್ಮನ್ನೆಲ್ಲಾ ಅರ್ಧಾ ಎಮ್ಮೆಲ್ಸಿ ನಮ್ಮ ಗೋತರದವರನ್ನು ನಿಮ್ಮಲ್ಲಿ ಸೇರಿಸಿಕೊಂಡು ವಿಶೇಷವಾಗಿ ಮೆರೆಯುತ್ತಾ ನಮ್ಮ ಗುಣಗಳನ್ನೂ ನಿಮ್ಮದಾಗಿಸಿಕೊಂಡು ವಿಜೃಂಭಿಸುತ್ತಿದ್ದೀರಿ. ನಮ್ಮ ಅತಿ ತೀಕ್ಷ್ಣ ಬುದ್ಧಿ ನಿಮಗೂ ಬಂದಿದೆ. ನಮ್ಮ ಹಾಲೇ ಕುಡಿದು ನಮ್ಮನ್ನೇ ಹೋಲುತ್ತಿದ್ದೀರಿ. ಇನ್ನು ನಿಮ್ಮ ಪುರಾಣಗಳನ್ನೆಲ್ಲಾ ಒಂದೋ... ಹತ್ತು ವರ್ಷ ಅಟ್ಟದ ಮೇಲಿಟ್ಟು ಎಮ್ಮೆ ಪುರಾಣವನ್ನು ಮಾತ್ರ ಓದುತ್ತಾ ಪಠಣ ಮಾಡುತ್ತಾ ಹಾಡಿ ಕುಣಿಯಿರಿ. ಸದ್ಬುದ್ಧಿ ಪ್ರಾಪ್ತಿರಸ್ತು ಎಂದು ಎಮ್ಮೆ ಮೇಲೆ ಕೂತ ಯಮ ಕೂಡ ಆಶೀರ್ವಾದ ಮಾಡುವುದನ್ನು ಬಹುಶಃ ಮರೆಯಲಾರ. ಎಲ್ಲಾ ಮಹಾನ್ ಪುಂಗವರೂ ಹಾಡಿರಿ. ಎಮ್ಮೆ ಪುರಾಣ ಚಿರಾಯುವಾಗಲಿ. ನಮ್ಮ ಹೆಸರಿನ ಎಮ್ಮಿಗ್‌ನೂರು, ಎಮ್ಮೆ ನೊಂದ (ಉತ್ತರ ಕನ್ನಡ), ಕೋಣನಕುಂಟೆ ಇಂತಹ ಊರು ಕೇರಿ ಸಂಸ್ಕೃತಿ ದಿನೇ ದಿನೇ ವೃದ್ಧಿಸಲಿ.

**ವೆಂಕಟಾಚಲ**
ದೊಡ್ಡ ಭಜನೆ ಮಂದಿರ ರಸ್ತೆ
ಸರ್ಜಾಪುರ - ೫೬೨ ೧೨೫, ಬೆಂಗಳೂರು ಜಿಲ್ಲೆ



# ಒಂದು ಟೆಲಿಫೋನ್ ಸಂಭಾಷಣೆ

**ಬಾ**ಡಿಗೆಯೇನೋ ಸಮಂಜಸವೆನಿಸಿತು
ಮನೆ ಇರುವ ಪ್ರದೇಶ ಅಷ್ಟು
ಮುಖ್ಯವೆನಿಸಲಿಲ್ಲ.
ಮನೆಯೊಡತಿ ತಾನು ದೂರದಲ್ಲಿಲ್ಲೋ
ವಾಸವಿರುವುದಾಗಿ ತಿಳಿಸಿದಳು.
ಇನ್ನು ಉಳಿದದ್ದು ; ನನ್ನನ್ನು ನಾನು
ಜಾಹೀರುಗೊಳಿಸಿಕೊಳ್ಳುವುದಷ್ಟೆ.
''ನೋಡಿ ಮೇಡಂ, ನನಗೆ ಸುತ್ತಿ ಬಳಸಿ
ಮಾತನಾಡುವುದು ಇಷ್ಟವಿಲ್ಲ,
ನಾನೊಬ್ಬ ಆಫ್ರಿಕನ್ ಮಹಿಳೆ'' - ಎಂದು ಎಚ್ಚರಿಸಿದೆ.
ಮೌನ...... ಬಲವಂತದ ಸೌಜನ್ಯದ
ಮೌನ ವ್ಯಾಪಾರ ಸಾಗಿತ್ತು. ಮತ್ತೆ
ಆ ಕಡೆಯಿಂದ ದನಿ ಬಂದಾಗ
ಅದು ಲಿಪ್‌ಸ್ಟಿಕ್ ಲೇಪಿತ, ಉದ್ದನೆಯ
ಬಂಗಾರದ ಬಣ್ಣದ ಸಿಗರೇಟ್ ಹಿಡಿಕೆ
ಅಪ್ಪಳಿಸಿದಂತಿತ್ತು. ನಾನೋ
ನಿರ್ವಾಹವಿಲ್ಲದೆ ಸಿಕ್ಕು ಹಾಕಿಕೊಂಡೆ.
''ನೀವು ಎಷ್ಟು ಕಪ್ಪಗಿದ್ದೀರಿ ?''
ನಾನು ಕೇಳಿಸಿಕೊಂಡದ್ದು ಖಂಡಿತಾ
ತಪ್ಪಾಗಿರಲಿಲ್ಲ.... ''ನೀವು
ತಿಳಿಯಾದ ಬಣ್ಣದವರೋ
ಅಥವಾ ತೀರಾ ಕಪ್ಪೋ ?''
ಕೊಳೆತ ಕೊಬ್ಬಿನಂಥ ದುರ್ನಾತ
ಬೀರುತ್ತಿರುವ ಸಾರ್ವಜನಿಕ ದೂರವಾಣಿ
ಕೆಂಬಣ್ಣದ ಬೂತ್, ಕೆಂಬಣ್ಣದ ಅಂಚೆಪೆಟ್ಟಿಗೆ
ರಸ್ತೆಯ ಕಾದ ಟಾರನ್ನು ಕಚಪಿಚಗೊಳಿಸುತ್ತ
ಸಾಗಿದ್ದ ಕೆಂಪು ಬಸ್.
ಎಲ್ಲವೂ ಕೆಂಪು ಮಯ !
ಅದಂತೂ ಕಟು ವಾಸ್ತವ !
ಅಸಭ್ಯ ಮೌನದಿಂದ ನಾಚಿದ ದಿಗ್ಭ್ರಮೆ
ಸರಳತೆಗೆ ಶರಣಾಯಿತು.
ಎಷ್ಟಾಗಲಿ ಆಕೆ ದಾಕ್ಷಿಣ್ಯಪರಳು
ಮಾತಿನ ವರಸೆ ಬದಲಾಯಿಸುತ್ತ
ಕೇಳಿದಳು : ''ನೀವು ಕಪ್ಪಗಿದ್ದೀರೋ
ಅಥವಾ ತುಂಬಾ ತಿಳಿ ಬಣ್ಣದವರೋ''
ನನ್ನ ತಲೆ ಝುಗ್ಗನೆ ಬೆಳಕಾಯಿತೊಮ್ಮೆಗೇ.
ಅಂದರೆ - ನಿಮ್ಮ ಅರ್ಥ. ''ನಾನು
ಸಾಧಾರಣ ಚಾಕೊಲೇಟ್ ಥರವೋ
ಅಥವಾ ಮಿಲ್ಕ್ ಚಾಕೊಲೇಟ್
ಥರವೋ ಎಂದೆ ?''
ಆಕೆಯ ದನಿ ಕಿಂಚಿತ್ ನಿರ್ಲಿಪ್ತವೇ
ಎಂಬಂತಿದ್ದ ಭಾವವನ್ನು ಒತ್ತಿ ಹಿಡಿದಂತಿದ್ದ
ಸಮ್ಮತಿ ಸೂಚಕ ದನಿಯಾಗಿತ್ತು.
ಕೂಡಲೇ ಅದಕ್ಕೆ ತಕ್ಕಂತೆ
ದನಿ ಹೊಂದಿಸಿಕೊಂಡು ನಾನು
ಹೇಳಿದೆ – ''ದಕ್ಷಿಣ ಆಫ್ರಿಕನ್ನರ
ಕಡು ಕಂದುಬಣ್ಣ''
ನಂತರ ಸೇರಿಸಿದೆ – ''ಹಾಗೆಂದು ನನ್ನ
ಪಾಸ್‌ಪೋರ್ಟ್‌ನಲ್ಲಿ ನಮೂದಿಸಿದೆ''
ಹಾಗೆಂದರೇನೆಂದು ಹೊಳೆವ ತನಕ ಮೌನ.
ನಿಜ ಸಂಗತಿ ಏನೆಂದು ಹೊಳೆದ ಕೂಡಲೇ
ಟೆಲಿಫೋನ್ ಬಾಯಿಗೆ ಅವಳ ಜಾಗಟೆ ದನಿ
ಅಪ್ಪಳಿಸಿತು: ''ಎಂಥದದು ? ಅದು
ಏನು ಅಂತ ಗೊತ್ತಿಲ್ಲವಲ್ಲ.''
''ಅದೇ ಮಾಸಲು ಬಣ್ಣದ ಮಹಿಳೆಯ ಹಾಗೆ''
''ಅದು ಕಪ್ಪಲ್ಲವೆ ?''
''ಪೂರ್ತಿ ಕಪ್ಪಲ್ಲ ಮೇಡಮ್.
ನನ್ನ ಮುಖವೇನೋ ಮಾಸಲು
ಬಣ್ಣದ ಹೆಣ್ಣಿನದೇ. ಆದರೆ ನೀವು
ನನ್ನ ದೇಹದ ಉಳಿದ ಭಾಗಗಳನ್ನು ನೋಡಬೇಕು
ನನ್ನ ಅಂಗೈ ಮತ್ತು ಅಂಗಾಲುಗಳೆರಡೂ
ಥೇಟು ಸ್ಫಟಿಕದ ಹಾಗೆ ಬೆಳ್ಳಗೆ ಹೊಳೆಯುತ್ತವೆ
ಹಾಳಾದ್ದು ಮೂರ್ಖಳಂತೆ ಕುಳಿತೂ ಕುಳಿತೂ
ಕಾವು ಹತ್ತಿ ನನ್ನ ಆಸನ ಭಾಗವೆಲ್ಲ
ಕಾಗೆಯಷ್ಟು ಕಪ್ಪಗೆ.
ಒಂದು ನಿಮಿಷ ಮೇಡಂ - ಆಕೆಯ
ಟೆಲಿಫೋನ್ ರಿಸೀವರ್ ನನ್ನ ಕಿವಿಗಳ ಮೇಲೆ
ಸಿಡಿಲೆರಗಿಸಲು ಸಜ್ಜಾಗಿರಬಹುದೆಂದು
ತಿಳಿದು ಹೇಳಿದೆ – ''ಮೇಡಂ ನಿಮ್ಮನ್ನು
ನೀವೇ ಒಮ್ಮೆ ನೋಡಿಕೊಳ್ಳಬಾರದೆ ?''

**ವೋಲೆ ಸೋಯಿಂಕ**
ಅನುವಾದ : ಡಾ. ಲಕ್ಷ್ಮೀನಾರಾಯಣ
ಪ್ರಿನ್ಸಿಪಾಲ್, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ವಿಜಯನಗರ, ಬೆಂಗಳೂರು-೪೦

# ಪುರವಂತ ಕುಣಿದಾಗ

ಎಸ್. ಬಿ. ಜೋಗುರ

ಕಲ್ಲನಗೌಡ್ರ ಮನಿಮುಂದ ಹೆಜ್ಜೆಗೋಳು ಯಾರ್ದೂ ಧರಕಾರ ಇಲ್ದೇ ಸರ್‍ರ್ ಬರ್‍ರ್ ಅಂತ ಹರಿದಾಡ್ತಾ ಇದ್ವು. ಹೆಂಗ್ಸರ ಪಾದಂತೂ ಒತ್ರದಿಂದ ಓಡ್ತಿದ್ವು. ಗೌಡನ ಹೆಂಡ್ತಿ ಸಂಗಮ್ಮಗ ಅಂಗಾಲಿಗಿ ಗಿರಕೀ ಮೂಡದದಂಗಿತ್ತು. ಅದಕs ಚಮಕಲೆ. ಅಕಾಡಿಂದ ಇಕಾಡಿ, ಇಕಾಡಿಂದ ಅಕಾಡಿ ಪುಟು ಪುಟು ಅಂತ ಓಡಾಡ್ತಿದ್ಲು. ಅಂಥಾ ದೊಡ್ಡ ಮನ್ಯಾಗೂ ಆಕಿಗಿ ಕೈ ಕಾಲ ಆಡ್ದಂಗ ಆಗಿತ್ತು. ಕಾಲಕಾಲಾಗ ಬರೋ 'ಚುಕ್ಕೊಳಗಿ' ''ಅತ್ಲಾಗ ಹೋಗಿ ಒಂದು ಕಡಿ ಸುಮ್ನ ಕುತ್ಕೊರಿ, ಹಿಂಗ್ಯಾಕ ಕಾಲಕಾಲಾಗ ಅಡ್ಡಡ್ಡ ಬರ್ತೀರಿ'' ಅಂತ ಬೆದರಸ್ಕೋತ ಬಂದೆ ಮಂದಿಗಿ ಚಾ, ನಸ್ಟಾ ಒಯ್ದು ಕೊಡಾಕಹತ್ತಿದ್ಲು. ಲಗ್ನ ಮನಿ ಅಂದಮ್ಯಾಗ ಮನಿ ತುಂಬಕೊಳ್ಳೂದs. ಬೀಗರು, ಬಿಜ್ಜರು ಬಸ್ತಾನಿಗೆಂತ ಮೊದಲೇ ಬಂದು ಠಿಕಾಣೆ ಹಾಕಿದ್ರು. ಅವರದೆಲ್ಲಾ ಜಳಕ, ನಸ್ಟಾ, ಊಟ, ಮಕ್ಕಳುಮರಿ ಕೊಂಯ್... ಪಾಂಯ್ ಅಂದರ ಎಲ್ಲಾ ಜವಾಬ್ದಾರಿ ಸಂಗಮ್ಮಕ್ಕನ ಬೆನ್ನಿಗೇ ಹತ್ತದಂಗಿತ್ತು. ಗಂಡ ಕಲ್ಲನಗೌಡ ಹೊರಗಿನ ದೇಖರೇಕಿ, ಕೊಡುದು, ತಗೊಳದು ನೋಡ್ಕೊತಿದ್ದ. ''ಮಲ್ಲಪ್ಪ ಜಲ್ದೀ ಹೋಗಿ ಪುರವಂತರ ಕರಕೊಂಡು ಬಾರಲೇ'' ಅಂತ್ಹೇಳಿ ದೊಡ್ಡ ಮಗನಿಗಿ ಹೇಳ್ದ. ''ಇನಾ ಈಗ ಹೋಗಿ ಬಂದೀನಿ ಬ್ಯಾರೆ ಯಾರಿಗರೇ ಕಳಸು'' ಅಂತ ಮಲ್ಲಣ್ಣ ಮರಿಗಿ ಸರದ. ಕಲ್ಲನಗೌಡ ಸಿಟ್ಟಿನಿಂದ ''ನಮ್ಮ ಹುಡ್ಗರಿಗಿ ಒಟ್ಟ ಕೆಲಸ ಆಗಬಾರದು. ನಮ್ಮ ಕೆಲಸ ಐತಿ ಅಂದಮ್ಯಾಗ ಒಂದ್ಸಾರಿ ಅಲ್ಲ, ಹತ್ತು ಸಾರಿಯಾದ್ರೂ ಹೋಗ್ಬೇಕು. ಶೇಖಣ್ಣ ನೀನೇ ಜರಾ ಲಗೂನೇ ಹೋಗಿ ಬಾ'' ಅಂತ ನೆರೆಮನಿ ಹುಡಗಗ ಹೇಳದ. ''ಹ್ಯಾಂಗೂ ಭಾಜಾಬಜಂತ್ರಿಯವರೂ ಬಂದಾರ ಅವರ್ನೂ ಕರಕೊಂಡೇ ಹೋಗುವ. ಯಾರನಾದರೂ ಕಳಸಗಿತ್ತಿನ್ನ ಕೊಟ್ಟು ಭಜಂತ್ರಿ ಯವರ ಜೋಡಿ ಕಳಸು'' ಅಂತ ಹೆಂಡ್ತಿಗಿ ಹೇಳ್ದ.



ಕಲ್ಲನಗೌಡನ ಮನ್ಯಾಗ ಇದು ಕಡಿ ಲಗ್ನ. ಆದೂ ಗಂಡ ಮಗಂದು. ಹಿಂಗಾಗಿ ಮನಿ ಬಡ್ಡಿಗಿ ಹತ್ತಿದವರು, ಹೊಂದಿದವರು ಎಲ್ಲಾರೂ ಬಂದಿದ್ರು. ಬಂದವರಲ್ಲಿ ಕೆಲಸ ಮಾಡವರಿಗಿಂತಾ, ಸಿಂಗಾರ ಮಾಡ್ಕೊಂಡು ಹೊಳ್ಳಿ ಹೊಳ್ಳಿ ಅಲ್ಲೇ ಕಣ್ಣ ತಿರಸ್ಕೋಂತ ಓಡ್ಯಾಡವರೇ ಹೆಚ್ಚು. ಯಾರ ಮನಿ ದೇವ್ರು ವೀರಭದ್ರ ದೇವರ ಅದಾನೊ ಅವರ ಮನ್ಯಾಗ ಒಂದೊಮ್ಮೆ ಗಂಡ ಮಕ್ಕಳ ಮದಿವಿ ನಡೀಯೂದು ಐತಿ ಅಂದ್ರ, ಒಂದೈದು ದಿನ ಮೊದಲೇ ಗುಗ್ಗಳ ಅಂತ ಹೊರಡಸ್ತಾರ. ಅದನ್ನ ಆಡು ಭಾಷೆದಾಗs 'ಹಲಿಗಿ ಮೆರವಣಿಗಿ' ಅಂತಾನೂ ಕರೀತಾರ. ಈಗ ಕಲ್ಲನ ಗೌಡರ ಮನ್ಯಾಗೂ ಅದೇ ನಡಿಯೂದಿತ್ತು. ಈ ಕಾರ್ಯದ ಸಲಾಗಿನೇ ಕನ್ಯೇನ್ನ ಒಂದು ವಾರ ಮೊದ್ಲೇ ವರನ ಮನಿಗಿ ಕರಕೊಂಡು ಬಂದಿರ್ತಾರ. ಹಲಗಿ ಮೆರವಣಿಗಿ ವ್ಯಾಳೀದಾಗ ಅವರೂ ತಮ್ಮ ಭಾವೀ ಗಂಡನ ಸಾಥಿಯಾಗಿ ಹೆಜ್ಜಿ ಹಾಕ ಬೇಕು. ಇದೇ ವ್ಯಾಳೆದಾಗ ದೇವ್ರಗಿ ಬೇಡ ಕೊಂಡಿದ್ರ ಮಡಿಯಾಗಿ ದೀಡ ನಮಸ್ಕಾರ ಹಾಕ್ತಾರ. ಮನಿಯಿಂದ ತಾವು ಬೇಡ್ಕೊಂಡ ಗುಡೀಮಟ ರಸ್ತೆದಾಗ ಉದ್ದಾಕ ಬಿದ್ದು, ನಮಸ್ಕಾರ ಮಾಡಿ ಬಲಗೈ ಮುಂದಮಾಡಿ, ಕೈಯಾಗಿನ ಜೋಳದ ದಂಟಿನಿಂದ ಕಾಮನ ಬಿಲ್ಲಿನಂಗ ಗೆರಿ ಹೊಡೆದು, ಮ್ಯಾಲವಳೂದು. ಒಂದ್ನಾಲ್ಕು ಹೆಜ್ಜೀ ಹಾಕಿ ಮತ್ತ ಹಂಗs ಮಾಡೂದು. ಇದು ತಾವು ಬೇಡ್ಕೊಂಡ ಗುಡೀ ಮಟ ಹಂಗs ನಡಿದಿರತ್ತೈತಿ. ಆಮ್ಯಾಗ ಸಂಬಂಧಿಗಳಲ್ಲಿ ಯಾರರೇ ಹೊಸಬಟ್ಟಿ ಆಯೇರಿ ಮಾಡ್ತಾರ ಇದಿಷ್ಟು ಪದ್ಧತಿ. ಹಲಗಿ ಮೆರವಣಿಗಿ ಮುಂದ ಇದೇನೂ ಅಲ್ಲ. ಬಯಲು ಸೀಮ್ಯಾಗ ಅದರಾಗೂ ಬಿಜಾಪುರ ಜಿಲ್ಲದಾಗ ಈ ಗುಗ್ಗಳ ಅನ್ನೋದು ಬಾಳ ಕಡಿ ಅದ.

ಈ ಹಲಿಗಿ ಮೆರವಣಿಗ್ಯಾಗ ಹೀರೋ ಅಂದ್ರ ಪುರವಂತ ಮತ್ತು ಅಂವಾ ಕುಣದಾಗ ತಾಳಾ ಹಾಕೋ ಭಾಜಾಬಜಂತ್ರಿಯವರು. ಪುರವಂತ ಬರ್ಲಿಲ್ಲ ಅಂದ್ರ ಹಲಗಿ ಮೆರವಣಿಗಿ ಹೊರಡಂಗೇ ಇಲ್ಲ. ಹಿಂಗಾಗಿ ಮೂರ್ನಾಕು ಸಾರಿಯಾದ್ರೂ ಸೈ ಎಡತಾಕಿ ಪುರವಂತನ್ನ ಕರಕೊಂಡು ಬರಬೇಕು. ಈ ಪುರವಂತನನ್ನ ನೋಡಿದ್ರ ಅವನೇ ಒಂದು ಯಕ್ಷ ಲೋಕದ ಕಿನ್ನರ ಕಂಡಂಗ ಕಾಣ್ತಾನ. ಕೆಂಪ ಜರತಾರಿ ದೋತರ ತೊಟ್ಕೊಂಡು, ತಲಿಗೊಂದು ಕೆಂಪು ರುಮಾಲು ಸುತ್ಕೊಂಡು ಮೈಮ್ಯಾಲೊಂದು ಪಗಡಿ ಹಾಕೊಂಡು, ಕಾಲಾಗ ಗೆಜ್ಜಿ ಪಟ್ಟಿ ಬಿಕ್ಕೊಂಡು, ಹಣಿಮ್ಯಾಲ ವಿಭೂತಿ ಇಟ್ಕೊಂಡು, ಕೈಯಾಗ ಒಂದು ಖಡ್ಗ, ಬೆಳ್ಳಿ ಕಡ್ಡಿಯ ಅಸ್ತ್ರ ಹಿಡ್ಕೊಂಡು ಭಾಜಾದವರ ಜೋಡಿ ರಸ್ತೆದಾಗ ಹೆಜ್ಜಿ ಹಾಕೊಂಡು ಬರೋ ಗತ್ತು ನಿಂತ್ಕೊಂಡು ನೋಡುವಾಗ ಇರ್ತದ. ಈ ಕಡಿ ಬಡಗೊರು, ಪತ್ತಾರೇ ಈ ಪುರವಂತ ವೇಷ ಹಾಕೋರು, ಅವರು ಬಂದಿದ್ದೇ ಹಲಗಿ ಮೆರವಣಿಗಿ ಹೊರಡಾಕ ಶುರು.

ಸಿಂದಗಿಯಂಥ ಶಾರದಾಗ ಇನ್ನೂ ಹಲಿಗಿ ಮೆರವಣಿಗಿ ಉಳ್ಕೊಂಡದ. ಅದಕ್ಕ ಕಾರಣಾನೂ ಐತಿ. ವೀರಭದ್ರ ದೇವರು ಬೆಂಕಿಯಂಥಾಂವ. ತಪ್ಪಿ ಏನಾದ್ರೂ ಗುಗ್ಗಳ ಹೊರಡಿಸಲಿಲ್ಲಂದ್ರ ಕಾಡಾಟ, ಕಾದಾಟ ಶುರು ಆಗ್ತಾವ ಅನ್ನೋ ನಂಬಕೀನೇ ಈ ಪದ್ಧತಿ ಜೀವಂತ ಉಳ್ಯಾಕ ಕಾರಣ. ಕಲ್ಲನಗೌಡ್ರು ಗಡಬಡಿಸಿ ''ಏಳ್ರಿ ಏಳ್ರಿ ಪುರವಂತ ಬಂದ್ರು'' ಅಂತ್ಹೇಳಿ ಮನಿಮುಂದ ಹರಕು ಹರಕಾಗಿ ಕುತ್ಕೊಂಡಿದ್ದ ಮಂದಿಗಿ ಎಬ್ಬಿಸಿದ್ರು. ಮನಿ ಒಳಗಿನ ದೇವರು ಜಗಲಿ ಸಮೇತ ಹೊರಗಬಂತು. ಮದವಿ ಆಗೋ ಹುಡುಗ ಒದ್ದಿ ಬಟ್ಯಾಗ ಆ ಜಗಲಿ ತಲಿಮ್ಯಾಲೆ ಹೊತ್ಕೊಂಡಿದ್ದ. ಅವನ ಹಿಂದ ಹೆಂಡ್ತಿ ಆಗೋ ಹುಡುಗಿ ಮೈ ಬಿಗಿ ಹಿಡ್ಕೊಂಡು ಹಗೂರಕ ಹೆಜ್ಜಿ ಹಾಕಾಕ ಹತ್ತಿದ್ಲು. ಕಳಸಗಿತ್ತಿ ಹೆಂಗಸ ಆಕಿ ಜೋಡಿನs ಬರಾಕ ಹತ್ತಿದ್ಲು. ಮೆರವಣಿಗಿ ಮನಿಬಿಟ್ಟು, ಬಜಾರದಾಗಿಂದು ಹೊಂಟು, ಊರ ಹೊರಗ ಇರೋ ಹಳಿಮನಿಯವರ ಬಾವ್ಯಾಗ ಇರದು ದೇವರ ಮುಖ, ಜಗಲಿ ಎಲ್ಲಾ ತೊಳದು ಮತ್ತ ತಿರುಗಿ ಮನೀಗಿ ಬರೋದು. ಇದಿಷ್ಟು ಮೆರವಣಿಗಿ ಸಾಗೋ ದಾರಿ. ಈ ದಾರಿ ನಡುವ ಇರೋದೇ ಈ ಪುರವಂತರ ಕುಣತ. ಸೇರಿದ ಮಂದ್ಯಾಗ ಎದ್ದು ಕಾಣವರೇ ಈ ಪುರವಂತ. ಅಂವನ್ನ ಬಿಟ್ರ ಮಂದಿ ನೋಡುದು ಕನ್ಯೆ ಹ್ಯಾಂಗಿದಾಳಂತ. ಇನ್ನ ಈ ಮೆರವಣಿಗಿ ಹಿಂಗs ಉದ್ದಾಕ ಮಳಿನೀರ ಹರ್ದಂಗ ಹೋಗುದಿಲ್ಲ. ಬಜಾರ ದಾಗ ಅಲ್ಲಲ್ಲಿ ನಿಂತು ಈ ಪುರವಂತ ಕುಣಿಯೋದು ಇರಿತ್ತು. ಆಗಂತೂ ಈ ಪುರವಂತ ಪಕ್ಕ ಪವಾಡ ಪುರುಷ ! ಬಜಾರದಾಗ ತುಸು ಇಂಗು ಜಾಗ ಇದ್ದಲ್ಲಿ ಮೆರವಣಿಗೆ ನಿಲ್ತಿತ್ತು. ಜನಾ ಗುಂಪಾಗ್ತಿದ್ದರು. ನಡುವ ಪುರವಂತಗ ಕುಣೇಲಾಕ ಬರಂಗ ಪೈಸಾಗಿ ಜಾಗ ಬಿಟ್ಟಿರುತಿದ್ರು. ತುತ್ತೂರಿ ಹಾಗೂ ಸಂಬಾಳ ತಾಳ ಬದ್ಲಿ ಆಯ್ತು ಪುರವಂತ ಕೆಳಗೆ ಮುಖಾ ಮಾಡ್ಕೊಂಡು ನಿಂತು,

ಒಂದೊಂದು ಹೆಜ್ಜೆ ಎತ್ತಿಡ್ತಾ

ಆಹಾಹಾ ವೀರಾಧಿ ವೀರ...

.............. ಅಂತ ಬಯಲಾಟದಾಗ

ಮಾತ ಹೇಳುವಂಗ ಒಡಪ ಹೇಳ್ತಿದ್ದ. ಮಠದಯ್ಯ ಅಂವಗ ಸಾಥಿಯಾಗಿ ಕಡೆ ! ಕಡೆ ! ಅಂತಿದ್ದ. ಒಡಪ ಮುಗಿದಿದ್ದೇ ಪುರವಂತ ಕುಣಲಾಕ ಶುರು ಮಾಡ್ತಿದ್ದ. ಅವಾಗಂತೂ ಭಾಜಾಬಜಂತ್ರಿ ನಾದ ಬಾಳ ರಮಜಾಗಿರುತಿತ್ತು.

ನೋಡ್ಲಾಕ ನಿಂತ ಮಂದಿ ಆ ನಾದಕ್ಕೆ ವಶಾ ಆಗಿ ಹಿಮ್ಮಡಿ ಬಡೀತಿದ್ರು. ಪುರವಂತನ ಕುಣತ ಉಗ್ರ ಆಯ್ತು. ಮಂದಿ ಕೈಗೋಳು ಭಕ್ತಿಯಿಂದ ಮ್ಯಾಲೆದ್ದು ದೇವರ ಜಗಲಿ ಕಡಿ ಕೈ ಮುಗಿದು ತುಟಿ ಕುಣಸಾಕ ಹತ್ತಿದ್ರು. ಈಗಂತೂ ಪುರವಂತ ಇನ್ನೂ ರಾವ ಆದ. ಕೈಯಾಗಿನ ಖಡ್ಗ ಮತ್ತು ಆ ಬೆಳ್ಳಿ ಅಸ್ತ್ರಗಳ ಗೊಂಚಲನ್ನ ಮಠದಯ್ಯನ ಕೈಯಾಗ ಕೊಟ್ಟು, ಒಂದೇ ಒಂದು ಬೆಳ್ಳಿ ಕಡ್ಡಿ ತನ್ನ ಕೈಯಾಗ ತಗೊಂಡ. ಭಾರಿಸೋರ ಆರ್ಭಟಾನೂ ಹೆಚ್ಚಾಯಿತು. ಪುರವಂತ ತನ್ನ ಕೈಯಾಗಿನ ಆ ಬೆಳ್ಳಿಕಡ್ಡಿಯನ್ನ ಗಲ್ಲದ ಸಂದಿಗಿ ಚುಚ್ಕೊಂಡು ಒಂದು ಕಡಿಂದ ಇನ್ನೊಂದು ಕಡಿ ಪಾರ ಮಾಡ್ದ. ಮಠದಯ್ಯ ಪಟ್ಟಂತ ಆ ಜಾಗಕ್ಕೆ ವಿಭೂತಿ ಹಚ್ಚ್ದ. ಹಂಗs ಬಾಯಿಂದ ಲಿಂಬೂ ಕಡ್ದು ಎದುರಾ - ಬದುರಾ ಬಿಸಾಕಿದ್ದ. ಇನ್ನ ಹಿಂಗ ಅಸ್ತ್ರಹಾಕೊಳಾಗ ಪುರವಂತಗ ಏನಾರೆ, ತ್ರಾಸ ಆದ್ರ, ರಕ್ತ ಬಂದ್ರ ಅಲ್ಲಿದ್ದ ಮಂದಿ ಖಾಸಾಗಿ ಹೆಂಗಸರು, 'ಯಾರೋ ಮುರ್ಚಟ್ ಆಗ್ಯಾರ' ಅಂತ ಮಾತಾಡ್ಕೊತಿದ್ರು. ತಮ್ಮ ತಮ್ಮಲ್ಲೇ ಮುಖಕ್ಕೆ ಗಂಟ ಹಾಕಿ ಒಬ್ರು ಇನ್ನೊಬ್ಬರನ್ನು ನೋಡ್ತಿದ್ರು. ಪುರವಂತ ಅಸ್ತ್ರ ಹಾಕದ ಮ್ಯಾಗ ಮೆರವಣಿಗೆ ಮತ್ತು ಮುಂದ ಸಾಗ್ತಿತ್ತು. ಮುಂದ ಭಾರಸವರ ಜೋಡಿ ಹೊಂಟ ಮನುಷ್ಯ ಕೈಯಾಗಿನ ದಿವಟಿಗೆ ಆರಬಾರದಂತ ಹಂಗೇ ಆದರ ಮ್ಯಾಲ ಎಣ್ಣೀ ಹಾಕ್ತಿದ್ದ. ಆ ಬಾವಿ ಬರೋ ಮಟ ಇನ್ನೊಂದೆರಡು ಬಾರಿ ಪುರವಂತ ಆಡ್ತಿದ್ರು. ಈಗ ಮರಿಪುರವಂತ ಅಸ್ತ್ರ ಹಾಕೊಂಡಿದ್ದ. ನೋಡ್ಲಿಕ ನಿಂತ ಮಂದ್ಯಾಗ ಯಾರದೋ ಮೈಯಾಗ ದೇವರು ಬಂದು ಅವರೂ ಒಮ್ಮೊಮ್ಮೆ ಅಸ್ತ್ರ ಚುಚ್ಕೊಂತಿದ್ರು. ಮಠದಯ್ಯನ ಹೆಂಡ್ತಿ ಮೈಯಾಗಂತು ಮ್ಯಾಲಿಂದ ಮ್ಯಾಲ ದೇವರ ಬರ್ತಿದ್ದ. ಹಿಂಗಾಗಿ ಅಕಿನೂ ಅಸ್ತ್ರಹಾಕೊಂತಿದ್ಲು.

ಇಂಥಾ ಹಲಗಿ ಮೆರವಣಿಗಿ ಗದ್ದಲದಾಗ ಅಗಸರ ನಿಂಗವ್ವನ ಮಂತ್ರ ಕತಿ - ಪೂರ್ತಿ ಆಗೂದಾದ್ರೂ ಹ್ಯಾಂಗ ? ಅಕಿದೂ ಒಂದು ಚುಲ್ಬೋ ಪಾತ್ರಾನ್ನೇ ಇರತೈತಿ. ಅಕಿ ಬರ್ಲಿಲ್ಲ ಅಂದ್ರನೂ ಮೆರವಣಿಗಿ ನಡೆಯುವಾಗಿಲ್ಲ. ಪುರವಂತ ನಡಿಯುವಾಗ ಅವರ ಮುಂದ ಮುಂದ ಹಳಿ ಸೀರಿ ಹಾಸ್ಕೊಂತ ಹೋಗೋ ಕೆಲಸ ನಿಂಗವ್ವಂದು. ಹಿಂದ ಅಕಿ ಮಗಳು ಅದನ್ನೇ ಸುತ್ಕೊಂಡ ಬರ್ತಿದ್ಲು. ರಸ್ತೆಮಟ ನೋಡ್ಲಾಕ ಬರದೇ ಇದ್ದವರು, ನೋಡಿ ಹೊಂಟವರನ್ನು 'ಯಾರ್ದು ಹಲಗಿ ಮೆರವಣಿಗಿ ?' ಅಂತ ಕೇಳ್ತಿದ್ರು. 'ಮ್ಯಾಲಿನ ಓಣಿ ಕಲ್ಲನ ಗೌಡ್ರದು' ಅಂತ ಉತ್ತರ ಸಿಗ್ತಿತ್ತು.

ಇತ್ಲಾಗ ಮನ್ಯಾಗ ಒಂದಿಟು ಹೆಂಗಸರು ಮೆರವಣಿಗಿ ಜೋಡಿ ಹೋದ ಮಂದಿಗಿ ಊಟಕ ತಯಾರಿ ಮಾಡ್ತಿದ್ರು. ಅವತ್ತಿನ ದಿನ ಬ್ಯಾರೇ ಏನೋ ಅಡಿಗಿ ಮಾಡುವಂಗಿಲ್ಲ, ಬಾಳಿಕಾಯಿ ಚಪಾತಿನೇ ತಿನಬೇಕು. ಮೊದ್ಲ ಸ್ವಾಮಿಗೋಳ ಊಟ. ಅದೂ ಐದು ಮಂದಿ ಸ್ವಾಮಿಗೊಳ ಪಂತಿ ಆದಮ್ಯಾಗ ಉಳಿದವರದು. ಮಠದಯ್ಯನ ಹಿಡ್ಕೊಂಡು ಐದು ಮಂದಿ ಐನೋರ ಊಟ ಆದದ್ದೇ ಉಳಿದವರ ಪಂತಿ ಶುರು. ಪುರವಂತ ಮಾತ್ರ ಅಲ್ಲೀಮಟ ನಿಲ್ಲಂಗಿಲ್ಲ, ಹೊಂಟುಬಿಡ್ತಾರ. ಬ್ಯಾರೆ ಮನಿಯಿಂದ ಬುಲಾವ್ ಬಂದಿರ್ತೈತಿ. ಬಿಸಿಲ ಆದಂಗ ಎಲ್ಲಾರಿಗೂ ತ್ರಾಸ ಅಂತ್ಹೇಳಿ ಕಲ್ಲನಗೌಡ ಮುಂಜಾನೇನೇ ಜಪಾಟಿ ಎಬ್ಬಿಸಿದ್ದ ಬಾರದಟಿಗೆ ಹಲಿಗಿ ಮೆರವಣಿಗಿ ಮುಗೀತು. ಪುರವಂತ್ರನ್ನ ಅವರ ಮನಿಮಟ ಊದಿಸಕೊಂತ ಬಾರಿಸಕೊಂತ ಹೋಗಿ ಬಿಟ್ಟು ಬಂದ್ರು. ವರಾ ತನ್ನ ಗೆಳ್ಯಾರ ಜೋಡಿ ಕುತ್ಕೊಂಡು ಹರಟಿ ಹೊಡಿತಿದ್ದ. ಅವರ ಜೋಡಿ ಮಾತಾಡ್ಕೊಂತ ಅವನ ಕಣ್ಣ ಯಾರ್ನೋ ಹುಡುಕತಿದ್ದು "ಏ ದೋಸ್ತ ಇನ್ನೊಂದು ನಾಲ್ಕು ದಿನ ನಿಲ್ಲು ಆಮ್ಯಾಗ ಮುಂದ ಕುಂದ್ರಸ ಕೊಂಡು ನೋಡ್ತಾನೇ ಇರಾಕತ್ತಿ, ಊಟ, ನಿದ್ದಿ ಎಲ್ಲಾ ಬಿಟ್ಟು" ಅಂದಾಗ ವರ ತುಸು ಕೆಂಪಾದ. "ಸ್ವಲ್ಪ ಇಕಿನ್ನ ಹೊತ್ಕೊ" ಅಂತ, ಸರಸಕ್ಕ ಅವನ ಕೈಯಾಗ ಮಗಳ ಕೊಟ್ಲು. ಮೊದಲಿಂದ್ಲೂ ಅಂವಗ ಮಕ್ಕಳಂದ್ರ ಅಷ್ಟೆ! ಆದ್ರ ಅವತ್ತಿನ ಮಟ್ಟಿಗೆ ಮಾತ್ರ ಆ ಕೂಸಿನ ಮ್ಯಾಲ ಅಂವಗ ಅದೇನೋ ಉಕ್ಕಿ ಬಂದಿತ್ತು. ಲೊಚ್.... ಲೊಚ್‌ಂತ ಬೆಲ್ಲಾ ಕೊಡಾಕ ಹತ್ತಿದ್ದ. ಅಡಿಗಿ ಮನ್ಯಾಗ ಚೆಲ್ಲಿದ ನಗೆಚಾಟಕಿ ಅವನ ಎದ್ಯಾಗ ಹೊಕ್ಕೊಂಡಿತ್ತು. ಕಳ್ಳೆ ಮಿಳ್ಳೆ ಆಡಿಸಿ ಕೈ ಬಿಟ್ಟ ಮಳ್ಳರಂಗ ಕಂಡ. ಮುಖ ಮ್ಯಾಲ ಎತ್ತಾಕ ತುಸು ಹೊತ್ತ ತಗೊಂಡ.

ಎಸ್. ಬಿ. ಜೋಗುರ
ಪಿ. ಎಂ. ಕಾಲೇಜು, ಅಂಕೋಲಾ

## ಅಪ್ಪಿ ಪುಸ್ತಕಗಳು

ಓದಿದ ಪುಸ್ತಕಗಳನ್ನೆಲ್ಲಾ
ಕತ್ತಲು ಕೋಣೆಯಲ್ಲಿ
ಪೇರಿಸಿ ಬೀಗ ಹಾಕಿ
ಅರೆದು ಕುಡಿದಂಥ ಮತ್ತಿನಲ್ಲಿ
ಬೀಗಿ ಮಾತಾಡುತ್ತಿದ್ದೆ

ಯಾಕೋ... ಹೊರಗೆಲ್ಲ
ಕತ್ತಲಾದಂತೆನಿಸಿ
ಜಡವಾಗಿಯೇ
ಆ ಕತ್ತಲು ಕೋಣೆಯ
ಬೀಗ ಒಡೆದೆ

ಅರೆರೆ ! ಅರೆರೆ !
ಒಡೆದ ಹಂಚಿಂದ
ಅಲ್ಲೊಂದು ಸೂರ್ಯಕಿರಣ !
ಓದಿದೆಲ್ಲ ಪುಸ್ತಕಗಳ
ಅಕ್ಷರಕ್ಷರಗಳ ನಡುವೆ
ಸಾಲು ಸಾಲುಗಳ ನಡುವೆ
ಬಣ್ಣ ಬಣ್ಣದ ಶಾಯಿಯ
ಹೊಸ ಭಾಷ್ಯ ಮೂಡಿದೆ !

'ಅಯ್ಯೋ ನಾನು ಓದಿರಲೇ ಇಲ್ಲ'
ಎಂದುಕೊಳ್ಳುತ್ತಾ
ಧೂಳೊರಸಿ ಕುಳಿತೆ
ಮತ್ತೆ ಅಧ್ಯಯನಕ್ಕೆ !

ಎಸ್. ಮಾಲತಿ
ಮಹಾಳಸ ನಿಲಯ, ಜೋಗ್ ರಸ್ತೆ, ಸಾಗರ - ೫೭೭ ೪೦೧



# ಮೂಸಬ್ಬ ಬ್ಯಾರಿಯ ದಂಧೆಗಳು

■ ಟಿ. ಸಿ. ಶ್ರೀಯಾನ್

ಮನೆ ಎದುರು ರಸ್ತೆಯಲ್ಲಿ ಸೈಕಲ್ ಬೆಲ್ ಬಾರಿಸುತ್ತ 'ತಾಜಾ ಬಂಗುಡೆ ಬೂತಾಯಿ' ಎನ್ನುತ್ತ ಮೂಸಬ್ಬ ಬ್ಯಾರಿಯು ಮೀನು ತುಂಬಿದ ಚೀಲಗಳನ್ನು ತನ್ನ ಸೈಕಲಿನ ಸೀಟಿಗೆ ಮತ್ತು ಅದರ ಕುತ್ತಿಗೆಗೆ ನೇತು ಹಾಕಿಕೊಂಡು ಅದನ್ನು ಮುಂದೂಡುತ್ತಿದ್ದ. ತಾನು ತಂದ ಸರಕಿನ ವಿವರಗಳನ್ನು ತನ್ನ ಕೂಗಿನಿಂದ ಆಚೆ ಈಚೆಯ ಮನೆಯವರಿಗೆ ಮುಟ್ಟಿಸುತ್ತಿದ್ದ. ''ಕೈರಂಪುಣಿಯ ತಾಜಾ ಮೀನು, ಈಗತಾನೇ ದಡಕ್ಕೆಳೆದದ್ದು'' ಎಂಬುದು ಅವನ ಹಾಡಿನ ಪಲ್ಲವಿಯಾಗಿತ್ತು. ಅದು ಮೀನು ಬರುವ ಸೀಸನ್ ಆಗಿತ್ತು. ಇದಿನಬ್ಬನು ಮೀನಿನ ಮಾರಾಟಕ್ಕೆ ತೊಡಗುವುದು ಸೀಸನಿನಲ್ಲಿ ಮಾತ್ರ. ಮೀನುಗಾರ ಹೆಂಗಸರು ತಮ್ಮ ಬುಟ್ಟಿಯಲ್ಲಿ ಹೊತ್ತು ತಂದ ಮೀನು ಸೈಕಲಿನವರ ಅಂದರೆ ಬ್ಯಾರಿಗಳ ಮೀನಿಗಿಂತ ತುಂಬ ಪ್ರಿಯ (ತುಟ್ಟಿ) ಎಂಬುದನ್ನು ತಿಳಿದವರು ಮೂಸಬ್ಬನ ಹತ್ತಿರವೇ ಮೀನು ಕೊಂಡುಕೊಳ್ಳುತ್ತಿದ್ದರು. ತಂದ ಮೀನು ಒಂದೆರಡು ಗಂಟೆಗಳಲ್ಲಿಯೇ ಖಾಲಿಯಾಗುತ್ತಿತ್ತು. ಆಗ ಅವನು ಮತ್ತೊಮ್ಮೆ ಮೀನಿನ ಸರಬರಾಜಿಗಾಗಿ ಸಮುದ್ರ ತೀರಕ್ಕೆ ಹೋಗಿ ನೋಡುವುದುಂಟು. ಅಥವಾ ಬೇರೆ ಯಾವುದಾದರೊಂದು ದಂಧೆಗೆ ತೊಡಗುವುದುಂಟು – ಆದರೂ ಮೀನುಗಾರ ಮಹಿಳೆಯರು ತಂದ ಮೀನನ್ನು ತಾವು ನಿಗದಿ ಮಾಡಿದ ಬೆಲೆಯಲ್ಲಿಯೇ ಮಾರಾಟ ಮಾಡಿ ಹಣ ಗಿಟ್ಟಿಸಬಲ್ಲವರು. ಸೈಕಲ್ ಸವಾರರಿಗೆ ಎಟಕದ ಮೂಲೆ ಮೂಲೆಗಳ ಮನೆಯಂಗಳಗಳನ್ನು ಹಾದು, ಕಿರುದಾರಿಯನ್ನು ಬಳಸಿ ತಮ್ಮ ನಿತ್ಯಕೇಕಗಳನ್ನು ತಲುಪಿ, ಅವರಿಗೆ ಬೇಕಾದಂತೆ ಮೀನನ್ನು ತುಂಡರಿಸಿ, ಶುಚಿಗೊಳಿಸಿ, ತಂದ ಮೀನನ್ನು ಮಾರಾಟ ಮಾಡಿ ಖಾಲಿ ಹೆಡಿಗೆ ಮನೆಗೆ ತರುವವರು. ಆ ಸೇವೆಯಿಂದಾಗಿ ಅವರ ಕೈ ಮೇಲು. ಅದೇ ಅವರ ಮಾರಾಟದ ಗುಟ್ಟು. ಅದೇ ಅವರ ಕುಲಕಸುಬು. ಸಂಸಾರದ ಜೀವನೋಪಾಯದ ಏಕೈಕ ವೃತ್ತಿ. ಮೀನಿನ ಕ್ಷಾಮ ತಲೆದೋರಿದಾಗ ದಾರಿ ತೋಚದೆ ಕೈಕಾಲು ಬಿಡುವ ಪ್ರವೃತ್ತಿ.

ಒಮ್ಮೆ ನಾನು ಮೂಸಬ್ಬನ ಹತ್ತಿರ ಮೀನು ಖರೀದಿಸುತ್ತಿದ್ದಾಗ, ಅವನೆಂದ ''ಸಾರ್ ನಿಮ್ಮ ಮನೆ ಕಟ್ಟಡದ ಕೆಲಸ ಮುಗಿಯಿತೇ? ಏನಾದರೂ ಗುಜರಿ ಇದ್ದರೆ ಕೊಡಿ, ನೀವು ಹೇಳಿದಾಗ ನಾನು ಬರುತ್ತೇನೆ.'' ಸ್ವಲ್ಪ ಆಲೋಚನೆ ಮಾಡಿ ''ನಾಳಿದ್ದು ಆದಿತ್ಯವಾರ ಬಾ'' ಎಂದೆ. ಅಂದು ನನ್ನ ಶ್ರೀಮತಿ ಎಲ್ಲೋ ಹೊರಗೆ ಹೋಗುವವಳಿದ್ದಳು ಎಂದು ನನಗೆ ಗೊತ್ತಿತ್ತು. ಅವಳ ಅನುಪಸ್ಥಿತಿಯೇ ಗುಜರಿ ನಿವಾರಣೆಗೆ ಅನುಕೂಲವಾಗಿತ್ತು. ಅದೆಷ್ಟೋ ತಿಂಗಳಿನಿಂದ ತಮ್ಮ ಗುಣಮಟ್ಟವನ್ನು ಕಳೆದುಕೊಂಡಿದ್ದ ಹಲವಾರು ನಿರ್ಲೇಪ ಕಾವಲಿಗಳು, ಪಾತ್ರೆಗಳು, ಎಣ್ಣೆಯ ಖಾಲಿ ಡಬ್ಬಿಗಳು, ಗಾಜಿನ ಬಾಟ್ಲಿಗಳು ಮನೆಯಲ್ಲಿ ಜಮಾಗೊಂಡಿದ್ದವು. ತಾನು ನಿಗದಿಪಡಿಸಿದ ಬೆಲೆ ಸಿಗಬೇಕೆಂದು ಪಿಟ್ಟಾಸಿ ಆದ ಅವಳು ಪಟ್ಟು ಹಿಡಿದಿದ್ದಳು. ಆ ಕಾರಣದಿಂದ ಯಾರೂ ಕೊಂಡುಹೋಗದೆ ಅವು ಹಾಗೆಯೇ ಉಳಿದುಹೋಗಿದ್ದವು. ಅದಲ್ಲದೆ ಅಂಕು ಡೊಂಕಾದ ಯಾವ ಕೆಲಸಕ್ಕೂ ಬಾರದ ಕಬ್ಬಿಣದ ಸರಳುಗಳು, ಪೈಪುಗಳು, ಪೈಂಟಿನ ಖಾಲಿ ಡಬ್ಬಿಗಳು ತೋಟದಲ್ಲಿ ಅಲ್ಲಲ್ಲಿ ಬಿದ್ದುಕೊಂಡಿದ್ದವು. ಅಂದು ಆದಿತ್ಯವಾರ ಬಂದಿದ್ದ ಮೂಸಬ್ಬನು ಅವನ್ನೆಲ್ಲ ಹೆಕ್ಕಿ ಬಳಸಲಾಗದ ಹಳತು ಪಾತ್ರೆಗಳ ಸಹಿತ ತನ್ನ ಕೈಗಾಡಿಯಲ್ಲಿ ತುಂಬಿಸಿಕೊಂಡು ಹೋಗುವಾಗ ಅವನೊಂದಿಷ್ಟು ಹಣ ಕೊಟ್ಟಿದ್ದರೂ, ಅವನು ತನ್ನ ಗುಜರಿ ಅಂಗಡಿಯಲ್ಲಿ ವರ್ಗೀಕರಿಸಿ ಮಾರಾಟ ಮಾಡಿ ಒಂದಷ್ಟು ಹಣ ಸಂಪಾದಿಸಿಯಾನು. ಇದರಲ್ಲಿ ನನಗೇನೂ ಪಶ್ಚಾತ್ತಾಪವಿರಲಿಲ್ಲ. ಕಣ್ಣಿಗೆ ಕಸದಂತಿದ್ದ, ಕೈಕಾಲುಗಳ ಚಲನೆಗೆ ಅಡ್ಡ ಬರುತ್ತಿದ್ದ ಆ ಗುಜರಿಯ ನಿವಾರಣೆ, ಅಡ್ಡಾಡಲು ಸ್ವಚ್ಛ ವಾತಾವರಣ ನಿರ್ಮಾಣವಾದಂತಾಯಿತು.

ಸುಮಾರು ಒಂದು ಗಂಟೆ ಕಾಲ ಗುಜರಿ ಜಮಾವಣೆಗಾಗಿ ಬಿಸಿಲಿನಲ್ಲಿ ಒದ್ದಾಡಿ ಬೆವತುಹೋದ ಅವನ ಮೇಲೆ ಕನಿಕರಗೊಂಡು ''ಬಾಯಾರಿಕೆಗೇನಾದರೂ ಕೊಡಲೇ?'' ಎಂದು ನಾನೆಂದಾಗ ''ಬೇಡ, ನನಗೀಗ ರಮ್ಜಾನ್ ತಿಂಗಳ ಉಪವಾಸ'' ಎಂದ. ಜೊಲ್ಲು ರಸವನ್ನೂ ಇಂಗಿಕೊಳ್ಳಬಾರದೆಂಬ ಕಟ್ಟುನಿಟ್ಟಾದ ಆಚರಣೆಯ ಉಪವಾಸವಾಗಿತ್ತದು. ಎಳೆಯವರಾಗಿದ್ದಾಗ ನಾವು ಹಳೆಯ ಸಂಪ್ರದಾಯವನ್ನು ಅನುಸರಿಸಿ, ಆಚರಿಸುತ್ತಿದ್ದ ಗೋಕುಲಾಷ್ಟಮಿಯ ಉಪವಾಸವನ್ನು ನೆನವರಿಸಿಕೊಂಡೆನು. ನಡುರಾತ್ರಿ ಚಂದ್ರೋದಯವಾದಾಗ ಕೃಷ್ಣ ಜನ್ಮವೆತ್ತುತ್ತಾನೆ. ಆಗ ಸಿಹಿ ಕಡುಬು ತಿಂದು ದಿನದ ಉಪವಾಸವನ್ನು ಮುಕ್ತಾಯಗೊಳಿಸುವುದು ಹಸನಾದ ನೆನಸಾಗಿತ್ತು. ಈ ಮಧ್ಯೆ ಮಧ್ಯಾಹ್ನ ಹೊತ್ತು ಫಲಾಹಾರವೆಂಬ ಉಪಾಹಾರ ಮಾನ್ಯವಾಗುತ್ತಿತ್ತು. ಫಲಾಹಾರದ ಹೆಸರಿನಲ್ಲಿ ಹಣ್ಣು ಹಂಪಲುಗಳೊಂದಿಗೆ ನಿತ್ಯ ಆಹಾರವಾಗಿ ಬಳಸದ ತಿಂಡಿ ತಿನಿಸುಗಳೂ ಸೇರಿ, ಉಪವಾಸದ ಉದ್ದೇಶವನ್ನೇ ನಿರ್ಲಕ್ಷಿಸಿ ಅವನ್ನು ಹೊಟ್ಟೆಬಾಕರಂತೆ ತಿಂದು ಸಂಭ್ರಮಿಸುತ್ತಿದ್ದೆವು. ಇನ್ನು ಮುಂದೆ ಯಾವಾಗ ಉಪವಾಸ ಎಂದು ದಿನಗಳ ಎಣಿಕೆ ಹಾಕುತ್ತಿದ್ದೆವು. ಮೂಸಬ್ಬನ ಉಪವಾಸವೇನಾದರೂ ಈ ತರದ್ದೋ? ಹೀಗೆ ಕೇಳುವುದು ಅಸಭ್ಯವೆಂದೆಣಿಸಿ ನಾನು ಅವನೊಡನೆ ಮಾತಿಗಿಳಿಯಲಿಲ್ಲ. ಅಂತೂ ರಮ್ಜಾನ್ ದಿನಗಳಲ್ಲಿ ವಿಶೇಷ ಬೇಡಿಕೆಯಿಂದಾಗಿ ಹಣ್ಣು ಹಂಪಲುಗಳ ಅಭಾವ ಉಂಟಾಗಿ ಮಾರುಕಟ್ಟೆಯಲ್ಲಿ ಅವುಗಳ ಕ್ರಯ ಗಗನಕ್ಕೇರುವುದು ಸಾಮಾನ್ಯ.

ಮೂಸಬ್ಬನ ಪರಿಚಯ ನನಗೆ ಮೊದಲ ಬಾರಿ ಆದದ್ದು, ಅವನಿಂದೊಮ್ಮೆ ಸೇಬು ಹಣ್ಣು ಖರೀದಿಸಿದಾಗ. ಆಗ ಅದು ಸೇಬು ಹಣ್ಣಿನ ಸೀಸನ್ ಆಗಿತ್ತು. ರಸ್ತೆಯಂಚಿನಲ್ಲಿ ತನ್ನ ಮಾರಾಟದ ಕೈಗಾಡಿಯನ್ನಿರಿಸಿ, ಆಗ ತಾನೇ ಹಾದು ಹೋಗುತ್ತಿದ್ದ ಲಾರಿಯಿಂದ ಸೇಬು ಹಣ್ಣು ತುಂಬಿದ ಎರಡು ಗೋಣಿಚೀಲಗಳನ್ನು ಇಳಿಸಿ, ಅವನ್ನು ಗಾಡಿಯ ಮೇಲೆ ಸುರಿಸಿ ಸಿಂಗರಿಸುತ್ತಿದ್ದ. ''ಸಿಮ್ಲಾ ಆಪಲ್, ಸಿಮ್ಲಾ ಆಪಲ್'' ಎನ್ನುತ್ತಿದ್ದ. ಹಣ್ಣುಗಳು ವರ್ಣರಂಜಿತವಾಗಿದ್ದು ನೋಟಕ್ಕೆ ತುಂಬ ಆಕರ್ಷಕವಾಗಿದ್ದವು ಮತ್ತು ತಾಜಾ ಎಂದು ಕಂಡುಬರುತ್ತಿದ್ದವು. ಕಿಲೋ ಒಂದಕ್ಕೆ ಬರೇ ರೂ. ೪೦ ಎಂದಾಗ ಹಣ್ಣು ಈಗ ಇಷ್ಟು ಅಗ್ಗವೇ ಎಂದಾಯಿತು. ನಮೂನೆ ತೋರಿಸಲೆಂದು ಕತ್ತರಿಸಿದ ಒಂದು ತುಂಡನ್ನು ನನಗೆ ತಿನ್ನಲು ಕೊಟ್ಟನು. ಹಣ್ಣು ನಿಜವಾಗಿಯೂ ಸ್ವಾದಿಷ್ಟವಾಗಿತ್ತು. ಆದುದರಿಂದ ಒಂದು ಕಿಲೋ ಖರೀದಿಸಲು ನಾನು ಹಿಂದೆ ಮುಂದೆ ನೋಡಲಿಲ್ಲ. ಎರಡು ತಿಂಗಳ ಹಿಂದೆ ಖರೀದಿಸಿದ ಸೇಬು ಹಣ್ಣಿನ ಗುಣಮಟ್ಟದ ಕುರಿತಾದ ನನ್ನ ಅನುಭವ ಇದಕ್ಕೆ ತೀರಾ ವ್ಯತಿರಿಕ್ತವಾಗಿತ್ತು. ಅಂದು ನಾನು



ವೈದ್ಯರ ಸಲಹೆಯ ಮೇರೆಗೆ, ಆಸ್ಪತ್ರೆಯಲ್ಲಿ ದಾಖಲಾಗಿದ್ದ ಮಿತ್ರನೊಬ್ಬನಿಗೆ ಉಡುಗೊರೆಯಾಗಿ ಕೊಡಲು ಹಣ್ಣು ಖರೀದಿಗಾಗಿ ಮಾರುಕಟ್ಟೆಗೆ ಹೋಗಿ ರೂ. ೧೧೦ರ ದರದಲ್ಲಿ ಒಂದಿಷ್ಟು ಸೇಬು ಹಣ್ಣು ಕೊಂಡು ಕೈಸುಟ್ಟುಕೊಂಡಂತಹ ಅನುಭವವಾಗಿತ್ತು. ಆಗ ನಮ್ಮ ದೇಶದಲ್ಲಿ ಸೇಬು ಹಣ್ಣಿನ ಸೀಸನ್ ಆಗಿರದಿದ್ದುದರಿಂದ ದೊರೆತದ್ದು ಆಸ್ಟ್ರೇಲಿಯಾದಿಂದ ಆಮದಾದ ಹಣ್ಣು. ಅದರ ಶೇಖರಣೆಯ ವಿಧಾನದಿಂದಲೋ ಅಥವಾ ಸಮಯ ಕಳೆದು ಹೋದುದರಿಂದಲೋ ಏನೋ ಅದು ತನ್ನ ಗುಣಮಟ್ಟವನ್ನು ಕಳೆದು ಕಳಪೆಯಾಗಿತ್ತು. ಅದು ಹೊರನೋಟಕ್ಕೆ ತೋರುತ್ತಿದ್ದಿಲ್ಲ. ಆ ಕಾರಣ ನಾನು ಮೋಸ ಹೋದೆನೆಂದು ಉಡುಗೊರೆ ಪಡೆದ ಮಿತ್ರನಿಂದ ತಿಳಿಯಿತು. ತಪ್ಪಿತಸ್ಥ ಮನೋಭಾವವು ನನ್ನನ್ನು ಕಾಡತೊಡಗಿತ್ತು. ''ಸೇಬು ಹಣ್ಣನ್ನು ಸೀಸನಿನಲ್ಲಿಯೇ ಖರೀದಿಸಬೇಕು. ನಾವು ಸೀಸನ್ ತಪ್ಪಿ ಅದರ ದಂಧೆಗೆ ಹೋಗಿ ಗಿರಾಕಿಗಳ ನಂಬಿಕೆಯನ್ನು ಕಳೆದುಕೊಳ್ಳುವುದಿಲ್ಲ'' ಎಂದೆನ್ನುತ್ತಿದ್ದನು ಮೂಸಬ್ಬ ಬ್ಯಾರಿ. ತಮ್ಮ ಸರಕು ಮಾರಾಟವಾಗುವವರೆಗೆ 'ಬ್ಯಾರ'ದವರ ಮಾತು ಹೀಗೆಯೇ ರಂಗು; ಮರಳು ಮಾಡುವಂಥಾದ್ದು ಎಂಬ ಪ್ರತೀತಿ ಇದ್ದರೂ ಮೂಸಬ್ಬನ ಪ್ರಾಮಾಣಿಕತೆ ಪಾರದರ್ಶಕವಾಗಿ ನನಗೆ ಅಂದು ಕಂಡುಬಂತು. ಅವನು ಎಲ್ಲರಂತಲ್ಲವೆಂಬಂತಾಯಿತು. ಅಂದಿನಿಂದ ನನಗೂ ಅವನಿಗೂ ಸೇಬು ಹಣ್ಣಿನ ವ್ಯವಹಾರದಲ್ಲಿ ಗಾಢ ಸಂಬಂಧ.

ಒಮ್ಮೆ ಸಮುದ್ರ ಬದಿಯಲ್ಲಿ ಅಡ್ಡಾಡುತ್ತಿದ್ದಾಗ ಅಲ್ಲಿ ಒಂದು ಆಶ್ಚರ್ಯ ನನ್ನನ್ನು ಕಾದಿತ್ತು. ಸಮುದ್ರ ದಡದಲ್ಲಿ ಸಿಗುವ ಹುರಳಿ ಗಾತ್ರದ ಕಿರಿದಾದ 'ಉರಿ' ಎಂಬ ಜೀವಿ ಇರುವ ಚಿಪ್ಪುಗಳ ರಾಶಿಗಳು ಅಲ್ಲಲ್ಲಿ ಶೇಖರಿಸಿದ್ದುದು ಕಂಡುಬರುತ್ತಿದ್ದವು. ಅವನ್ನು ಸಂಗ್ರಹಿಸಿದವರೆಂದು ಕಂಡುಬರುತ್ತಿದ್ದ ಯುವಕರು ಗಿರಾಕಿಯಾಗಿ ಬಂದಂತೆ ಕಂಡುಬರುತ್ತಿದ್ದ ವ್ಯಕ್ತಿಯೋರ್ವನನ್ನು ಹಿಂಬಾಲಿಸುತ್ತಾ ತಮ್ಮ ಸೊತ್ತಾದ ರಾಶಿಗಳ ಹತ್ತಿರ ಕರೆದುಕೊಂಡು ಹೋಗಿ ಅವನ ವೀಕ್ಷಣೆಗೆ ಒಪ್ಪಿಸುತ್ತಿದ್ದರು. 'ಉರಿ'ಯಲ್ಲಿ ಆಸಕ್ತಿ ತೋರಿಸುವ ಈ ವ್ಯಕ್ತಿ ಯಾರಿರಬಹುದೆಂದು ಕುತೂಹಲದಿಂದ ನಾನು ಹತ್ತಿರ ಹೋಗಿ ನೋಡಿದಾಗ ಅವನು ಮೂಸಬ್ಬನೇ ಆಗಿದ್ದನು. ''ಇವನೊಬ್ಬ ಸರ್ವಾಂತರ್ಯಾಮಿಯೆ ?'' ಈ 'ಉರಿ'ಯಲ್ಲಿ ಇವನು ಏನನ್ನು ಕಂಡಿರಬಹುದು ? ನನ್ನ ಎಣಿಕೆಯಲ್ಲಿ ಯಾವ ಉಪಯೋಗಕ್ಕೂ ಬಾರದ ಈ 'ಉರಿ'ಯ ಖರೀದಿಯೂ ಇವನ ದಂಧೆಯ ವ್ಯಾಪ್ತಿಯಲ್ಲಿ ಬಂತೇ ? ಎಂದು ಕುತೂಹಲಗೊಂಡೆನು.

'ಉರಿ'ಯ ಲೇವಾದೇವಿ ಆದನಂತರ ನಾನು ಮೂಸಬ್ಬನನ್ನು ಹತ್ತಿರ ಕರೆದು ಮಾತನಾಡಿಸಿದಾಗ ಅವನ ವಿವಿಧ ದಂಧೆಗಳ ವ್ಯಾಪ್ತಿಯ ಅರಿವಾಯಿತು. 'ಉರಿ'ಯನ್ನು ತಮ್ಮ ತೆಂಗಿನ ಮರಗಳ ಬುಡಕ್ಕೆ ಹಾಕಲು ಕೊಂಡುಕೊಳ್ಳಲು ಗಿರಾಕಿಗಳಿದ್ದಾರೆ. ಅದರಲ್ಲಿರುವ ಸೂಕ್ಷ್ಮ ಜೀವಿಯು ಕೊಳೆತ ನಂತರ ಅದು ಮರಕ್ಕೆ ಗೊಬ್ಬರವಾಗುತ್ತದೆ. ಅವನ ಗಿರಾಕಿಗಳು ಅವನನ್ನೇ ಹುಡುಕಿಕೊಂಡು ಬರುತ್ತಾರೆ. ಅವನೊಬ್ಬ ಮಧ್ಯವರ್ತಿ ಮಾತ್ರ. 'ಉರಿ' ದೊರೆಯುವುದಕ್ಕೂ ಒಂದು ಸೀಸನ್ ಇದೆ. ಕೆಲವೊಮ್ಮೆ ದೊಡ್ಡಗಾತ್ರದ ಚಿಪ್ಪುಗಳೂ ದೊರಕುತ್ತವೆ. ಅದನ್ನು ಸುಣ್ಣ ಮಾಡುವವರು ಕೊಂಡುಹೋಗುತ್ತಾರೆ. ''ಈ ದಂಧೆಯಲ್ಲಿ ಹಣ ಉಂಟು. ಚಿಪ್ಪನ್ನು ಸಮುದ್ರ ದಡದಿಂದ ಮೇಲೆತ್ತಿ ಶೇಖರಿಸಿಟ್ಟವರಿಗೆ ತಮ್ಮ ಸರಾಯಿ ತೊಟ್ಟೆಗೆ ತಕ್ಕ ಹಣ ಸಿಕ್ಕಿದರೆ ಸಾಕು'' ಎನ್ನುತ್ತಿದ್ದ ಮೂಸಬ್ಬ. ''ನೀನು ಕುಡಿಯುವುದಿಲ್ಲವೋ'' ಎಂದದಕ್ಕೆ ಅದು ಜಾತಿಯಲ್ಲಿ (ಕುರಾನಿನಲ್ಲಿ) ನಿಷೇಧ ಎಂದ. ''ಅಂತೂ ಕೆಲವರು ಕುಡಿಯುತ್ತಾರೆ, ನಾನೆಂದೂ ಕುಡಿಯುವುದಿಲ್ಲ''ವೆಂದು ತನ್ನ ಸಾತ್ವಿಕತೆಯನ್ನು ತೋರಿಸಿದ. ಕುಡುಕನ ಚರ್ಯೆ ಅವನ ನಡತೆಯಲ್ಲಿ ಕಂಡುಬರುತ್ತಿದ್ದಿಲ್ಲ. ಆದುದರಿಂದ ಅವನ ಮಾತನ್ನು ಒಪ್ಪಿಕೊಳ್ಳಲು ನನಗೆ ಕಷ್ಟವಾಗಲಿಲ್ಲ. ಅವನ ಮೇಲೆ ನನಗಿದ್ದ ಅಭಿಮಾನ ಇದರಿಂದಾಗಿ ಹೆಚ್ಚಾಯಿತು. ಆ ನಿಷೇಧವನ್ನು ಕಟ್ಟುನಿಟ್ಟಾಗಿ ಪಾಲಿಸಿ, ದುರ್ವ್ಯಸನದಿಂದ ಮುಕ್ತರಾಗುವ ಧರ್ಮಾನುಯಾಯಿಗಳು ಬಹುತೇಕ ಮಂದಿ !




ಆಸ್ಪತ್ರೆಯಿಂದ ಆಸ್ಪತ್ರೆಗೆ ವೈದ್ಯಸಾಹಿತ್ಯ ಪ್ರಚಾರ ಆಂದೋಲನ ಯಶಸ್ವಿಯಾಗಿ ಮುಂದುವರಿಯುತ್ತಿದೆ.

ಅಕ್ಟೋಬರ್ ಹದಿಮೂರರಂದು ಬೆಂಗಳೂರಿನ ಇಂದಿರಾನಗರದಲ್ಲಿರುವ ಇ.ಎಸ್.ಐ. ಆಸ್ಪತ್ರೆಯಲ್ಲಿ ನಡೆದ ಪುಸ್ತಕ ಪ್ರದರ್ಶನ ಮತ್ತು ಮಾರಾಟ ಕಾರ್ಯಕ್ರಮವನ್ನು ಆಸ್ಪತ್ರೆಯ ವೈದ್ಯಕೀಯ ಅಧೀಕ್ಷಕರಾದ ಡಾ॥ ವಲ್ಸಾ ಮ್ಯಾಥ್ಯೂಸ್ ಅವರು ಉದ್ಘಾಟಿಸಿದರು.

'ಆಡು ತಿನ್ನದ ಸೊಪ್ಪಿಲ್ಲ, ಮೂಸಬ್ಬನು ಮಾಡದ ದಂಧೆಗಳು ಇಲ್ಲ' ಎಂದೆನಿಸಿತು. ಅವುಗಳಲ್ಲಿ ಹೆಚ್ಚಿನವು ಸೀಸನ್ ಮಿತಿಗೆ ಒಳಪಟ್ಟವು. ಅವನ ಗುಜರಿ ದಂಧೆ ನನಗೆ ಮುಂಚೆ ಗೊತ್ತಿದ್ದದ್ದೇ; ಹಾಗೇನೇ ಮೀನು ಮಾರಾಟ, ಹಣ್ಣು ಮಾರಾಟ ಇದಲ್ಲದೇ ಹಿಂದೂಗಳ ಹಬ್ಬ ಹರಿದಿನಗಳಲ್ಲಿ, ಗಣೇಶ ಚತುರ್ಥಿ, ಗೋಕುಲಾಷ್ಟಮಿ ದಿನಗಳಲ್ಲಿ ತನ್ನ ಗಾಡಿಯಲ್ಲಿ ಹೂ ಮಾರಾಟ. ಬಸ್ ನಿಲ್ದಾಣದಲ್ಲಿ ಬಸ್ಸಿಗಾಗಿ ಕಾಯುತ್ತಿರುವ ಹೆಂಗಳೆಯರು ಮಂಗಳೂರಿನ ಜಾಜಿ ಮಲ್ಲಿಗೆಗಾಗಿ ಅವನ ಗಾಡಿಗೆ ಮುತ್ತಿಗೆ ಹೋಗುತ್ತಾರೆ. ದೀಪಾವಳಿ, ಉರುಸ್, ಕ್ರಿಸ್‌ಮಸ್ ಮತ್ತು ಹೊಸವರ್ಷದ ದಿನಗಳಲ್ಲಿ ಗೂಡು ದೀಪ ಮತ್ತು ಪಟಾಕಿ ವ್ಯಾಪಾರ. ಮೀನು ಯಥೇಷ್ಟ ಬರುತ್ತಿದ್ದ ಕಾಲದಲ್ಲಿ, ಒಣ ಮೀನು ತುಂಬಿದ, ತನ್ನ ಕಾಕನ ಲಾರಿಯಲ್ಲಿ ಗಟ್ಟಕ್ಕೂ, ಹಸಿಮೀನು ತುಂಬಿಸಿ ಮೈಸೂರಿಗೂ ಹೋಗುತ್ತಿದ್ದನಂತೆ. ತಾನು ಸಂಪಾದಿಸಿದ ಹಣದಿಂದ ಇತ್ತೀಚೆಗೆ ಟೆರೆಸಿನ ಮನೆಯನ್ನೂ ಕಟ್ಟಿಸಿದೆನೆಂದು ಹೆಮ್ಮೆಯಿಂದ ಹೇಳಿಕೊಂಡ.

ಮೂಸಬ್ಬನು ಒಬ್ಬ ನಿರಕ್ಷರಕುಕ್ಷಿ. ಆದುದರಿಂದ ಕಲಿತವರಿಗಿದ್ದ ಒಣ ಪ್ರತಿಷ್ಠೆ ಅವನಿಗಿರಲಿಲ್ಲ. ಅವನ ದಂಧೆಗೆ ಅದು ಅಡ್ಡ ಬರುತ್ತಿದ್ದಿಲ್ಲ. ಅವನು ಸ್ವ-ಉದ್ಯೋಗದ ತರಬೇತಿಗಾಗಿ ಯಾವ ತರಬೇತಿ ಕೇಂದ್ರವನ್ನೂ ಸೇರಿ ತರಬೇತಿ ಪಡೆದವನಲ್ಲ, ಉದ್ಯೋಗ ಶುರು ಮಾಡಲು ಯಾವ ಸಂಸ್ಥೆಯಿಂದಲೂ ಸಹಾಯಧನ ಪಡೆದವನಲ್ಲ, ಪಡೆದು ಅದನ್ನು ಮುಳುಗಿಸಿದವನೂ ಅಲ್ಲ. ''ನಮ್ಮಲ್ಲಿ ಕಲಿತವರಿಗೂ ಸರಕಾರಿ ನೌಕರಿ ಸಿಗುವುದು ಕಷ್ಟ' ಎಂದು ಅವನ ಅಂಬೋಣವಾಗಿತ್ತು. ಈ ಆಪಾದನೆಯಲ್ಲಿ ಸತ್ಯಾಂಶ ಇದ್ದರೂ ಇರಬಹುದು ಎಂದು ನನಗನಿಸಿತು.

ಟೆರೆಸಿನ ಮನೆ ಕಟ್ಟಿಸಿದ್ದೇನೆಂದ ಮೂಸಬ್ಬ ಗಟ್ಟಿ ಕುಳುವಾರಿ ಎಂಬ ಗುಟ್ಟು ನನಗೆ ಈ ಹಿಂದೆಯೇ ಗೊತ್ತಿತ್ತು. ಅದೊಂದು ದಿನ 'ಪೆರ್ನಾಲ್' ಪರವಾಗಿ ನಡೆಯಿಸಲಾಗುತ್ತಿದ್ದ ಸಾಮೂಹಿಕ ನಮಾಜಿಗಾಗಿ ಮಸೀದಿಯತ್ತ ತನ್ನ ಎರಡು ಮಕ್ಕಳ ಸಂಗಡ ಹೋಗುತ್ತಿದ್ದಾಗ ನಾನು ಎದುರಾದೆ. ಆಗ ಅವನ ಅಂದಿನ ಪೋಷಾಕು ಕಂಡು ಗುರುತು ಹಿಡಿಯುವುದೇ ಕಷ್ಟವಾಯಿತು. ತಲೆಗೆ ನಮಾಜ್ ಟೊಪ್ಪಿ ಹಾಕಿದ್ದ. ಕೈಕುಸುರಿ ಕೆಲಸದ, ತೂತುಗಳಿದ್ದ, ಕಪೋಲವನ್ನು ಬಿಗಿದಪ್ಪಿಕೊಂಡಿದ್ದ ಆ ಟೊಪ್ಪಿಯ ಧರಿಸುವಿಕೆ ಶುಭದಿನದ ಆಚರಣೆಯಲ್ಲಿ ತನಗಿದ್ದ ಶ್ರದ್ಧೆಯನ್ನು ಸೂಚಿಸುವಂತಿತ್ತು. ಉದ್ದ ಕೈಗಳ ಅಂಗಿ ಮತ್ತು ಕಾಲಕಣ್ಣಿನವರೆಗೆ ಇಳಿಬಿಟ್ಟಿದ್ದ ಲುಂಗಿ ಎಲ್ಲವೂ ಶುಭ್ರ ಬಿಳುಪಾಗಿದ್ದವು. ಅಂಗಿಗೆ ತೊಟ್ಟ ಗುಂಡಿಗಳು ಫಳ ಫಳ ಎಂಧು ಹೊಳೆಯುತ್ತಿದ್ದವು. ತದ್ರೂಪಿ ಪೋಷಾಕು ಅವನ ಮುದ್ದು ಮಕ್ಕಳಿಗೂ ತೊಡಿಸಿದ್ದನು. ಗುರುತು ಹಚ್ಚಿದ ಕೂಡಲೇ ನಾನು ಹರ್ಷಚಿತ್ತದಿಂದ 'ಈದ್ ಮುಬಾರಕ್ ಹೋ' ಎಂದು ಕೈಕುಲುಕಿದೆ. ಮಕ್ಕಳ ಬೆನ್ನು ಸವರಿದೆ. ಅವನೆಂದ ''ನಿಮ್ಮನ್ನು ಒಂದು ವಾರದ ಹಿಂದೆ ಹೋಟೆಲು ದಯಾನಂದದಲ್ಲಿ ನೋಡಿದ್ದೆ. ಆಗ ನೀವು ಇನ್ನೊಬ್ಬ ವ್ಯಕ್ತಿಯೊಂದಿಗೆ ಅಲ್ಲಿ ಊಟಕ್ಕೆ ಬಂದಿದ್ದಿರಿ. ನಾನು ಮತ್ತು ನನ್ನ ಮನೆಯವರು ದೂರದ ಮತ್ತೊಂದು ಮೇಜಿನ ಹತ್ತಿರ ಕೂತು ಊಟ ಮಾಡುತ್ತಿದ್ದೆವು. ಅಂದು ನನ್ನ ಕಿರಿಯ ಮಗನ ಹುಟ್ಟುಹಬ್ಬವಾಗಿತ್ತು''. ಬುರ್ಖಾ ತೊಟ್ಟಿದ್ದ ಹೆಂಗಸು ಮತ್ತು ಮಕ್ಕಳನ್ನೊಡಗೂಡಿದ್ದ ಒಂದು ಸಂಸಾರ ಅಲ್ಲಿ ಬಂದಿದ್ದುದನ್ನು ನಾನು ಜ್ಞಾಪಿಸಿಕೊಂಡೆ. ಹೋಟೆಲು ಸ್ವಲ್ಪ ದೊಡ್ಡ ದರ್ಜೆಯದ್ದೇ ಆಗಿತ್ತು. ಅಂದು ಮದ್ಯಪಾನವಿಲ್ಲದ ನಮ್ಮಿಬ್ಬರ ಊಟದ ಬಿಲ್ಲು ರೂ. ೧೫೦ಕ್ಕೆ ಮೀರಿತ್ತು. ಮೂಸಬ್ಬನ ಜೀವನದ ಚಿತ್ರಣ ಹಠಾತ್ತಾಗಿ ಕಣ್ಣ ಮುಂದೆ ನಿಂತಿತು. ಕೈಕೆಸರಾದರೆ ಬಾಯಿ ಮೊಸರು ಎಂಬ ನಾಣ್ನುಡಿಯ ನೀತಿಯನ್ನು ಅದು ಸಾಧಿಸುವಂತಿತ್ತು. ಬೆನ್ನು ಬಾಗಿಸಿ ದುಡಿಯದ ಮೈಗಳ್ಳರ ಹೊಟ್ಟೆಗೆ ಕಿಚ್ಚನ್ನಿಕ್ಕುವಂತಿತ್ತು. ಕೈಲಾಗದವರು ಮೈಯೆಲ್ಲಾ ಪರಚಿಕೊಂಡರಂತೆ.

ಅಂದು ಸಮುದ್ರ ದಡದಲ್ಲಿ ಕೂತು ಮೂಸಬ್ಬನ ಯಶೋಗಾಥೆಯನ್ನು ಸ್ಮರಿಸುತ್ತ ಸಮಯ ಹೋದದ್ದೇ ಗೊತ್ತಾಗಿರಲಿಲ್ಲ, ರಾತ್ರಿಯಾಗಿತ್ತು. ಚಂದ್ರನ ಬೆಳಕು ಬಿಳಿ ಮರಳಿನ ಮೇಲೆ ಹಾಲು ಚೆಲ್ಲಿದಂತೆ ಹರಡಿ ಪ್ರಕಾಶಿಸುತ್ತಿತ್ತು. ಅವನೊಡನೆ ಮಾತು ಮುಗಿಸಿ ಮನೆಯತ್ತ ನಡೆದು ಬರುತ್ತಿದ್ದಾಗ ಹ್ಯೊಗೆಯ ಮೇಲೆ ಅದೇ ಬೆಳದಿಂಗಳಿನ ಪ್ರಕಾಶದಲ್ಲಿ ನಿರುದ್ಯೋಗಿ ಯುವಕರು ಇಸ್ಪೀಟು ಆಡುತ್ತಿರುವುದು ಕಂಡುಬರುತ್ತಿತ್ತು.

ಟಿ. ಸಿ. ಶ್ರೀಯಾನ್
ಮಾರಿಗುಡಿ ರಸ್ತೆ, ಸುರತ್ಕಲ್, ಮಂಗಳೂರು - ೫೭೫ ೦೧೪

# ಅಳಿವಿನಂಚಿನಲ್ಲಿ ಭಾಷಾ ವೈವಿಧ್ಯ

**ಸತೀಶ್‌ಕುಮಾರ್ ಅಂಡಿಂಜೆ**

**ಭಾಷೆ** ನಮ್ಮ ಭಾವನೆ, ಯೋಚನೆಗಳ ಅಭಿವ್ಯಕ್ತಿಯ ಒಂದು ಸಶಕ್ತ ಮಾಧ್ಯಮ. ಮಾನವನನ್ನು ಪ್ರಾಣಿ ಪ್ರಪಂಚದಿಂದ ಪ್ರತ್ಯೇಕಿಸಿರುವುದು ಈ ಭಾಷೆಯೇ. ಸೃಷ್ಟಿಯ ವೈವಿಧ್ಯತೆಯ ಜೀವ ಸಂಕುಲಗಳಲ್ಲಿ ಮಾತನಾಡುವ ಸಾಮರ್ಥ್ಯವಿರುವುದು ಮಾನವನಿಗೆ ಮಾತ್ರ. ಇಂದು ಪ್ರಪಂಚದಲ್ಲಿರುವ ಭಾಷೆಗಳೆಷ್ಟು ಎಂದು ಕೇಳಿದರೆ ಉತ್ತರಿಸುವುದು ಕಷ್ಟ. ಕೆಲವು ಭಾಷಾ ಚಿಂತಕರು ಸುಮಾರು ಐದು ಸಾವಿರಕ್ಕೂ ಅಧಿಕ ಎಂದರೆ, ಹಲವರು ೧೦ ಸಾವಿರದವರೆಗೂ ಭಾಷೆಯ ವೈವಿಧ್ಯತೆ ಹರಡಿದೆ ಎಂದಿದ್ದಾರೆ. ಒಟ್ಟಿನಲ್ಲಿ ಪ್ರಪಂಚದಲ್ಲಿರುವ ಭಾಷೆಗಳು ಮತ್ತು ಭಾಷಿಗರ ಸಂಖ್ಯೆ ಅಸಂಖ್ಯ ಎನ್ನಬಹುದು.

ಈ ವಿಶಾಲ ವಿಶ್ವದಲ್ಲಿನ ಪ್ರತಿಯೊಂದು ದೇಶವೂ ತನ್ನದೇ ಆದ ವಿಶಿಷ್ಟ ಭಾಷೆಯನ್ನು ಹೊಂದಿದೆ. ಆದರೆ ಅಂತಾರಾಷ್ಟ್ರೀಯ ಸಂಬಂಧಗಳು ಅತ್ಯುಚ್ಚವಾಗಿರುವ ಇಂದಿನ ದಿನಗಳಲ್ಲಿ ಯಾವುದೇ ಒಂದು ದೇಶ ಒಂದೇ ಒಂದು ಭಾಷೆಯನ್ನು ಮಾತ್ರ ಅವಲಂಬಿಸಿಕೊಂಡು ಬಾಳುವುದು ಅಸಾಧ್ಯದ ಮಾತು. ಹಾಗಾಗಿಯೇ ದೇಶವೊಂದರಲ್ಲಿ ವಿಧವಿಧ ಭಾಷೆಯನ್ನಾಡುವ ಜನರು ಕಂಡುಬರುತ್ತಾರೆ. ಹಾಗಿದ್ದರೂ ಪ್ರತಿಯೊಂದು ರಾಷ್ಟ್ರದಲ್ಲೂ ಯಾವುದೋ ಒಂದು ನಿರ್ದಿಷ್ಟ ಭಾಷೆ ಅಲ್ಲಿನ ಬಹುತೇಕ ಜನರಲ್ಲಿ ಹೃದಯಂಗಮವಾಗಿದ್ದು, ವ್ಯಾವಹಾರಿಕವಾಗಿ, ಆಡಳಿತಾತ್ಮಕವಾಗಿ ಹೆಚ್ಚು ಬಳಸಲ್ಪಡುತ್ತದೆ. ಅದೇ ಅಲ್ಲಿ 'ರಾಷ್ಟ್ರ ಭಾಷೆ' ಎಂದು ಮಾನ್ಯತೆ ಗಳಿಸುತ್ತದೆ.

ಪ್ರಪಂಚದಲ್ಲಿ ಎಲ್ಲಕ್ಕಿಂತ ಹೆಚ್ಚು ಭಾಷಿಗರನ್ನು ಹೊಂದಿರುವ ಭಾಷೆ ಇಂಗ್ಲಿಷ್ ಎಂಬ ತಪ್ಪು ಕಲ್ಪನೆ ಇದೆ. ಜಗತ್ತಿನ ಅತ್ಯಧಿಕ ಜನರ ಮಾತೃಭಾಷೆ ಚೀನೀ. ಚೀನೀ ಭಾಷಿಗರ ಸಂಖ್ಯೆ ಸುಮಾರು ೧,೦೭೫ ಮಿಲಿಯನ್. ನಂತರದ ಸ್ಥಾನ ಇಂಗ್ಲಿಷಿಗೆ. ಇಂಗ್ಲಿಷನ್ನು ೩೦೦ ರಿಂದ ೫೦೦ ಮಿಲಿಯನ್ ಜನರು ಮಾತೃಭಾಷೆಯಾಗಿ ಬಳಸಿದರೆ, ೭೦೦ ರಿಂದ ೧,೪೦೦ ಮಿಲಿಯನ್ ಜನರು ದ್ವಿತೀಯ ಹಾಗೂ ತೃತೀಯ ಭಾಷೆಯಾಗಿ ಬಳಸುತ್ತಿದ್ದಾರೆ. ವ್ಯಾವಹಾರಿಕ ಜಗತ್ತಿನಲ್ಲಿ ಜಗಜ್ಜನಿತವಾಗಿರುವುದು ಇಂಗ್ಲಿಷ್ ಭಾಷೆ.

ಮೆಲ್ಬೋರ್ನ್ ವಿಶ್ವವಿದ್ಯಾಲಯ ನಡೆಸಿದ ಸಂಶೋಧನೆಯೊಂದರ ಪ್ರಕಾರ ಈ ಶತಮಾನದ ಅಂತ್ಯದ ವೇಳೆಗೆ ಪ್ರಪಂಚದ ಶೇ. ೯೦ರಷ್ಟು ಭಾಷೆಗಳು ಕಣ್ಮರೆಯಾಗಲಿವೆ. ೪೪೦ ಭಾಷೆಗಳಂತು ಒಂದೆರಡು ತಲೆಮಾರುಗಳ ನಂತರ ಕೊನೆಯುಸಿರು ಎಳೆಯಲಿವೆ ಎಂಬ ಆಘಾತಕಾರಿ ವಿಷಯವನ್ನು ಅದು ತಿಳಿಸಿದೆ. ಭಾಷೆಗೂ ಜೀವನ ಚಕ್ರವಿದೆ. ಲಿಪಿ ಇಲ್ಲದ ಭಾಷೆ ಸತ್ತರೆ ಮತ್ತೆ ಮರು ಸೃಜಿಸಲಾಗದು. ಭಾಷೆಗೆ ಸಂತಾನೋತ್ಪತ್ತಿ ಶಕ್ತಿಯಿಲ್ಲ. ಒಂದು ಲಕ್ಷಕ್ಕಿಂತ ಕಡಿಮೆ ಮಂದಿ ಮಾತನಾಡುವ ಭಾಷೆಗಳಿಗೆ ಭವಿಷ್ಯವಿಲ್ಲ. ಪ್ರಪಂಚದ ಸುಮಾರು ಆರು ಸಾವಿರ ಭಾಷೆಗಳ ಪೈಕಿ ಸುಮಾರು ೩,೦೦೦ ಭಾಷೆಗಳಿಗೆ ಭಾಷಿಗರ ಸಂಖ್ಯೆ ಕೇವಲ ೧೦,೦೦೦ಕ್ಕಿಂತ ಕಡಿಮೆ. ೧,೫೦೦ ಭಾಷೆಗಳಿಗೆ ತಲಾ ಭಾಷಿಗರ ಸಂಖ್ಯೆ ಒಂದು ಸಾವಿರ. ಕೆಲವೇ ಭಾಷೆಗಳಿಗೆ ಮಾತ್ರ ಮಿಲಿಯನ್ ಜನರ ಬಾಯಲ್ಲಿ ನಲಿಯುವ ಭಾಗ್ಯವಿದೆ.

ಜಾಗತೀಕರಣದ ಪ್ರಭಾವದಿಂದ ಭಾಷೆಗಳ ಹುಟ್ಟಿಗಿಂತ ಸಾವಿನ ಪ್ರಮಾಣ ಜಾಸ್ತಿಯಾಗುತ್ತಿದೆ. ವಸಾಹತುಶಾಹಿ ಆಳ್ವಿಕೆ ಕೂಡ ಭಾಷೆಗಳ ಸಾವಿಗೆ ತನ್ನ ಕಾಣಿಕೆ ಸಲ್ಲಿಸಿದೆ. ಯುರೋಪ್ ದೇಶಗಳ ವಸಾಹತುಶಾಹಿಯಿಂದ ಶೇ. ೧೫ರಷ್ಟು ಭಾಷೆಗಳು ತಮ್ಮ ಅಸ್ತಿತ್ವ ಕಳೆದುಕೊಂಡಿವೆ. ಕಳೆದ ೩೦೦ ವರ್ಷಗಳಲ್ಲಿ ಯುರೋಪ್‌ನಲ್ಲಿ ೧೨ ಭಾಷೆಗಳು ಸಾವು ಕಂಡಿವೆ. ೧೮ನೇ ಶತಮಾನದ ಅಂತ್ಯದಲ್ಲಿ ಆಸ್ಟ್ರೇಲಿಯಾದಲ್ಲಿ ೨೦ ಭಾಷೆಗಳು ಮೂಲೆ ಸೇರಿವೆ. ಅಲ್ಲಿ ಆಗ ೨೫೦ ಭಾಷೆಗಳಿದ್ದವು. ೧೫೩೦ರಲ್ಲಿ ಬ್ರೆಜಿಲ್ ಪೋರ್ಚುಗೀಸರ ವಸಾಹತುಶಾಹಿಯಾಗಿ ೫೪೦ ಭಾಷೆಗಳನ್ನು ನುಂಗಿ ನೀರು ಕುಡಿದಿದೆ.

ಭಾಷೆ ಜೊತೆ ರಾಷ್ಟ್ರ ಗುರುತಿಸುವ ಪ್ರವೃತ್ತಿಯಿಂದ ಭಾಷೆಗೆ ಮೌಲ್ಯ ಬಂದಿದೆ. ರಾಷ್ಟ್ರಭಾಷೆ ಮಿಂಚತೊಡಗಿದರೆ, ರಾಜಕೀಯ ಕೃಪೆ ಇಲ್ಲದ ಭಾಷೆಗಳು ಸೊರಗುತ್ತವೆ. ಶಿಕ್ಷಣ, ಮಾಧ್ಯಮ, ಸರ್ಕಾರಗಳು ಕೂಡಾ ಹಲವು ಭಾಷೆಗಳ ವಿನಾಶಕ್ಕೆ ಕಾರಣವಾಗಿವೆ. ಕೈಗಾರಿಕೀಕರಣ ಮತ್ತು ವಿಜ್ಞಾನ-ತಂತ್ರಜ್ಞಾನದ ಬೆಳವಣಿಗೆ ಕೂಡಾ ಭಾಷೆಗೆ ತೊಡಕಾಗಿದ್ದು, ಮೌಖಿಕ ಭಾಷೆಗಳು ಧ್ವನಿ ಕಳೆದುಕೊಂಡಿವೆ. ಆರ್ಥಿಕ ಉದಾರೀಕರಣ, ಹಣಕಾಸು ಮಾರುಕಟ್ಟೆಯ ಜಾಗತೀಕರಣ, ವಿದ್ಯುನ್ಮಾನ ಮಾಧ್ಯಮಗಳ ವ್ಯಾಪಕತೆಯಿಂದ ಸಣ್ಣ ಭಾಷೆಗಳು ಅಳಿವಿನಂಚಿಗೆ ಸರಿದಿವೆ.

ಅತ್ಯಧಿಕ ಭಾಷೆಗಳನ್ನು ತನ್ನ ಮಡಿಲಲ್ಲಿ ತುಂಬಿಕೊಂಡಿರುವ ನಾಡು ಯಾವುದು ಎಂದು ಕೇಳಿದರೆ ನಿಸ್ಸಂಶಯವಾಗಿ ಭಾರತ ಎನ್ನಬಹುದು. ಭಾರತ ದಲ್ಲಿರುವ ಮಾತೃಭಾಷೆಗಳು ೧೬೫೨ ಎಂದು ನಂಬಲಾಗಿದೆ. ಒಂದು ಲಕ್ಷಕ್ಕಿಂತ ಹೆಚ್ಚು ಜನರು ಮಾತನಾಡುವ ಭಾಷೆಗಳು ಕೇವಲ ೩೩. ಈಗ ಬಳಕೆಯಲ್ಲಿರುವ ಭಾರತೀಯ ಭಾಷೆಗಳು ಹೆಚ್ಚು ಕಡಿಮೆ ಇತಿಹಾಸದ ಉಗಮಕಾಲದಿಂದಲೂ ಭಾರತಕ್ಕೆ ಬಂದ ವಿವಿಧ ಜನಾಂಗೀಯ ಮೂಲಗಳ ವಿವಿಧ ಭಾಷಾ ವರ್ಗಗಳಿಂದ ವಿಕಾಸಗೊಂಡಿವೆ. ಶತಶತಮಾನಗಳಿಂದಲೂ ಪರಸ್ಪರ ವರ್ತಿಸುತ್ತಾ ಬಂದ ಈ ಭಾಷೆಗಳು ಆಧುನಿಕ ಭಾರತದ ಪ್ರಮುಖ ಭಾಷಾ ಪ್ರವರ್ಗಗಳನ್ನು ರಚಿಸಿವೆ. ಮುಖ್ಯ ಭಾಷಾ ವರ್ಗಗಳಾದ ಆರ್ಯನ್ ಮತ್ತು ದ್ರಾವಿಡಿಯನ್ ಪರಸ್ಪರ ಅನುವರ್ತಿಸುವವಲ್ಲದೆ ಆಸ್ಟ್ರಿಕ್ ಮತ್ತು ಸಿನೋ-ಟಿಬೆಟಿಯನ್ ಭಾಷೆಗಳಿಂದ ಪ್ರಭಾವಿತಗೊಂಡಿವೆ.

ಭಾರತವು ಒಂದೇ ಭಾಷೆಯನ್ನು ಎಂದೂ ಸಾಮಾನ್ಯ ಭಾಷೆಯನ್ನಾಗಿ ಹೊಂದಿಲ್ಲ. ಪ್ರಾಚೀನ ಕಾಲದಲ್ಲಿ ಸಂಸ್ಕೃತ ಸಾಮಾನ್ಯ ಮಾಧ್ಯಮವಾಗಿತ್ತು. ಆದರೆ ಅದು ಜನಸಾಮಾನ್ಯರ ಭಾಷೆಯಾಗಿರಲಿಲ್ಲ. ಅಂದು ದೇವಭಾಷೆ ಎಂದು ಪೂಜಿಸಿ, ಪೋಷಿಸಲ್ಪಟ್ಟ ಸಂಸ್ಕೃತ ಇಂದು ಬಹುಮಟ್ಟಿಗೆ ಗ್ರಂಥಸ್ಥ ಭಾಷೆಯಾಗಿದೆ. ಸಂಸ್ಕೃತ ಮಾತನಾಡುವವರ ಸಂಖ್ಯೆ ಇಡೀ ದೇಶದಲ್ಲಿ ಕೇವಲ ಏಳು ಸಾವಿರ ಮಾತ್ರ. ಅದರಲ್ಲಿ ಹೆಚ್ಚಿನವರು ಬಿಹಾರದಲ್ಲಿದ್ದರೆ, ನಂತರದ ಸ್ಥಾನ ಉತ್ತರಪ್ರದೇಶದ್ದು.

ಶತಮಾನಗಳ ಕಾಲದ ಮೌಖಿಕ ಮತ್ತು ಲಿಖಿತ ಸಾಹಿತ್ಯ ಸಂಪತ್ತನ್ನು ಹೊಂದಿರುವ ನಮ್ಮ ಅನೇಕ ಭಾಷೆಗಳು ಇಂದು ಸಾಯುವ ಸ್ಥಿತಿಯಲ್ಲಿವೆ. ಇಂದು ಅನೇಕ ಪ್ರಾಚೀನ ಭಾಷೆಗಳು ಹೇಳಹೆಸರಿಲ್ಲದಂತಾಗಿವೆ. ಹಲವು ಭಾಷೆಗಳನ್ನು ಹೊಂದಿದ್ದ ಭಾರತದಲ್ಲಿ ಇಂದು ಭಾಷೆಗಳ ಸಂಖ್ಯೆ ಕಡಿಮೆಯಾಗುತ್ತಿರುವುದಲ್ಲದೆ, ಇದ್ದ ಭಾಷೆಗಳಲ್ಲಿ ಮಾತನಾಡುವವರ ಸಂಖ್ಯೆ ಕೂಡಾ ಕಡಿಮೆಯಾಗಿದೆ. ಬಹುಭಾಷಾ ದೇಶ ಭಾರತವನ್ನು ನಿಯಂತ್ರಿಸುವುದು ಬ್ರಿಟಿಷರಿಗೆ ಸುಲಭದ ಕೆಲಸವಾಗಿರಲಿಲ್ಲ. ಅದಕ್ಕಾಗಿ ಅವರು ದೇಶದಲ್ಲಿ ಇಂಗ್ಲಿಷ್ ಭಾಷೆಯನ್ನು ಹೇರಿದರು. ತಮ್ಮ ಉಪಯೋಗಕ್ಕಾಗಿ ಇಂಗ್ಲಿಷ್ ಪಠ್ಯಕ್ರಮವನ್ನು ಜಾರಿಗೆ ತಂದರೆ, ಭಾರತವನ್ನು ಬಿಟ್ಟು ಅರ್ಧ ಶತಮಾನ ಕಳೆದರೂ ಅವರು ಹಾಕಿಕೊಟ್ಟ ಹೆಜ್ಜೆಯನ್ನು ಮುರಿಯಲು ನಮ್ಮಿಂದ ಸಾಧ್ಯವಾಗಲಿಲ್ಲ. ಅದೇ ಮಹಾಪ್ರಸಾದವೆಂದು ಸ್ವೀಕರಿಸಿದ್ದರಿಂದ, ನಮ್ಮ ಗುಂಡಿಯನ್ನು ನಾವೇ ತೋಡಿದಂತಾಗಿದೆ.

ಇಂಗ್ಲಿಷ್ ಭಾಷೆ, ಮುಖ್ಯವಾಗಿ ಅಮೇರಿಕನ್ ಇಂಗ್ಲಿಷ್ ಕಂಪ್ಯೂಟರ್ ಮತ್ತು ಇಂಟರ್‌ನೆಟ್‌ಗಳ ಮುಖ್ಯ ಭಾಷೆಯಾಗಿದ್ದು, ವಿಶ್ವ ಸಂವಹನದ ವಾಹಕವಾಗಿ ನಾವು ಅದನ್ನು ಸ್ವೀಕರಿಸಿದ್ದೇವೆ. ಇದು ಒಮ್ಮೆಲೇ ಅಲ್ಲದಿದ್ದರೂ ನಿಧಾನವಾಗಿಯಾದರೂ ನಮ್ಮ ಭಾಷೆಗಳಿಗೆ ಸ್ಥಳವಿಲ್ಲದಂತೆ ಮಾಡಿ, ಅಪ್ರಸ್ತುತವಾಗಿಸುತ್ತದೆ. ವಿಶ್ವಕೋಶಗಳು ಮತ್ತು ವಿಶ್ವ ಸಾಹಿತ್ಯದ ಸಂಗ್ರಹಗಳು ನಮ್ಮ ದೇಶೀಯ ಭಾಷೆಗಳಲ್ಲಿ ತುಂಬಾ ವಿರಳವಾಗಿದ್ದು, ಇಂಗ್ಲಿಷ್ ಭಾಷೆಯಲ್ಲಿ ಮಾತ್ರ ಕಂಡುಬರುತ್ತವೆ. ಅಲ್ಲದೆ ಆಗಾಗ ಚರ್ಚೆಗೆತ್ತಿಕೊಳ್ಳಲಾಗುತ್ತದೆ.

ಇಂಗ್ಲಿಷ್ ಮಾಧ್ಯಮ ಶಾಲೆಗಳು ಇಂದು ಅನಿವಾರ್ಯವಾಗಿವೆ. ನಗರದ ಮಧ್ಯಮ ವರ್ಗದ ಜನತೆ ಇಂಗ್ಲಿಷ್ ಭಾಷೆಯನ್ನು ಅಧಿಕಾರದ ಭಾಷೆಯಾಗಿ ಪರಿಗಣಿಸಿದ್ದು, ಅದರಲ್ಲಿ ಶಿಕ್ಷಣ ನೀಡಿದರೆ ಮಾತ್ರ ತಮ್ಮ ಮಕ್ಕಳು ಪ್ರಗತಿ ಸಾಧಿಸಬಹುದು ಎಂಬ ಭ್ರಮೆಯಲ್ಲಿದ್ದಾರೆ. ಇದರಿಂದ ಉರ್ದು, ಸಿಂಹಳ, ಸಿಂಧಿ, ಪಂಜಾಬಿ, ನೇಪಾಳಿ, ತಮಿಳು, ಬೆಂಗಾಳಿ, ರಾಜಸ್ಥಾನಿ ಮತ್ತಿತರ ದಕ್ಷಿಣ ಏಷ್ಯಾ ಭಾಷೆಗಳ ಬರಹಗಾರರು ತಮ್ಮ ಅಸ್ತಿತ್ವಕ್ಕಾಗಿ ಪರದಾಡುತ್ತಿದ್ದಾರೆ. ಆದ್ದರಿಂದ ನಮ್ಮ ವಿಚಾರ, ಆಲೋಚನೆ ಮತ್ತು ಸಂಸ್ಕೃತಿಗಳ ಮರೆಯುವಿಕೆಗೆ ಕಾರಣ ಹುಡುಕಿ, ಅವು ಪೂರ್ಣ ಅಳಿಯುವ ಮೊದಲು ಮರುಜೀವ ನೀಡುವ ಕಾರ್ಯ ದಕ್ಷಿಣ ಏಷ್ಯಾ ವಿಜ್ಞಾನಿಗಳು ಮತ್ತು ಶಿಕ್ಷಣ ತಜ್ಞರಿಂದ ಆಗಬೇಕಾಗಿದೆ.

ಬಹುಭಾಷೆ ಎಂದರೆ ಬಹುಸಂಸ್ಕೃತಿ. ಭಾಷೆಯ ಸಾವು ಸಂಸ್ಕೃತಿಯ ಸಾವು. ಭಾಷೆ ಕೇವಲ ಸಂಪರ್ಕ ಸಾಧನವಲ್ಲ. ಮಾತನಾಡುವ ಜನರ ಲೋಕದೃಷ್ಟಿ, ಚಿಂತನೆ, ನಂಬಿಕೆ, ಆಚರಣೆ, ಜೀವನ ವಿಧಾನ ಹಾಗೂ ಅಭಿವ್ಯಕ್ತಿ ಕ್ರಮ ಎಲ್ಲವನ್ನು ಪ್ರತಿನಿಧಿಸುತ್ತದೆ. ಆದ್ದರಿಂದ ಭಾಷೆಯೊಂದರ ಕಣ್ಮರೆ ಎಂದರೆ ಇಂಥ ವೈವಿಧ್ಯತೆಯ ಕಣ್ಮರೆ. ಮಾನವ ಹಕ್ಕುಗಳ ಜಾಗತಿಕ ಘೋಷಣೆಯಲ್ಲಿ ಭಾಷೆಯನ್ನು ಮೂಲಭೂತ ಹಕ್ಕು ಎಂದು ಪರಿಗಣಿಸಿ, ವಿಶ್ವದಾದ್ಯಂತ ಅಳಿವಿನಂಚಿನ ಭಾಷೆಗಳನ್ನು ಕಾಪಾಡಲು ಅನೇಕ ಸಂಸ್ಥೆಗಳು ಮತ್ತು ವಿಶ್ವವಿದ್ಯಾಲಯಗಳು ಕಾರ್ಯನಿರತವಾಗಿವೆ. ಆದರೆ ಆಧುನಿಕತೆ ಮತ್ತು ಇಂಗ್ಲಿಷ್ ದೈತ್ಯನ ಮುಂದೆ ಯಾವುದೇ ಆಟ ನಡೆಯುತ್ತಿಲ್ಲ. ಇನ್ನಾದರೂ ನಾವು ನಮ್ಮ ಸಂಸ್ಕೃತಿ, ಭಾಷೆಯನ್ನು ರಕ್ಷಿಸುವತ್ತ ಕಟಿಬದ್ಧರಾಗೋಣ. ಕನ್ನಡ ಉಳಿಸಬೇಕೆನ್ನುವವರು ಇದರತ್ತ ಗಮನ ಹರಿಸಬೇಕಾಗಿದೆ.

ಸತೀಶ್‌ಕುಮಾರ್ ಅಂಡಿಂಜೆ
ಪತ್ರಿಕೋದ್ಯಮ ಉಪನ್ಯಾಸಕರು, ಎಂ.ಜಿ.ಎಂ. ಕಾಲೇಜು, ವಿದ್ಯಾನಗರ, ಮಣಿಪಾಲ - ೫೭೬ ೧೦೪

# ಕಂಬಾರರ ಮಹಾಮಾಯೆ

ಡಾ|| ವೀರೇಶ ಬಡಿಗೇರ

ಕಂಬಾರರ ಒಟ್ಟು ಸಾಹಿತ್ಯವನ್ನು ಅವಲೋಕಿಸಿ ಹೊರಬಂದಾಗ ಎರಡು ಪ್ರಶ್ನೆಗಳು ಹಾಗೇ ಉಳಿಯುತ್ತವೆ : ಯುವಕರಿಗೆ ಬದುಕು ನೀಡದಿರುವುದು ಮತ್ತು ತಾಯಿ ಕರಿಮಾಯಿಯ ರಕ್ಷಾಕವಚದಿಂದ ಹೊರಬರದಿರುವುದು. 'ಸಿಂಗಾರೆವ್ವ ಮತ್ತು ಅರಮನೆ' ಕಾದಂಬರಿಯಲ್ಲಾಗಲಿ, 'ಹೇಳತೇನ ಕೇಳ' ಲಾವಣಿಯಲ್ಲಾಗಲಿ, 'ಋಷ್ಯಶೃಂಗ' ದಂತಹ ನಾಟಕದಲ್ಲಾಗಲಿ, ಇತ್ತೀಚಿನ 'ಚಕೋರಿ' ಮಹಾಕಾವ್ಯದಲ್ಲಾಗಲಿ ಈ ಎರಡು ಸಂಗತಿಗಳು ಪ್ರಧಾನವಾಗಿ ಕಾಣುತ್ತವೆ. ಸ್ಥಳೀಯ ಸಂಸ್ಕೃತಿಯ ನಿಷ್ಕ್ರಿಯತೆ, ನಿಷ್ಕ್ರಿಯತೆಯಲ್ಲೂ ಕ್ರಿಯಾತ್ಮಕವಾಗಿ ವ್ಯವಹರಿಸುವ, ಕ್ರಿಯಾತ್ಮಕವಾಗಿದ್ದರೂ ಉಪಯೋಗಕ್ಕೆ ಬಾರದ ನಿರ್ವೀರ್ಯತೆ. ಈ ನಿರ್ವೀರ್ಯತೆ ಫಲಿತಗಳಾಗಿ ಹುಟ್ಟುವ ಬಾಳಗೊಂಡ, ಶಿವನಿಂಗ, ರವಿಚಂದ್ರರಂತಹ ಪಾತ್ರಗಳು ಹುಟ್ಟುತ್ತಲೇ ಬದುಕನ್ನು ಕಳೆದುಕೊಂಡುಬಿಡುತ್ತವೆ. ಅಂದರೆ ಇವರ ಹುಟ್ಟಿನೊಂದಿಗೆ ಕೃತಿಗಳು ಅಂತ್ಯಗೊಳ್ಳುತ್ತವೆ. ಒಂದು ವೇಳೆ ಕೃತಿಯ ಒಳಗಡೆ ಬಂದಿದ್ದರೂ ಇಂಥ ಪಾತ್ರಗಳು ಅಸ್ತಿತ್ವಹೀನವಾಗಿ ಇರುತ್ತವೆ. ಗೌಡನೆಂದರೆ ಊರಿಗೆ ದೇವರು, ಅವನಾಗಲೀ ಅವನ ಸಂತಾನಗಳಾಗಲೀ ಸಮೃದ್ಧಿಯ ಪ್ರತೀಕಗಳು. ಆದರೆ ಕಾಲ ಅವರನ್ನು ಅಜಾಗೃತರನ್ನಾಗಿಸಿದೆ. ಗೌಡನ ಮಗ ಊರಲ್ಲಿ ಕಾಲಿಟ್ಟರೆ (ಹೇಳತೇನ ಕೇಳ) ಮಳೆಯಾಗುವುದಿಲ್ಲ, ಕಾರಣ ಇವರು ದುರಂತ ತರುಣರಾಗಿ ಅಸ್ತಿತ್ವಹೀನರಾಗಿ ಉಳಿಯುತ್ತಾರೆ. ನಿಷ್ಕ್ರಿಯ ಯಜಮಾನ ಸಂಸ್ಕೃತಿಯ ಪಳೆಯುಳಿಕೆಗಳಾದ ಬಾಳಗೊಂಡ, ಶಿವನಿಂಗ, ಇವರಿಗೆ ನಿರ್ವೀರ್ಯತೆ ಮತ್ತು ಮಸ್ತಾದ ಮೈಕಟ್ಟು ಒಂದೇ ಬಂಡವಾಳ. ಆದರೆ ಮಾರನಂತಹ ಆಳಿನಿಂದ ಸಿಂಗಾರೆವ್ವನ ಹೊಟ್ಟೆಯಲ್ಲಿ ಹುಟ್ಟುವ ರವಿಚಂದ್ರ ಆಧುನಿಕ ಶಿಕ್ಷಣ ಪಡೆದರೂ ಗೌಡಿಕೆಯ ವಾರಸುದಾರಿಕೆಯ ಗತ್ತನ್ನು ಕಳೆದುಕೊಂಡ ಸಾಮಾನ್ಯ ಯುವಕ. ಹೀಗೆ ತರುಣ ಪೀಳಿಗೆಯವರು ಹೊಸ ಜೀವನದತ್ತ ಆಕರ್ಷಿತರಾದರೂ ಅದರೊಂದಿಗೆ ತಾದಾತ್ಮ್ಯತೆಯನ್ನು ಸಾಧಿಸದೆ ಉಳಿದುಬಿಡುತ್ತಾರೆ. ಕಂಬಾರರು ಪಾರಂಪರಿಕ ಬದುಕಿನಲ್ಲೂ ಕೆಳವರ್ಗಗಳ ಸೃಷ್ಟಿಶೀಲತೆಗೆ ಒತ್ತುಕೊಡುತ್ತಾರೆ. ಆಧುನಿಕತೆಯ ಶುಷ್ಕ ಮತ್ತು ನಿರುಪಯುಕ್ತ ನೆಲೆಗಳನ್ನು ಸೂಚಿಸುವುದರ ಜೊತೆಗೆ ಪರಂಪರೆಯ ಬರಡು ನೆಲೆಗಳನ್ನು ಚರ್ಚಿಸುತ್ತಾರೆ. ಇವೆರಡೂ ಸ್ಥಿತಿಗಳನ್ನು ಮೀರಿದ ಸಮೃದ್ಧ ಮತ್ತು ಹೊಸ ಆವಿಷ್ಕಾರವನ್ನುಳ್ಳ ಬದುಕಿಗಾಗಿ ಹಂಬಲಿಸುವುದು ಕಂಬಾರರಲ್ಲಿ ಎದ್ದು ಕಾಣುತ್ತದೆ.

ಹಾಗೆ ತಾಯಿ ಕರಿಮಾಯಿ ಕಂಬಾರರ ಸೃಷ್ಟಿಪ್ರಜ್ಞೆಯ

ಪಾದಿಯಲ್ಲಿ ನಿರ್ಮಿಸಲ್ಪಟ್ಟಿದೆ. ಇದುವರೆಗೂ ವಿಲೋಮ-ಅನುಲೋಮ, ಭ್ರಮೆ-ವಾಸ್ತವ, ಹೊಸತು-ಹಳತುಗಳ ದ್ವಂದ್ವದಲ್ಲಿಯೇ ಗಿರಿಕಿ ಹೊಡೆಯುತ್ತಿದ್ದ ಕಂಬಾರರ ವಿಚಾರಗಳು ಇದನ್ನು ಮೀರಿದ ಹೊಸತನದ ನೆಲೆಗಳತ್ತ ಸಾಗುತ್ತವೆ. ಮಹಾಮಾಯೆಯಲ್ಲಿ ಇದಕ್ಕೊಂದು ಸ್ಥಿರ ನೆಲೆದಕ್ಕಿರುವುದನ್ನು ಕಾಣುತ್ತೇವೆ. ಕಂಬಾರರ ಚಿಂತನೆಗಳ ಒಂದು ಹೊಸ ಜಿಗಿತ ಇಲ್ಲಿ ಕಂಡುಬರುತ್ತದೆ.

ಕಂಬಾರರು ಕಥೆಗಾಗಿ ಕಥೆ ಹೆಣೆಯುವವರಲ್ಲ, ಬದಲಾಗಿ ಆ ಮೂಲಕ ಗಂಭೀರವಾದ ತರ್ಕವೊಂದನ್ನು ಮಂಡಿಸುತ್ತಾರೆ. ಬದುಕಿನ ಹೌದು-ಅಲ್ಲಗಳ ವಿವಿಧ ಸೂಕ್ಷ್ಮಗಳನ್ನು ಗರ್ಭೀಕರಿಸಿಕೊಂಡಿರುವ ಈ ತರ್ಕ ಜೀವನದ ಮೀಮಾಂಸೆಯಂತಿರುತ್ತದೆ. ಹುಟ್ಟು-ಸಾವುಗಳ ನಿತ್ಯ ಆವರ್ತನದೊಳಗಣ ಅನುಭವ ಸ್ವರೂಪಗಳ ಜಿಜ್ಞಾಸೆ ಮಾಡುತ್ತಾರೆ. ಸಾವಿನ ಭಯಕ್ಕಿಂತ ಅದಿಲ್ಲದ ಬದುಕಿನಲ್ಲಿ ಕಂಬಾರರಿಗೆ ಹೆಚ್ಚು ಭಯ. ಸೃಷ್ಟಿ-ಮರುಸೃಷ್ಟಿ, ಅಜಾಗ್ರತೆ ಮತ್ತು ಸಶಕ್ತೀಕರಣ ಹೀಗೆ ಬದುಕಿನ ನಿಜ ನೆಲೆಗಳ ಏರಿಳಿತಗಳನ್ನು ಅವರ ಒಟ್ಟು ಚಿಂತನಾ ಕ್ರಮದುದ್ದಕ್ಕೂ ಕಾಣುತ್ತೇವೆ. ಕಂಬಾರರು ಅಮರತ್ವದ ಕಲ್ಪನೆಯನ್ನು ನಿರಾಕರಿಸುತ್ತಾರೆ. ಮಹಾಮಾಯೆಯಲ್ಲಿ ಸಂಜೀವಶಿವ ಹೇಳುವ ಮಾತು ತುಂಬ ಮಹತ್ವದ್ದೆನಿಸುತ್ತದೆ : ''ಅಮರನಾಗಿ ನಿನ್ನಿಂದ ದೂರವಾಗುವುದಕ್ಕಿಂತ ನಿನ್ನ ಮಗನಾಗಿ

ಗೌಡನ ಅಧಿಕೃತ ಸಂತಾನಗಳಲ್ಲ. ಋಷ್ಯಶೃಂಗದಲ್ಲೂ ಇದು ಸ್ಪಷ್ಟವಾಗುತ್ತದೆ. ತಿರುತಿರುಗಿ ಮತ್ತದೇ ಅಧಿಕೃತತೆಯ ಹುಡುಕಾಟ. ಈ ಅಂಶವೇ ಕಂಬಾರರ ನಿರಂತರ ಶೋಧಕ ಪ್ರವೃತ್ತಿಯ ಅಂತರ್ಜಲ.

ಗಂಡನಲ್ಲದ ಅನ್ಯ ಪುರುಷನಿಂದ ಹುಟ್ಟುವ ರವಿಚಂದ್ರ, ಶಿವನಿಂಗ, ಬಾಳಗೊಂಡ ಮುಂತಾದವರು



ಬಹುಮುಖ್ಯ ಭಾಗ. ಅವರ ಹೆಚ್ಚಿನ ಕೃತಿಗಳು ಈ ತಾಯಿಯ ರಕ್ಷಾಕವಚದೊಳಗೇ ವಿಹರಿಸುತ್ತವೆ. ಕರಿಮಾಯಿಯಂತಹ ಕಾದಂಬರಿಯಲ್ಲಿ ಕರಿಮಾಯಿಯ ಗುಡಿಯೊಳಗೆ ನಡೆಸುವ ದುರ್ಗಿ ಮತ್ತು ಬಸವರಾಜರ ಸಂಭೋಗದ ಗುದ್ದಾಟದಲ್ಲಿ ಕರಿಮಾಯಿಯ ''ಬಲಗೈ'' (ಅಭಯಹಸ್ತ) ಮುರಿಯುತ್ತದೆ. ದೇವಿಯ ಆಭರಣಗಳು, ಅವಳ ಉತ್ಸವಮೂರ್ತಿ ಕಳುವಾದರೂ ದೇವಿ ಅಂಥವರನ್ನು ದಂಡಿಸಲಾರದೇ ಹೋಗುತ್ತಾಳೆ. ಸ್ಥಳೀಯರಿಗೆ ಪವಿತ್ರ ಸ್ಥಾನವಾದದ್ದು ವಸಾಹತುಪ್ರಣೀತ ಮನಸ್ಸುಗಳಿಗೆ ರತಿಕ್ರೀಡೆಯ ಜಾಗವಾಗುತ್ತದೆ. ಇಷ್ಟಾದರೂ ಮತ್ತೆ ತಾಯಿಯ ದಯಾಪರತೆಗಾಗಿ, ಅವಳ ಕೃಪಾಕಟಾಕ್ಷಕ್ಕಾಗಿ, ಜನ ಬಾಯಿ ಬಾಯಿ ಬಿಡುತ್ತಾರೆ.

ಕಂಬಾರರು ಇಂಥಲ್ಲಿ ಹಳತು-ಹೊಸತರ ನಿರ್ವೀರ್ಯತೆ ಮತ್ತು ಸಶಕ್ತ ನೆಲೆಗಳನ್ನು ಮುಖಾಮುಖಿಯಾಗಿಸುತ್ತಾರೆ. ನಿರ್ವೀರ್ಯತೆ ಎನ್ನುವುದು ಬರೀ ವಸಾಹತು ಬದುಕಿನಲ್ಲಿ ಮಾತ್ರ ಇರುವಂಥದಲ್ಲ, ಅದು ಸ್ಥಳೀಯ ಪರಂಪರೆಯಲ್ಲೂ ಇದೆ ಎನ್ನುವಲ್ಲಿ ಕಂಬಾರರು ಕುತೂಹಲವಾಗಿ ಕಾಣುತ್ತಾರೆ. ಕರಿಮಾಯಿ ತನ್ನ ಶಕ್ತಿಯನ್ನು ಕಳೆದುಕೊಂಡರೂ ಜನ ಅವಳನ್ನು ಉಪೇಕ್ಷಿಸದೇ ಮತ್ತೆ ಅವಳನ್ನೇ ಪೂಜಿಸುತ್ತಾರೆ, ಅವಳ ನೆರಳಲ್ಲೇ ಬದುಕುತ್ತಾರೆ ಎನ್ನುವುದು ವಿಚಿತ್ರವಾದರೂ ಸತ್ಯವಾದ ವಿಚಾರವಾಗಿದೆ.

ಮಹಾಮಾಯೆ ನಾಟಕವು ಈ ಪ್ರಶ್ನೆಗಳಿಗೆ ಉತ್ತರೋ

**ಕಂಬಾರರು ಕಥೆಗಾಗಿ ಕಥೆ ಹೆಣೆಯುವವರಲ್ಲ, ಬದಲಾಗಿ ಆ ಮೂಲಕ ಗಂಭೀರವಾದ ತರ್ಕವೊಂದನ್ನು ಮಂಡಿಸುತ್ತಾರೆ. ಬದುಕಿನ ಹೌದು-ಅಲ್ಲಗಳ ವಿವಿಧ ಸೂಕ್ಷ್ಮಗಳನ್ನು ಗರ್ಭೀಕರಿಸಿ ಕೊಂಡಿರುವ ಈ ತರ್ಕ ಜೀವನದ ಮೀಮಾಂಸೆಯಂತಿರುತ್ತದೆ. ಹುಟ್ಟು-ಸಾವುಗಳ ನಿತ್ಯ ಆವರ್ತನದೊಳಗಣ ಅನುಭವ ಸ್ವರೂಪಗಳ ಜಿಜ್ಞಾಸೆ ಮಾಡುತ್ತಾರೆ. ಸಾವಿನ ಭಯಕ್ಕಿಂತ ಅದಿಲ್ಲದ ಬದುಕಿಗೆ ಕಂಬಾರರಿಗೆ ಹೆಚ್ಚು ಭಯ. ಸೃಷ್ಟಿ-ಮರುಸೃಷ್ಟಿ, ಅಜಾಗ್ರತೆ ಮತ್ತು ಸಶಕ್ತೀಕರಣ ಹೀಗೆ ಬದುಕಿನ ನಿಜ ನೆಲೆಗಳ ಏರಿಳಿತಗಳನ್ನು ಅವರ ಒಟ್ಟು ಚಿಂತನಾ ಕ್ರಮದುದ್ದಕ್ಕೂ ಕಾಣುತ್ತೇವೆ.**

**ಇಂದಿನ ಜಾಗತೀಕರಣದ ಹಲವು ಮಾದರಿಗಳು ಸ್ಥಳೀಯ ಭಾಷೆ, ಸಂಸ್ಕೃತಿ, ಸಮುದಾಯಗಳ ಮುಂದೆ ಅಸ್ತಿತ್ವದ ಪ್ರಶ್ನೆಯನ್ನು ಮಂಡಿಸುತ್ತಿರುವಾಗ ಅಳಿದುಳಿದ ಆಕರಗಳಿಂದ ದೇಸೀ ಸಂವೇದನೆಗಳಿಗೆ ಒಂದು ಸ್ಮೃತಿಯನ್ನು ತಂದುಕೊಡುವ ಮೂಲಕ ಅದರ ಸ್ವಶಕ್ತಿ ಮತ್ತು ಸ್ವಪ್ರಜ್ಞೆಯ ಬಗ್ಗೆ ಅಗಾಧ ಎಚ್ಚರ ಮತ್ತು ಆತ್ಮವಿಶ್ವಾಸವನ್ನು ಹುರಿಗೊಳಿಸುವ ಕಂಬಾರರ ಈ ಕ್ರಮ ಮಹತ್ವದ್ದಾಗಿ ಕಾಣುತ್ತದೆ.**

ಮನುಷ್ಯನಾಗಿರೋದೆ ನನ್ನ ಸೌಭಾಗ್ಯ.'' ಈ ಮಾತಲ್ಲಿ ಪರಾಧೀನತೆಯಿಂದ ಮುಕ್ತವಾಗುವ ಸ್ವಾತಂತ್ರ್ಯವನ್ನು ಕಾಣುತ್ತೇವೆ. ಸ್ವಂತ ಅಸ್ತಿತ್ವದ ಹಂಬಲವನ್ನು ಕಾಣುತ್ತೇವೆ. ಮನುಷ್ಯ ಮತ್ತು ಪ್ರಕೃತಿ ಸಂಬಂಧಗಳೊಂದಿಗೆ ಮನುಷ್ಯನ ಮೂಲ ಮುಗ್ಧತೆ, ಕ್ಷುದ್ರತೆ ಹಾಗೂ ಆತನೇ ನಿರ್ಮಿಸಿದ ಸಾಂಸ್ಥಿಕ ಮೌಲ್ಯಗಳ ಮುಖಾಮುಖಿಯನ್ನು ಮುಗುಳುದಿಂದ ಮಹಾಮಾಯೆ ಯವರೆಗಿನ ಕೃತಿಗಳಲ್ಲಿ ಕಾಣುತ್ತೇವೆ. ಸಾವು-ಬದುಕು, ಸುಖ-ದುಃಖಿ, ಸ್ವಂತ-ಪರ, ತಾಯಿ-ಮಗ ಈ ಸಂಗತಿಗಳು ಸಂಘರ್ಷದ ಮೂಲಕ ತಮ್ಮ ಶಕ್ತಿಯ ಸತ್ವ ಪರೀಕ್ಷೆಯನ್ನು ತಾವೇ ಮಾಡಿಕೊಳ್ಳುತ್ತವೆ. ಈ ಸಂಘರ್ಷ ಮತ್ತು ಹುಡುಕಾಟ ಬರೀ ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ತರದ್ದಲ್ಲ. ಅದೊಂದು ಮೂಲಭೂತವಾದ ಆಧ್ಯಾತ್ಮಿಕ ಮನಸ್ಸಿನ ಮನುಷ್ಯನ ಹುಡುಕಾಟವಾಗಿದೆ. ಹೀಗಾಗಿ ಮನುಷ್ಯನ ಅಂತರಂಗದ ಹಸಿವಿಗೆ ಪೂರ್ವವೂ ಸಿದ್ಧ ಉತ್ತರವಲ್ಲ, ಪಶ್ಚಿಮವೂ ಸಿದ್ಧ ಉತ್ತರವಲ್ಲ. ಇವೆರಡರ ಮುಖವಾಡ ಕಳಚಿದ ಮನುಷ್ಯತ್ವದ ನಿರಾಲಂಬ ಮುಗ್ಧ ಸ್ಥಿತಿಯ ಬಗ್ಗೆ ಕಂಬಾರರು ಗಂಭೀರವಾಗಿ ಚಿಂತಿಸುತ್ತಾರೆ. ಸಾಮಾಜಿಕ-ಆರ್ಥಿಕವಾದ ಲೌಕಿಕ ವಿಂಗಡಣೆಗಳನ್ನು ಮೀರಿದ ಸ್ಥಿತಿಗಾಗಿ ಕಂಬಾರರು ಹಾತೊರೆಯುತ್ತಾರೆ. ಮಹಾಮಾಯೆಯಲ್ಲಿ ಇಂತಹ ಮೀರುವ ಮತ್ತು ಮುರಿದು ಕಟ್ಟಿಕೊಳ್ಳುವ ಪ್ರಕ್ರಿಯೆ ದಟ್ಟವಾಗಿ ಕಾಣುತ್ತದೆ.

ಸಂಜೀವಶಿವ ತಾಯಿಯ ಆಜ್ಞೆಯನ್ನು ಮೀರಿ ರಾಜಕುಮಾರಿಯನ್ನು ಬದುಕಿಸುವ ಪರಿಯೆ ಆತನ ಅಸ್ತಿತ್ವದ ನೆಲೆಗೊಳ್ಳುವಿಕೆಯನ್ನು ತೋರಿಸುತ್ತದೆ. ಹೆಚ್ಚಿನ ಸಂದರ್ಭಗಳಲ್ಲಿ ತಾಯಿಯ ಅನುಗ್ರಹದಲ್ಲೇ ಗಿರಿಕಿ ಹೊಡೆಯುತ್ತಿದ್ದ ಪಾತ್ರಗಳು ತಾಯಿಯೊಂದಿಗೆ ಸಾತ್ವಿಕ ಸಂಘರ್ಷಕ್ಕಿಳಿದು ತಾಯಿಯನ್ನು ಮೀರಿ ನಿಲ್ಲುತ್ತವೆ. ಕಂಬಾರರು ಇದುವರೆಗೂ ಶೋಧಿಸಲು ಹಂಬಲಿಸುತ್ತಿದ್ದ ಸತ್ಯದ ಸಾಕ್ಷಾತ್ಕಾರ ಇದು ಎಂದು ಅನಿಸುತ್ತದೆ.

ಮಹಾಮಾಯೆ ನಾಟಕ ವಿಶಿಷ್ಟವೆನಿಸುವುದು ಎರಡು ನಿಟ್ಟಿನಲ್ಲಿ. ಒಂದು ಇದುವರೆಗಿನ ಕಂಬಾರರ ಕಥನ ನೆಲೆಗಳಲ್ಲಿ ಸಂಕೀರ್ಣ ವ್ಯಕ್ತಿತ್ವದ ನಿರ್ವೀರ್ಯ ಸ್ಥಿತಿಯ ಅಸ್ತಿತ್ವ ರಹಿತ ಸಂವೇದನೆಗಳಾಗಿ ಮೈ ಪಡೆದುಕೊಂಡಿದ್ದ ಯುವ ಪಾತ್ರಗಳು ಮಹಾಮಾಯೆಯಲ್ಲಿ ಬದುಕುವ ಛಲವನ್ನು ತೋರುತ್ತವೆ. ಹೋರಾಟಕ್ಕೆ ತೆರೆದುಕೊಳ್ಳುತ್ತವೆ. ತನ್ನ ಐಡೆಂಟಿಟಿಯನ್ನು ಸ್ಥಾಪಿಸಿಕೊಳ್ಳುತ್ತವೆ. ಎರಡನೇ ಸಂಗತಿ ಎಂದರೆ ಇದುವರೆಗೂ ತಾಯಿಯ ಅಧೀನದಲ್ಲಿದ್ದ ಬದುಕು (ಹೇಳತೇನ ಕೇಳದಿಂದ ಹಿಡಿದು ಚಕೋರಿಯ ತನಕ) ಪ್ರಥಮಬಾರಿಗೆ ಎನ್ನುವಂತೆ ಅದನ್ನು ಮೀರಿ ತನ್ನ ಅಧಿಕೃತತೆಯನ್ನು ಸಿಂಧುವಾಗಿಸಲು ತುದಿಗಾಲ ಮೇಲೆ ನಿಂತಿರುವುದು. ಅದಕ್ಕಾಗಿ ತಾಯಿಯ ಜೊತೆ ನೇರ ಸಂಘರ್ಷಕ್ಕಿಳಿಯುತ್ತದೆ. ಮತ್ತು ಯಶಸ್ಸನ್ನು ಸಾಧಿಸುತ್ತದೆ. ಹಿಂದಿನ ಕೃತಿಗಳಲ್ಲಿನ ಪಾತ್ರಗಳು ವಸಾಹತುಶಾಹಿ ಮತ್ತು ಊಳಿಗಮಾನ್ಯಶಾಹಿ ವಿರುದ್ಧ ಸಂಘರ್ಷಕ್ಕಿಳಿಯುವುದನ್ನು ಕಾಣುತ್ತೇವೆ. ಅಂದರೆ ಅನ್ಯಾಕ್ರಮಣದ ವಿರುದ್ಧ, ಅದರ ಸ್ವಾರ್ಥಮೂಲ ಪ್ರವೃತ್ತಿಯ ವಿರುದ್ಧ ಬಂಡೇಳುತ್ತವೆ. ಸಂಜೀವಶಿವ ತಾಯಿಯ ವರ ಪಡೆದು ಅಮರನಾಗುವುದಕ್ಕಿಂತ ಮನುಷ್ಯನಾಗಿ ಸಾಯುವುದೇ ಮೇಲು ಎನ್ನುವ ತೀರ್ಮಾನಕ್ಕೆ ಬರುವಲ್ಲೇ ಆತ ನಮಗೆ ಮುಖ್ಯವಾಗುತ್ತಾನೆ. ಸಂಜೀವಶಿವನಿಗೆ ಸಾವಿನ ಭಯಕ್ಕಿಂತ ಸಾವಿಲ್ಲದ ಭಯ ಹೆಚ್ಚು ಆತಂಕಯುತವಾದದ್ದು. ಸಾವು ಹುಟ್ಟಿನ ಮೂಲ. ಹುಟ್ಟು ಸಾವಿನ ಮೂಲ. ಸಾವಿಲ್ಲದೆ ಹುಟ್ಟಿಲ್ಲ. ಸಾವು ಎನ್ನುವುದು ಬದುಕಿನ ಜಡಸ್ಥಿತಿಯನ್ನು ಕಳೆದುಹಾಕುವಂಥದ್ದು. ಮರುಸೃಷ್ಟಿಗೆ ಕಾರಣವಾಗುವಂಥದ್ದು. ಹೀಗಾಗಿ ಜಡಗೊಳ್ಳುವ ಅಮರತ್ವಕ್ಕಿಂತ ಸೃಷ್ಟಿಶೀಲಗೊಳ್ಳುವ ಸಾವು ಸಂಜೀವಶಿವನಿಗೆ ಇಷ್ಟವಾಗುತ್ತದೆ. ಹೀಗೆ ಜೀವನದ ನಿರಂತರ ಚಲನಶೀಲತೆಯ ತಾತ್ವಿಕ ಎಚ್ಚರದ ಜೊತೆಗೆ ಸಮಕಾಲೀನ ಜೀವನ ಸ್ವರೂಪ ಬದಲಾಗಬೇಕು ಎನ್ನುವ ಹಂಬಲಗಳನ್ನು ಕಂಬಾರರು ಮುಖಾಮುಖಿಯಾಗಿಸುತ್ತಾರೆ. ಸಾಮಾಜಿಕ ಸಮಸ್ಯೆಗಳ ಬಗ್ಗೆ ಬರೆಯುವಾಗ, ಸಾಂಸ್ಕೃತಿಕ ಬದಲಾವಣೆಗಳ ಬಗ್ಗೆ ಗಮನಿಸುವಾಗ, ರಾಜಕೀಯ ಚಿತ್ರಗಳನ್ನು ಚಿತ್ರಿಸುವಾಗ, ನಿರಂತರತೆಯನ್ನು ಜಡವಾಗಿ ಗ್ರಹಿಸದ ಬದಲಾವಣೆಯನ್ನು ಸರಳ ರೇಖಾತ್ಮಕವಾಗಿ ಕಾಣದ ಎಚ್ಚರಿಕೆಯನ್ನು ಕಂಬಾರರಲ್ಲಿ ಕಾಣುತ್ತೇವೆ. ಹೆಜ್ಜೆ ಮತ್ತು ವೃತ್ತ ವಿನ್ಯಾಸ ಅವರ ಬರವಣಿಗೆಯ ಮುಖ್ಯಗುಣ. ಸಂಜೀವಶಿವನ ಪ್ರಕಾರ ಸ್ವಾತಂತ್ರ್ಯವೆಂದರೆ ಮನುಷ್ಯ ಮನುಷ್ಯನಾಗೋದು. ಮನುಷ್ಯನಾಗೋದಕ್ಕೋಸ್ಕರ ತಾಯಿಯ ಮಾತನ್ನು ಮೀರಿ ಸಾವಿನಂಚಿನಲ್ಲಿರುವ ರಾಜಕುಮಾರಿಗೆ ವೈದ್ಯ ಮಾಡುತ್ತಾನೆ. ಅವಳನ್ನು ತನ್ನ ಅಂತಃಕರಣಗಳಿಂದ ಆತ್ಮವಿಶ್ವಾಸಗಳಿಂದ ಬದುಕಿಸಿಕೊಳ್ಳುತ್ತಾನೆ.

ಪರಂಪರೆಯ ಜಡ ಮತ್ತು ಅಜಾಗೃತ ನೆಲೆಗಳನ್ನು ಆಧುನಿಕತೆಯ ನಿರ್ಭಾವುಕ ಮತ್ತು ಶುಷ್ಕತೆಗಳನ್ನು ಮತ್ತು ಅದರ ಛಿದ್ರತೆಯ ನೆಲೆಗಳನ್ನು ಏಕಕಾಲಕ್ಕೆ ಮೀರಿದ ಹೊಸ ವ್ಯಕ್ತಿತ್ವ ಸಂಜೀವಶಿವನದು. ಸಂಜೀವಶಿವ ತಾಯಿಕೃಪೆಯನ್ನು ಎದುರಿಸಿ ಸ್ವತಂತ್ರವಾಗಿ ಬದುಕ ಬೇಕೆನ್ನುವ ಹಂಬಲದಲ್ಲಿಯೇ ಹರಿದುಬರುವ ವಸಾಹತು ನೆಲೆಗಳನ್ನು ಮೀರುವ ಪ್ರಜ್ಞೆಯು ಎದ್ದುಕಾಣುತ್ತದೆ. ಹಾಗೆ ಕಾಡಿನೊಳಗೆ ಭೇಟಿಯಾಗುವ ತಂದೆಯ ಭೂತ ಚಂದ್ರಶೇಖರ (ಶಿವ)ನೊಂದಿಗಿನ ಮಾತುಕತೆ ಭವಿಷ್ಯದ ನಿಚ್ಚಳ ದಾರಿಯನ್ನು ತೋರಿಸುತ್ತದೆ. ತಂದೆಯ ಗೆಲುವು ಕಾಣುವ ಸೋಲು ಮಗನ ನಿಜವಾದ ವ್ಯಕ್ತಿತ್ವ ವಿಕಸನಕ್ಕೆ ದಾರಿಯಾಗುತ್ತದೆ.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿ ಎಂದರೆ ಸಂಜೀವಶಿವನ ಈ ನಡತೆಗೆ ಆತನ ಅಧಿಕೃತ ಹುಟ್ಟೇ ಕಾರಣವಾಗಿದೆ. ಹಿಂದೆ ನೋಡಿದಂತೆ ಬಾಳಗೊಂಡ, ರಾಮಗೊಂಡ, ನಿಂಗು, ರವಿಚಂದ್ರರಂತೆ ಅನಧಿಕೃತ ಸಂತಾನ ಈತನಲ್ಲ. ಭ್ರಷ್ಟಗೊಂಡ ವ್ಯವಸ್ಥೆಯ ಫಲಿತವಾಗದ ಈತನಲ್ಲಿ ಸಹಜವಾಗಿಯೇ ಕೀಳರಿಮೆಯನ್ನು ನೀಗಿದ ಆತ್ಮವಿಶ್ವಾಸವಿದೆ. ಅವನನ್ನು ರಾಮಗೊಂಡ, ಬಾಳಗೊಂಡರಂತೆ ಅಸ್ತಿತ್ವದ ಪ್ರಶ್ನೆ ಕಾಡುವುದಿಲ್ಲ. ಕಂಬಾರರ ಚಿಂತನೆಯ ನಿರಂತರ ಸೆಲೆಯಾದ ಈ ಐಡೆಂಟಿಟಿ ಪ್ರಶ್ನೆ ಮಹಾಮಾಯೆಯಲ್ಲಿ ಸಾರ್ಥಕತೆಯನ್ನು ಪಡೆದುಕೊಂಡಿದೆ. ಕಂಬಾರರ ಈ ಶೋಧ ಆರಂಭವಾಗುವುದೇ ಸಂಸ್ಕೃತಿ ಒಳಗಿನಿಂದ ಎನ್ನುವುದು ಗಮನಾರ್ಹ.

ಇಂದಿನ ಜಾಗತೀಕರಣದ ಹಲವು ಮಾದರಿಗಳು ಸ್ಥಳೀಯ ಭಾಷೆ, ಸಂಸ್ಕೃತಿ, ಸಮುದಾಯಗಳ ಮುಂದೆ ಅಸ್ತಿತ್ವದ ಪ್ರಶ್ನೆಯನ್ನು ಮಂಡಿಸುತ್ತಿರುವಾಗ ಅಳಿದುಳಿದ ಆಕರಗಳಿಂದ ದೇಸೀ ಸಂವೇದನೆಗಳಿಗೆ ಒಂದು ಸ್ಮೃತಿಯನ್ನು ತಂದುಕೊಡುವ ಮೂಲಕ ಅದರ ಸ್ವಶಕ್ತಿ ಮತ್ತು ಸ್ವಪ್ರಜ್ಞೆಯ ಬಗ್ಗೆ ಅಗಾಧ ಎಚ್ಚರ ಮತ್ತು ಆತ್ಮವಿಶ್ವಾಸವನ್ನು ಹುರಿಗೊಳಿಸುವ ಕಂಬಾರರ ಈ ಕ್ರಮ ಮಹತ್ವದ್ದಾಗಿ ಕಾಣುತ್ತದೆ. ಯಾಕೆಂದರೆ ಆರ್ಥಿಕವಾದ, ರಾಜಕೀಯವಾದ ಕೊನೆಗೆ ಧಾರ್ಮಿಕ ಮತ್ತು ಸಾಮಾಜಿಕವಾದ ನಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಅನ್ಯಶಕ್ತಿಗಳಿಗೆ ಮೊರೆ ಹೋಗುವ ಪ್ರವೃತ್ತಿಯನ್ನು ನಾವು ಅಳವಡಿಸಿಕೊಂಡಿದ್ದೇವೆ. ಪಶ್ಚಿಮವೇ ನಮ್ಮ ಆರಂಭ ಮತ್ತು ಅಂತ್ಯದ ಕೇಂದ್ರ ಬಿಂದು. ಹೀಗಿರುವಾಗ ಕಂಬಾರರ ಒಳಗಿನಿಂದ ಬರೆವ ಕುದಿ ತುಂಬಾ ಮುಖ್ಯವೆನಿಸುತ್ತದೆ.

ಬಂಡವಾಳಶಾಹಿ ದೇಶಗಳ ವಿಕೃತ ನಕಲಾಗಿ ಸಂಕಲ್ಪ ಬಲವಿಲ್ಲದೆ ಸ್ವಂತ ಸೃಷ್ಟಿ ಸಾಧ್ಯವಾಗದ ನಿರ್ವೀರ್ಯ ಸ್ಥಿತಿಯೊಂದನ್ನು ಇಂದಿನ ಸರಕು ಸಂಸ್ಕೃತಿಯ ಬದುಕು ಪಡೆದುಕೊಳ್ಳುತ್ತಿದೆ. ಇಂಥ ಹೊತ್ತಲ್ಲಿ ಕಂಬಾರರು ತಪ್ಪಿಯು ಅನ್ಯಭಾಷೆ ಹಾಗೂ ಅದರ ಸಾಂಸ್ಕೃತಿಕ ಜಾಯಮಾನದ ಮೂಲಕ ತನ್ನದರ ಸಮರ್ಥನೆಗಿಳಿಯುವುದಿಲ್ಲ. ಹೂ ಹೂವಿನೊಳಗಡೆ ಕೈಲಾಸ ಅರಳುವಂತೆ ಸ್ಥಳೀಯ ಪರಂಪರೆಯ ಕ್ರಿಯಾಶೀಲ ನೆಲೆಗಳ ಮೂಲಕವೇ ಮುಂದಿನ ಬದುಕಿಗೆ ಬೇಕಾಗುವ ಮಾನವೀಯ ನೆಲೆಗಳನ್ನು ಪುನರ್ ಸೃಷ್ಟಿಸಿಕೊಳ್ಳುತ್ತಾರೆ. ನಿರ್ವಸಾಹತೀಕರಣ ಎನ್ನುವುದು ಕಂಬಾರರ ಸಂವೇದನೆಯಲ್ಲಿಯೇ ವಿಹಿತವಾಗಿರುವಂಥದ್ದು.

ಹಸಮಕ್ಕ ಸಲುವಾಗಿ ಗರಡೀಮನಿ ಕೆಡವಿ
ಹೊಸ ಸಾಲಿ ಕಟಿಸೋಣ ಬಲೆ ಶೋಭಾ –

ಎನ್ನುವ ಈ ಸಾಲು ಇಲ್ಲಿ ತುಂಬಾ ಮಹತ್ವದ್ದೆನಿಸುತ್ತದೆ. 'ಗರಡೀಮನಿ' ಎನ್ನುವುದು ಬದುಕಿನ ಸಮೃದ್ಧ ನೆಲೆ. ಗ್ರಾಮ ಸಂಸ್ಕೃತಿಯ ಸಶಕ್ತ ಪ್ರತೀಕ. ಸ್ವತಂತ್ರ ಮತ್ತು ಸ್ವಾಭಿಮಾನ ಸಂಸ್ಕೃತಿಯ ಉತ್ಪನ್ನದ ನೆಲೆ. ಜೈವಿಕ ಎನ್ನಬಹುದಾದ ನೆಲೆದೊಡಲಿಂದ ಅರ್ಥಪೂರ್ಣ ವ್ಯಕ್ತಿತ್ವದೊಂದಿಗೆ ಪರಂಪರೆಯ ಮುಂದುವರಿಕೆಯಾಗಿ ಗ್ರಾಮ ಬದುಕಿನ ಎಲ್ಲ ಅಂತಃಸತ್ವಗಳೊಡನೆ ಬೆಳೆಯುವ ಇಲ್ಲಿನ ವ್ಯಕ್ತಿತ್ವಗಳಿಗೆ ಸಾಂಸ್ಕೃತಿಕ ಜವಾಬ್ದಾರಿಯಿರುತ್ತದೆ. ಇಂಥ ಸಾಂಸ್ಕೃತಿಕ ಜವಾಬ್ದಾರಿಯ ಪ್ರತ್ಯುತ್ಪನ್ನವೇ ಸಂಜೀವಶಿವ. ಕರಿಮಾಯಿಯ ಕಾದಂಬರಿಯೊಳಗಿನ ಗೌಡನ ಹಿಂದಿರುವ ಕುಸ್ತಿ ಹುಡುಗರು ಊರ ಮಾನ-ಪ್ರಾಣ ಶಕ್ತಿಸಂಪನ್ನತೆಯ ಪ್ರತೀಕಗಳಾದರೆ, ವಸಾಹತುಶಾಹಿ ಪ್ರಣೀತ ತಿಳುವಳಿಕೆ ಹೊಂದಿದ ಗುಡಸೀಕರ ಮತ್ತು ಆತನ ಚತುಷ್ಪಯರು ಮುಸುರಿ, ಮೋಸ, ಸಮಯಸಾಧಕತನದಿಂದಾಗಿ ಊರಿಗೆ ಕೇಡಿನ ಸಂಕೇತಗಳಾಗಿ ಕಾಣುತ್ತಾರೆ.

ಕರಿಮಾಯಿಯಿಂದ ಮಹಾಮಾಯೆಗೆ ಬರುವ ಹೊತ್ತಿಗೆ ಕಂಬಾರರ ಚಿಂತನೆಯಲ್ಲಿ ಬಹುಮುಖ್ಯವಾದ ಬದಲಾವಣೆಯೊಂದು ನಮಗೆ ಈ ಮೂಲಕ ಕಾಣುತ್ತದೆ. ಹೇಳತೇನ ಕೇಳದಿಂದಲೇ ಆರಂಭವಾಗುವ ಅವರ ಅಧಿಕೃತತೆಯ ಹುಡುಕಾಟ ಸುಳ್ಳು-ಸತ್ಯ, ಭ್ರಮೆ-ವಾಸ್ತವ, ಸ್ವಂತ-ಪರ, ತಾಯಿ-ಮಗ, ಸಾವು-ಬದುಕು ಇಂತಹ ಸೀಳು ನೋಟಗಳ ಮೂಲಕವೇ ಹೊಸ ಹೊಸ ಅರ್ಥ ವಿಸ್ತಾರವನ್ನು ಪಡೆದುಕೊಳ್ಳುತ್ತಾ ಸಾಗುತ್ತದೆ. ಅವರ ಒಟ್ಟು ಬರಹದಲ್ಲಿ ಬಿಡಿ ಘಟಕಗಳಂತೆ ವಿವಿಧ ಬಗೆಯಲ್ಲಿ ಇದು ಚರ್ಚಿತವಾಗಿದ್ದರೂ ಸಮಗ್ರತೆಯಲ್ಲಿ ಬರಹದ ಪ್ರಕಾರದೊಳಗೆ ಹಾಗೂ ಪ್ರಕಾರಗಳ ನಡುವೆ ಒಂದು ಸಾತತ್ಯ ಸಂಬಂಧವನ್ನು ಕಲ್ಪಿಸಿಕೊಂಡಿದೆ. ಈ ಸಾತತ್ಯದಂತೆ ಕಾಣುವ ಪ್ರಪಂಚದೊಳಗಿನಿಂದಲೇ ಸಿಡಿದು ನಿಂತು ತನ್ನ ಅಸ್ತಿತ್ವೀಯ ನೆಲೆಯ ಮೀಮಾಂಸೆಗಿಳಿಯುವ ಗುಣ ಕಂಬಾರರಲ್ಲಿ ಗಟ್ಟಿಯಾಗಿ ಕಾಣುತ್ತದೆ. ಇಂಥ ಒಂದು ಸುದೀರ್ಘ ಮತ್ತು ಸಮಗ್ರ ಬದುಕಿನ ಮೀಮಾಂಸೆಯ ಫಲಿತವೇ ಮಹಾಮಾಯೆ ನಾಟಕ.

ವೀರೇಶ ಬಡಿಗೇರ
ಮುಖ್ಯಸ್ಥರು/ಪ್ರವಾಚಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

ಆತಂಕಕ್ಕೂ ಮತ್ತು ಭಯಕ್ಕೂ ವ್ಯತ್ಯಾಸವಿದೆ. ಭಯದಲ್ಲಿ ಅದರ ಮೂಲ ತಿಳಿದಿರುತ್ತದೆ (ಉದಾಹರಣೆಗೆ ಮನೆಗೆ ಬೆಂಕಿ ಬೀಳುವುದು). ಆದರೆ ಆತಂಕದ ಮೂಲ ತಿಳಿದಿರುವುದಿಲ್ಲ. ಆದರೆ ಆಳವಾಗಿ ಯೋಚಿಸಿದಾಗ ಕೆಲವು ಆತಂಕಗಳ ಮೂಲ ತಿಳಿಯುತ್ತದೆ.

ವಿಲಾಸಿನಿ ೩೮ ವಯಸ್ಸಿನ ಗೃಹಿಣಿ. ಒಂದು ಸಂಜೆ ಅಡುಗೆ ಮನೆಯಲ್ಲಿ ಕೆಲಸ ಮಾಡುತ್ತಿದ್ದಳು. ವೇಳೆ ಸುಮಾರು ಆರು ಗಂಟೆ. ಆಗ ಇದ್ದಕ್ಕಿದ್ದ ಹಾಗೆ ಈಕೆಯ ಎದೆ ಗುಂಡಿಗೆ ವೇಗವಾಗಿ ಬಡಿದುಕೊಳ್ಳಲು ಪ್ರಾರಂಭಿಸಿತು. ತಕ್ಷಣ ಕೈಕಾಲಿನಲ್ಲಿ ಅದುರುವಿಕೆ, ಅತಿ ಬೆವರು, ಬಾಯಿ - ಗಂಟಲಲ್ಲಿ ಒಣಗುವಿಕೆ, ಉಸಿರಾಡಲು ಕಷ್ಟ (ಏದುಸಿರು), ಕಣ್ಣಲ್ಲಿ ಕತ್ತಲೆ, ತಲೆ ಸುತ್ತುವಿಕೆ, ಎದೆ ನೋವು ಸಹ ಅನುಭವವಾಗಿ ಬಲಹೀನತೆಯಿಂದ ಬಳಲಿ, ಇನ್ನೇನು ತಾನು ನೆಲಕ್ಕುರುಳಬಹುದೆಂಬ ಭಯದಿಂದ ಅಡುಗೆ ಮನೆ ಬಿಟ್ಟು ಮಲಗಲೆಂದು ಬೆಡ್‌ರೂಮಿನ ಕಡೆ ಹೆಜ್ಜೆ ಹಾಕತೊಡಗಿದಳು. ಆಗ ಹೊಟ್ಟೆಯಲ್ಲಿ ಸಂಕಟವಾಗಿ ಶೌಚಾಲಯ ಹೊಕ್ಕು ಮೂತ್ರ ವಿಸರ್ಜನೆ ಮಾಡಿದಳು. ಜೊತೆಗೆ ಭೇದಿಯೂ ಆಯಿತು. ಇದರಿಂದ ಇನ್ನಷ್ಟು ಸುಸ್ತಾಗಿ ಹಾಸಿಗೆ ಮೇಲೆ ಉರುಳಿದಳು. ಆದರೆ ರೋಗದ ಲಕ್ಷಣಗಳು ಕಡಿಮೆಯಾಗದೆ ಅಧಿಕವಾಗಿ ತನ್ನ ಹೃದಯದ ಮಿಡಿತ ನಿಲ್ಲಬಹುದು, ಹೃದಯಾಘಾತವಾಗಬಹುದು, ತನ್ನ ಕಥೆ ಇನ್ನು ಮುಗಿಯಿತು ಎಂಬ ಭಯವಾಗಿ ಗಂಡ ಭೂಪತಿಯನ್ನು ಕರೆದಳು. ಈಕೆಯ ಸಹಾಯದ ಕೂಗಿಗೆ ಟೀವಿ ನೋಡುತ್ತಿದ್ದ ಭೂಪತಿ ತಕ್ಷಣ ರೂಮು ಹೊಕ್ಕು ಮಡದಿಯ ಬಿಳುಚಿದ ಮುಖ ನೋಡಿ ಗಾಬರಿಯಾದ. ವಿಲಾಸಿನಿಗೆ ಮಾತನಾಡುವುದೇ ಕಷ್ಟವಾಯಿತು. ಭಯದಿಂದ ಆಕೆಯನ್ನು ಹತ್ತಿರದಲ್ಲಿದ್ದ ಆಸ್ಪತ್ರೆಗೆ ಸಾಗಿಸಿದರು. ಆಸ್ಪತ್ರೆ ತಲುಪುವ ಮೊದಲೇ ವಿಲಾಸಿನಿ ಪೂರ್ತಿ ಸರಿಯಾದಳು. ಆದರೂ ವೈದ್ಯರು ಅವಳ ಬ್ಲಡ್ ಪ್ರೆಶರ್, ಈ.ಸೀ.ಜಿ. ಎಲ್ಲಾ ಮಾಡಿ ಎಲ್ಲಾ ಸರಿಯಾಗಿದೆ ಎಂಬ ಆಶ್ವಾಸನೆ ಕೊಟ್ಟರು. ಎಲ್ಲರಿಗೂ ಸಮಾಧಾನವಾಗಿ ಮನೆ ಸೇರಿದರು.

ಇದಾದ ಒಂದು ವಾರದ ನಂತರ ಮತ್ತೆ ಇದೇ ತೊಂದರೆ ಕಂಡುಬಂತು. ಮತ್ತೆ ಅದೇ ಆಸ್ಪತ್ರೆಗೆ ಬಂದರು. ಮತ್ತೆ ಎಲ್ಲಾ ಪರೀಕ್ಷೆಗಳಾದವು. ಮತ್ತೆ ಎಲ್ಲಾ ಸರಿಯಾಗಿದೆ ಎಂದರು ವೈದ್ಯರು. ಇದರ ನಂತರ ಒಂದು ವಾರದಲ್ಲಿ ಮತ್ತೆ ಮೂರ್‍ನಾಲ್ಕು ಬಾರಿ ಇದೇ ರೀತಿ ಯಾದಾಗ ಬೇರೆ ಆಸ್ಪತ್ರೆಯಲ್ಲಿ ತೋರಿಸಿದರು. ಕೆಲವು ವೈದ್ಯರು ಇದು ''ಗ್ಯಾಸ್''ನಿಂದ ಬಂದಿದೆ ಎಂದರು. ಕೆಲವರು ''ಗ್ಯಾಸ್ಟ್ರಿಕ್'' ಎಂದರೆ, ಮತ್ತೆ ಕೆಲವರು ''ವೀಕ್‌ನೆಸ್'' ಎಂದರು. ಹಲವಾರು ಬಗೆಯ ಔಷಧಗಳ ಉಪಯೋಗವಾಯಿತು. ಆದರೆ ತೊಂದರೆ ಮಾತ್ರ ಅದೇ ರೀತಿ ಮರುಕಳಿಸುತ್ತಿತ್ತು. ಮತ್ತಷ್ಟು ಪರೀಕ್ಷೆಗಳಾದವು. ಬಡವ ಭೂಪತಿ ಜೇಬಿನಿಂದ ಸುಮಾರು ಹದಿನೇಳು ಸಾವಿರ ಬರಿದಾಯಿತು.

ಇದೇ ಆತಂಕ !

ಈ ರೋಗದಲ್ಲಿ ಮೇಲೆ ತಿಳಿಸಿರುವ ಲಕ್ಷಣಗಳು ಕಂಡುಬರುತ್ತವೆ. ರೋಗದ ಲಕ್ಷಣ ಯಾವ ಮುನ್ಸೂಚನೆ ಇಲ್ಲದೆ, ಮಿಂಚಿನಂತೆ ಆಗಮಿಸಿ, ಯಾವ ಮುನ್ಸೂಚನೆ ಇಲ್ಲದೆ ಅದೇ ವೇಗದಲ್ಲಿ ಮಾಯವಾಗಬಹುದು. ಅಥವಾ ಹಲವು ನಿಮಿಷಗಳಿಂದ ಅರ್ಧಗಂಟೆ, ಒಂದು ಗಂಟೆ ಸಮಯ ಮುಂದುವರಿಯಬಹುದು. ತೊಂದರೆ ಅನಿರೀಕ್ಷಿತವಾಗಿ ಬರಬಹುದು ಅಥವಾ ಯಾವುದಾದರೂ ಆಘಾತವನ್ನು ನಿರೀಕ್ಷಿಸಿದಾಗ ಅಥವಾ ಅದಕ್ಕೊಳಗಾದಾಗ ಕಂಡುಬರಬಹುದು (ಹೊಡೆಯುವ ಗಂಡನ ಆಗಮನ ನಿರೀಕ್ಷಿಸಿದಾಗ ಅಥವಾ ಅಂತಹ ಗಂಡನೇ ಆಗಮಿಸಿದಾಗ). ಆದರೆ ವಿಲಾಸಿನಿಗೆ ಈ ರೀತಿ ಯಾವ ತೊಂದರೆಯೂ ಇರಲಿಲ್ಲ. ಈ ರೋಗ ವ್ಯಕ್ತಿಯಲ್ಲಿ ಅತಿಯಾದ ಭಯವನ್ನು ಮೂಡಿಸುತ್ತದೆ. ಆದರೆ ಈ ಭಯದ ಮೂಲ ವ್ಯಕ್ತಿಗೆ ಅರಿವಾಗುವುದಿಲ್ಲ. ಕೆಲವು ರೋಗಿಗಳಲ್ಲಿ ಈ ಆತಂಕ ವಾರಕ್ಕೆ ಮೂರು, ನಾಲ್ಕು ಬಾರಿ ಕಂಡುಬಂದರೆ, ಇನ್ನು ಕೆಲವು ರೋಗಿಗಳಲ್ಲಿ ದಿನದಲ್ಲಿ ಪದೇ ಪದೇ ಕಾಣಿಸಿಕೊಳ್ಳುತ್ತದೆ. ಕೆಲವರಲ್ಲಿ ಹಗಲು, ರಾತ್ರಿ ಯಾವ ಸಮಯದಲ್ಲಿ ಬೇಕಾದರೂ ಕಂಡುಬಂದರೆ, ಕೆಲವರಲ್ಲಿ ರಾತ್ರಿ ಸಮಯ ಮಾತ್ರ ಕಂಡುಬರುತ್ತದೆ. ನಿದ್ರಿಸುತ್ತಿದ್ದವರು ಆತಂಕದಿಂದ ಎಚ್ಚರವಾಗಿ ಕಷ್ಟಪಡುತ್ತಾರೆ. ಮತ್ತೆ ನಿದ್ದೆ ಬರದೇ ಇರಬಹುದು (ಇದು ಕೆಟ್ಟ ಕನಸುಗಳಿಂದ ಕಂಡುಬರುವುದಿಲ್ಲ). ಈ ರೋಗ ಕಂಡುಬರದ ಸಮಯದಲ್ಲಿ ''ಮತ್ತೆ ಈ ತೊಂದರೆ ಬರಬಹುದೇ'' ಎಂಬ ಆತಂಕದ ಆತಂಕ ಇರಬಹುದು. ಈ ಯೋಚನೆಯಿಂದಲೇ ರೋಗ ಮತ್ತೆ ಮರುಕಳಿಸಬಹುದು.

ಶೇಕಡ ೩೩ರಿಂದ ೫೦ ರೋಗಿಗಳಲ್ಲಿ ಆತಂಕದ (ಪ್ಯಾನಿಕ್) ಜೊತೆ ''ಅಗೊರಾಫೋಬಿಯ'' (agoraphobia) ಕಂಡುಬರುತ್ತದೆ. ಅಗೊರಾಫೋಬಿಯ ಗ್ರೀಕ್ ಶಬ್ದ. ಇದರ ಅರ್ಥ ''ಮಾರುಕಟ್ಟೆ ಸ್ಥಳದ ಭಯ'' ಎಂದು. ಅಂದರೆ ವ್ಯಕ್ತಿ ಬಸ್ಸು, ರೈಲು, ಸೇತುವೆ, ಸುರಂಗ ಅಥವಾ ಮನೆಯಿಂದ ದೂರ ಇದ್ದಾಗ, ಈ ಆತಂಕ ಆ ಸಮಯದಲ್ಲಿ ಬಂದರೆ ತಾನು ಈ ಸ್ಥಳದಿಂದ ವೈದ್ಯರ ಸಹಾಯದ ಸಲುವಾಗಿ ತಪ್ಪಿಸಿಕೊಂಡು ಹೋಗಲು ಕಷ್ಟವಾಗುತ್ತದೆ ಎಂದು ಭಯಪಡುತ್ತಾರೆ. ಕೆಲವರು ಉದ್ಯೋಗದಲ್ಲಿ ಮುಂದುವರಿಯಲು ಭಯಪಟ್ಟು ನೌಕರಿ ತ್ಯಜಿಸಬಹುದು. ಕೆಲವರು ಮನೆ ಬಿಟ್ಟು ಎಲ್ಲಿಗೂ ಹೋಗದೆ ''ಹೌಸ್ ಅರೆಸ್ಟ್'' ಅನುಭವಿಸುತ್ತಾರೆ. ಸಾಮಾಜಿಕ ಮತ್ತಿತರ ಚಟುವಟಿಕೆಗಳಿಂದ ದೂರವಿರುತ್ತಾರೆ. ಮತ್ತೊಬ್ಬರ ಜೊತೆ ಸಂಪರ್ಕ ಕುಗ್ಗುತ್ತದೆ. ಸಿಟ್ಟು ಸಿಡುಕು ಸಾಮಾನ್ಯ. ಇದರಿಂದ ವ್ಯಕ್ತಿಗಳ ನಡುವಣ ಸಂಬಂಧಕ್ಕೆ ತೊಂದರೆಯಾಗುತ್ತದೆ. ಸಾಮಾಜಿಕ ಜೀವನವೇ ಇಲ್ಲದಂತಾಗುತ್ತದೆ.

ಈ ರೋಗಕ್ಕೆ ತುತ್ತಾದ ವ್ಯಕ್ತಿಗಳು ಅನೇಕ ತಜ್ಞರಲ್ಲಿ ಸಹಾಯ ಯಾಚಿಸಬಹುದು.

೧. ಹೊಟ್ಟೆಯಲ್ಲಿ ಸಂಕಟ, ಭೇದಿಯಾಗುವುದರಿಂದ – ಕರುಳು ತಜ್ಞರಲ್ಲಿ.

೨. ಎದೆ ಬಡಿತ ಎದೆ ನೋವುಗಳಿಂದ – ಹೃದಯ ತಜ್ಞರಲ್ಲಿ.

೩. ಕಣ್ಣು ಕತ್ತಲಾಗುವುದರಿಂದ – ನೇತ್ರ ತಜ್ಞರಲ್ಲಿ.

೪. ತಲೆ ಸುತ್ತುವುದರಿಂದ – ನರ ತಜ್ಞರಲ್ಲಿ.

೫. ಉಸಿರಾಡಲು ಕಷ್ಟವಾಗುವುದರಿಂದ – ಶ್ವಾಸಕೋಶ ತಜ್ಞರಲ್ಲಿ.

೬. ಬಲಹೀನತೆ ಕಾರಣದಿಂದ – ಇತರೆ ತಜ್ಞರಲ್ಲಿ.

ಇವುಗಳ ಮೂಲಕ ಅನೇಕಾನೇಕ ಪರೀಕ್ಷೆಗಳಿಗೊಳಗಾಗಬಹುದು ಮತ್ತು ಸಾಕಷ್ಟು ಹಣವೂ ವೆಚ್ಚವಾಗುತ್ತದೆ. ಆದರೆ ರೋಗದ ಲಕ್ಷಣಗಳು ಅದೇ ರೀತಿ ಮುಂದುವರಿಯುತ್ತವೆ. ರೋಗ ವಾಸಿಯಾದರೆ ಸಾಕೆಂದು ಅನೇಕ ವೈದ್ಯರ ಕಚೇರಿ ಬಾಗಿಲು ತಟ್ಟಬೇಕಾಗಬಹುದು.

# ಆತಂಕ

ಡಾ|| [illegible]



ಈ ರೋಗ ಜೀವನದಲ್ಲಿ ಶೇ. ಎರಡರಿಂದ ಮೂರು ವ್ಯಕ್ತಿಗಳಲ್ಲಿ ಕಂಡುಬರುತ್ತದೆ. ಸಾಮಾನ್ಯವಾಗಿ ೨೦ರ ವಯಸ್ಸಿನಲ್ಲಿ ಮೊದಲ ಬಾರಿಗೆ ಕಾಣಿಸಿಕೊಳ್ಳುತ್ತದೆ. ಶೇ. ೫೦ರಿಂದ ೬೦ ರೋಗಿಗಳಲ್ಲಿ ಖಿನ್ನತೆ ರೋಗ ಕಂಡುಬರುತ್ತದೆ. ಕೆಲವರು ಆತ್ಮಹತ್ಯೆಗೂ ಪ್ರಯತ್ನಿಸಬಹುದು. ಆತಂಕ ಕಡಿಮೆ ಮಾಡಿಕೊಳ್ಳಲು ಕೆಲವರು ಮದ್ಯಪಾನ ಮಾಡುತ್ತಾರೆ (ಆದರೆ ಇದು ಕ್ಷಣಿಕ ಸಮಯ ಮಾತ್ರ ಸಹಾಯ ಮಾಡುತ್ತದೆ. ದಿನಗಳು ಮುಂದುವರಿದಂತೆ ಮದ್ಯಪಾನದಿಂದ ಆತಂಕ ಮತ್ತು ಖಿನ್ನತೆ ಎರಡೂ ಹೆಚ್ಚುತ್ತದೆ).

ಈ ರೋಗ ಆನುವಂಶಿಕವಾಗಿ ಬರಬಹುದು. ಸಂಸಾರದಲ್ಲಿ ಈ ರೋಗವಿದ್ದರೆ ಎಂಟುಪಟ್ಟು ಹೆಚ್ಚಾಗಿ ಕಂಡುಬರುತ್ತದೆ. ಕೆಲವು ದೈಹಿಕ ರೋಗಗಳು ಮತ್ತು ಕೆಲವು ಔಷಧಗಳು ಆತಂಕ ಬರಿಸಬಹುದು. ಜೀವನದಲ್ಲಿ ವ್ಯಕ್ತಿ ಸಹಿಸಲಾಗದ ಆಘಾತದಿಂದಲೂ ಬರಬಹುದು ಮತ್ತು ಪುರುಷರಿಗಿಂತ ಸ್ತ್ರೀಯರಲ್ಲಿ ಇದು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತದೆ. ಕೆಲವು ಮಹಿಳೆಯರಲ್ಲಿ ಋತುಚಕ್ರ ಪ್ರಾರಂಭವಾಗುವ ಮೊದಲ ೪-೫ ದಿವಸಗಳಲ್ಲಿ ಕಂಡುಬಂದು ಋತುಚಕ್ರದೊಂದಿಗೆ ನಿಲ್ಲುತ್ತದೆ.

ಮುಂದಿನ ಪುಟಕ್ಕೆ

# ಹೋಮಿಯೋಪತಿಯಲ್ಲಿ.... ಮಧುನಾಶಿನಿ ಮತ್ತು ಬಾವಂಚಿ

ಪ್ರಕೃತಿಯ ಮಡಿಲಲ್ಲಿ ಚಿತ್ರ ವಿಚಿತ್ರ ಸಸ್ಯಗಳು ಕಾಣಸಿಗುವುವು. ಅಂತಹ ವಿಚಿತ್ರ ಸಸ್ಯಗಳಲ್ಲೊಂದು – ಸಪ್ಪೆ ಸೊಪ್ಪು. ಇದರ ತಾಜಾ ಸೊಪ್ಪನ್ನು ಜಗಿದು ರಸ ನುಂಗಿದ ಮೇಲೆ ಸಕ್ಕರೆ ತಿಂದರೂ ಸಪ್ಪಗೇ ಇರುವುದು. ನಾಲಿಗೆಗೆ ಸಿಹಿ ರುಚಿ ತಿಳಿಯುವುದೇ ಇಲ್ಲ. ಬೆಲ್ಲ ತಿಂದರೂ ಅಷ್ಟೆ. ಇದನ್ನು ಸಂಸ್ಕೃತದಲ್ಲಿ "ಮಧುನಾಶಿನಿ" ಎಂಬ ಹೆಸರಿನಿಂದ ಕರೆಯುವರು. ಆದರೆ ಈ ಸಸ್ಯದ ವೈಜ್ಞಾನಿಕ ಹೆಸರು "ಜಿಮ್ನೆಮಾ ಸಿಲ್ವೆಸ್ಟ್ರೀ" ಎಂದಾಗಿರುತ್ತದೆ. ಇದೊಂದು ಬಳ್ಳಿ ಸಸ್ಯ. ಇನ್ನೊಂದು ಮರವನ್ನು ಆಶ್ರಯಿಸಿ ತಬ್ಬಿ ಬೆಳೆಯುವುದು. ಈ ಹಸಿರು ಬಳ್ಳಿಯಲ್ಲಿ ಅರಳುವ ಹೂವುಗಳು ಹಳದಿ ಬಣ್ಣಕ್ಕಿರುವುವು. ಇದರಲ್ಲಿ ಬಿಡುವ ಕಾಯಿಗಳು ಹಸಿರಾಗಿದ್ದು ಟಗರಿನ ಎರಡು ಕೊಂಬುಗಳನ್ನು ಹೋಲುವುದರಿಂದ ಈ ಬಳ್ಳಿಗೆ "ಮೇಷಶೃಂಗಿ" ಎಂಬ ಅನ್ವರ್ಥನಾಮವೂ ಉಂಟು. ಇದರ ಉಪಯೋಗವೇನು ?

**ಆಯುರ್ವೇದ**

ಆಯುರ್ವೇದ ವೈದ್ಯ ಪದ್ಧತಿಯಲ್ಲಿ ನೆರಳಲ್ಲಿ ಒಣಗಿಸಿದ ಸಪ್ಪೆ ಸೊಪ್ಪಿನ ಎಲೆಗಳೊಡನೆ ಅಷ್ಟೇ ಪ್ರಮಾಣದ ಬೇವಿನ ಬೀಜ ಮತ್ತು ನೇರಳೆ ಬೀಜಗಳನ್ನು ಮಿಶ್ರಮಾಡಿ ಚೂರ್ಣ ಮಾಡಿಟ್ಟುಕೊಂಡು ವೇಳೆಗೆ ಅರ್ಧ ಟೀ ಚಮಚೆ ಪ್ರಮಾಣದಲ್ಲಿ ದಿನಕ್ಕೆರಡು ವೇಳೆಯಂತೆ ಸೇವಿಸುತ್ತ ಬಂದರೆ ಸಕ್ಕರೆ ರೋಗವು ನಿಯಂತ್ರಣಕ್ಕೆ ಬರುವುದು. ಹಾವಿನ ವಿಷದ ಪರಿಹಾರಕ್ಕೆ ೧೦ ಗ್ರಾಂ. ತಾಜಾ ಸಪ್ಪೆ ಸೊಪ್ಪನ್ನು ನೀರಿನಲ್ಲಿ ನುಣ್ಣಗೆ ಅರೆದು ಅದನ್ನು ಶೋಧಿಸಿ ಕುಡಿಸುವುದುಂಟು.

**ಹೋಮಿಯೋಪತಿ**

ಹೋಮಿಯೋಪತಿ ವೈದ್ಯ ಪದ್ಧತಿಯಲ್ಲಿ ಪ್ರಥಮ ಬಾರಿಗೆ ಮಧುನಾಶಿನಿ ಅಥವಾ ಸಪ್ಪೆ ಸೊಪ್ಪನ್ನು ಲೆಫ್ಟಿನೆಂಟ್ ಕರ್ನಲ್ ಆರ್. ಎಸ್. ಚೋಪ್ರಾ ಎಂಬುವವರು ಮೂಲ ದ್ರವ ರೂಪದಲ್ಲಿ ಹಾಗೂ ೬ನೇ ಸತ್ವದಲ್ಲಿ ಸತ್ವಗೊಳಿಸಿ ಔಷಧಿಯಾಗಿ ಸಿದ್ಧಗೊಳಿಸಿದರು. ಈ ಔಷಧಿಯಲ್ಲಿಯ ಮುಖ್ಯ ಚಿಹ್ನೆಗಳೆಂದರೆ :

**ಮೂತ್ರ** : ಮೂತ್ರದ ಪ್ರಮಾಣ ಹೆಚ್ಚು. ಮೂತ್ರ ವಿಸರ್ಜನಾ ನಂತರ ನಿತ್ರಾಣ, ಸುಸ್ತಾಗುವುದು, ಮೂತ್ರದ ಗುರುತ್ವವು (SPECIFIC GRAVITY) ಹೆಚ್ಚಾಗಿರುವುದು. ಅಲ್ಲದೆ ಮೂತ್ರದಲ್ಲಿ ಸಕ್ಕರೆ ಕಂಡುಬರುವುದು.

**ಚರ್ಮ** : ಮೈ ಇಡೀ ಚರ್ಮ ಉರಿಯುವುದು. ಈ ಔಷಧಿಯು ಜೆನ್ನು ಘಣ ಹುಣ್ಣಿಗೂ ಉಪಯೋಗ ಬೀಳುವುದು.

**ಸತ್ವ** : ಈ ಔಷಧಿಯನ್ನು ಮೂಲ ದ್ರವದಲ್ಲಿ ವೇಳೆಗೆ ೧೦ ಹನಿಗಳಂತೆ ೩ ವೇಳೆ ಸ್ವಲ್ಪ ಕಾದಾರಿದ ನೀರಿನಲ್ಲಿ ಕದಡಿ ಕೊಡಬಹುದು. ೬ನೇ ಸತ್ವದಲ್ಲಿ ವೇಳೆಗೆ ೩ರಿಂದ ೫ ಹನಿಗಳಷ್ಟನ್ನು ಸ್ವಲ್ಪ ಕಾದಾರಿದ ನೀರಿನಲ್ಲಿ ಕಲಸಿ ಎರಡು ವೇಳೆ ಆಹಾರದ ನಂತರ ಕೊಡಬಹುದು. ಆದರೂ ಈ ಔಷಧಿಗಳನ್ನು ಸ್ವಯಂ ಬಳಸುವ ಮೊದಲು ತಜ್ಞ ಹೋಮಿಯೋ ವೈದ್ಯರ ಸಲಹೆ ಪಡೆಯುವುದು ಕ್ಷೇಮಕರ.

**ಬಾವಂಚಿ (ಸೋರೇಲಿಯ)**

ನಿಸರ್ಗದ ಮಡಿಲಲ್ಲಿ ಔಷಧೀಯ ಗುಣಗಳು ಅಡಗಿರುವ ಅನೇಕಾನೇಕ ಅತ್ಯುಪಯುಕ್ತ ಸಸ್ಯ ಸಮುದಾಯವೇ ಶೇಖರಗೊಂಡಿರುವುವು. ಅವುಗಳಲ್ಲೊಂದು ಬಾವಂಚಿ ಗಿಡ. ಈ ಗಿಡದಲ್ಲಿ ಅಡಗಿರುವ ಔಷಧೀಯ ಗುಣಗಳಾವುವು ?

**ಬಾವಂಚಿ**

ಇದೊಂದು ವಾರ್ಷಿಕ ಸಸ್ಯ. ವಿಶ್ವದ ಉಷ್ಣ ಹಾಗೂ ಸಮಶೀತೋಷ್ಣ ವಲಯಗಳಲ್ಲಿ ಇದು ವ್ಯಾಪಿಸಿದೆ. ಈ ಸಸ್ಯವು ೩೦ರಿಂದ ೬೦ ಸೆಂ.ಮೀ. ಎತ್ತರಕ್ಕೆ ಬೆಳೆಯುವ ಕವಲು ಗಿಡ. ಇದರ ಎಲೆಯ ಹೂಗೊಂಚಲು ೧೦ರಿಂದ ೩೦ ಹೂವುಗಳನ್ನು ಹೊಂದಿದ್ದು ತೊಟ್ಟು ರೋಮುಗಳಿಂದ ಕೂಡಿಕೊಂಡಿರುವುದು. ಹೂದಳಗಳು ಹಳದಿ ನೇರಳೆ ಬಣ್ಣಗಳ ಸಮ್ಮಿಶ್ರಣದಿಂದ ಕೂಡಿರುವುದು. ಈ ಗಿಡದಲ್ಲಿ ಏಕಬೀಜದ ಕಾಯಿಗಳು ಬಿಡುವುವು. ಕಾಯಿಗಳು ಸೀಳುವುದಿಲ್ಲ. ಬೀಜವು ಸಿಪ್ಪೆಯ ಒಳಗೋಡೆಗೆ ಅಂಟಿಕೊಂಡಿರುವುದು. ಈ ಬೀಜಗಳಿಂದ ಕಂದು ಬಣ್ಣದ ತೈಲವನ್ನು ತೆಗೆಯುತ್ತಾರೆ. ಇದನ್ನು ತೊನ್ನು ಚರ್ಮ ರೋಗದ ಕಲೆಗಳ ಮೇಲೆ ಬಾಹ್ಯ ಲೇಪನವಾಗಿ ಬಳಿಯುತ್ತಾರೆ. ತೊನ್ನು ಅಥವಾ ಚರ್ಮದ ಮೇಲಿನ ಬಿಳಿಯ ಇಲ್ಲವೇ ಗುಲಾಬಿ ಬಣ್ಣದ ಚಿಕ್ಕ ಅಥವಾ ದೊಡ್ಡ ಕಲೆಗಳಿಗೆ ಕಾರಣ ಚರ್ಮಕ್ಕೆ ಬಣ್ಣ ನೀಡುವ ಮೆಲನಿನ್ ಅಥವಾ ಕರ್ವಣ್ಣದ ಕೊರತೆಯಿಂದ ಇದು ಕಾಣಿಸಿಕೊಳ್ಳುತ್ತದೆ. ಇದು ಒಬ್ಬರಿಂದ ಮತ್ತೊಬ್ಬರಿಗೆ ಹರಡುವ ಅಂಟುರೋಗವಲ್ಲ. ಇದಕ್ಕೆ ಯಾವ ರೋಗಾಣುವೂ ಕಾರಣವಲ್ಲ. ಇದೊಂದು ಜನಿಕ ದೋಷ. ಇದಕ್ಕೆ ಪರಿಹಾರವಿದೆಯೇ ?

**ಹೋಮಿಯೋಪತಿ**

ಹೋಮಿಯೋಪತಿ ವೈದ್ಯ ಪದ್ಧತಿಯಲ್ಲಿ ಪ್ರಾರಂಭದ ಹಂತದಲ್ಲಿ ಇದನ್ನು ನಿವಾರಣೆ ಮಾಡಬಹುದು. ಬಲಿತ ಮೇಲಲ್ಲ. ಆಯಾ ವ್ಯಕ್ತಿಯ ಮಾನಸಿಕ ಹಾಗೂ ದೈಹಿಕ ಚಿಹ್ನೆಗಳಿಗೆ ಸರಿಹೊಂದುವ ಸೂಕ್ತ ಔಷಧಿಯನ್ನೇ ಆರಿಸಬೇಕು. ವ್ಯಾಧಿಯ ಹೆಸರಿನ ಮೇಲಿಂದ ಈ ಪದ್ಧತಿಯಲ್ಲಿ ಔಷಧಿಯನ್ನು ಕೊಡುವಂತಿಲ್ಲ. ಎಲ್ಲರಿಗೂ ಒಂದೇ ಔಷಧಿ ಉಪಯೋಗ ಬೀಳುವುದೂ ಇಲ್ಲ. ಆದರೂ ಬಹುಮಟ್ಟಿಗೆ ತೊನ್ನಿನ ಕಲೆಗಳನ್ನು ತೊಲಗಿಸಲು ಬಾವಂಚಿ ಬೀಜದ ಮೂಲದ್ರವ ಹಾಗೂ ಸತ್ವಗೊಳಿಸಿದ ಔಷಧಿಗಳು ಉಪಯೋಗ ಬೀಳುವುದೆನ್ನಬಹುದು.

**ಸೋರೇಲಿಯ**

ಬಾವಂಚಿ ಗಿಡದ ವೈಜ್ಞಾನಿಕ ಸಸ್ಯನಾಮ "ಸೋರೇಲಿಯ ಕೋರಿಲಿ ಪೋಲಿಯ" ಎಂದಾಗಿರುತ್ತದೆ. ಇದು "ಲೆಗ್ಯುಮಿನೇಸಿ" ಸಸ್ಯ ಕುಟುಂಬದ "ಪೆಪಿಲಿಯೋನೇಸಿ" ಉಪಕುಟುಂಬಕ್ಕೆ ಸೇರಿದ್ದಾಗಿರುತ್ತದೆ. ಈ ಬೀಜಗಳಲ್ಲಿ ಸೋರೇಲಿನ್ ಹಾಗೂ ಐಸೋಸೋರೇಲಿನ್ ಎಂಬೆರಡು ರಾಸಾಯನಿಕ ವಸ್ತುಗಳಿರುವುವು. ಸೋರೇಲಿಯ ಎಂಬ ಹೆಸರಿನಿಂದಲೇ ಹೋಮಿಯೋಪತಿ ವೈದ್ಯ ಪದ್ಧತಿಯಲ್ಲಿ ಔಷಧಿಯಾಗಿ ತಯಾರಿಸಿರುವುದು. ತೊನ್ನಿನ ಬಣ್ಣದ ಬೇನೆಯಿಂದ ನರಳುವವರು ಸೋರೇಲಿಯ ಔಷಧಿಯನ್ನು ೨೦೦ನೇ ಸತ್ವದಲ್ಲಿ ವಾರಕ್ಕೊಮ್ಮೆ ಬೆಳಿಗ್ಗೆ ಬರೀ ಹೊಟ್ಟೆಯಲ್ಲಿ ಸೇವಿಸುತ್ತಾ ಬರುವುದರಿಂದ ಅನುಕೂಲ ದೊರೆಯುವುದು. ಇದರ ಬಾಹ್ಯ ಮೂಲದ್ರವವನ್ನು ಕಲೆಗಳ ಮೇಲೆ ಲೇಪಿಸುತ್ತ ಬರಬಹುದು. ಹಾಗೆಯೇ ಹೋಮಿಯೋ ವೈದ್ಯ ಪದ್ಧತಿಯಲ್ಲಿ "ಆರ್ಸನಿಕಂ ಸಲ್ಫ್ಯೂರೇಟಂ ಫ್ಲೇವಂ" ಎಂಬ ಹೆಸರಿನ "ಯಲ್ಲೋ ಸಲ್ಫ್ಯೂರೇಟ್ ಆಫ್ ಆರ್ಸನಿಕ್"ನಿಂದ ಸತ್ವಗೊಳಿಸಿದ ಔಷಧವಾಗಿರುವುದು. ಇದನ್ನು ಕಡಿಮೆ ಸತ್ವದಲ್ಲಿ ದಿನಕ್ಕೆರಡು ಬಾರಿಯಂತೆ ಹೊಟ್ಟೆಗೆ ಸೇವಿಸಲು ಕೊಡಬಹುದು. ಆದರೂ ಈ ಔಷಧಿಗಳನ್ನು ಬಳಸುವ ಮೊದಲು ತಜ್ಞ ವೈದ್ಯರ ಸಲಹೆ ಪಡೆಯುವುದು ಕ್ಷೇಮಕರ. ನಿಸರ್ಗ ನೀಡಿರುವ ಔಷಧೀಯ ಗುಣಗಳಿಂದ ಕೂಡಿರುವ ಬಾವಂಚಿ ಗಿಡದ ವೈಜ್ಞಾನಿಕ ಸಸ್ಯನಾಮವು ಸೋರೇಲಿಯ ಎಂದಾಗಿರುವುದು. ಸತ್ವಗೊಳಿಸಿದ ಈ ಔಷಧಿಯು ಹೋಮಿಯೋಪತಿ ಔಷಧಿ ಅಂಗಡಿಗಳಲ್ಲಿ ಮಾತ್ರ ದೊರೆಯುವುದು.

**ಡಾ|| ಎ. ಎಸ್. ಮೂರ್ತಿ**
ಸಾಯಿರಾಮ್ ಹೋಮಿಯೋ ಕ್ಲಿನಿಕ್, ನಂ.೧೨೮೭, ೬ನೇ ಮುಖ್ಯರಸ್ತೆ,
ಎ-ಬ್ಲಾಕ್, ರಾಜಾಜಿನಗರ ೨ನೇ ಹಂತ, ಬೆಂಗಳೂರು - ೫೬೦ ೦೧೦

---

*ಹಿಂದಿನ ಪುಟದಿಂದ..... ಆತಂಕ*

**ಚಿಕಿತ್ಸೆ**

ವ್ಯಕ್ತಿಯಲ್ಲಿರುವ ಯಾವುದಾದರೂ ದೈಹಿಕ ರೋಗದಿಂದ ಆತಂಕ ಬಂದಿರಬಹುದೇ, ಇದೇ ರೀತಿ ವ್ಯಕ್ತಿ ಇತರೆ ರೋಗಗಳಿಗೆಂದು ಸೇವಿಸುವ ಔಷಧದಿಂದ ಬಂದಿರಬಹುದೇ ಎಂದು ವೈದ್ಯರಲ್ಲಿ ತರ್ಕಿಸಿ ಸೂಕ್ತ ಸಲಹೆ ಪಡೆಯಬೇಕು.

ಪ್ರತಿದಿನ ವ್ಯಾಯಾಮ ಅಗತ್ಯ. ದಿನಕ್ಕೆ ಸುಮಾರು ಮುಕ್ಕಾಲರಿಂದ ಒಂದು ಗಂಟೆ ವ್ಯಾಯಾಮ ಮಾಡಬೇಕು. ಕಾಫಿ ಮತ್ತು ಚಹ ಸೇವನೆಯನ್ನು ಕಡಿಮೆ ಮಾಡಬೇಕು.

ಯೋಗ. ಧ್ಯಾನ, ಕ್ರೀಡೆಗಳು ಈ ರೋಗದ ಲಕ್ಷಣಗಳಿಗೆ ಲಾಭಕಾರಿ.

ಅನೇಕ ಔಷಧಗಳ ಲಭ್ಯ ಈ ರೋಗಕ್ಕಿದೆ. ಇವುಗಳನ್ನು ವೈದ್ಯರ ಸಲಹೆ ಮೇರೆಗೆ ಆ ಪ್ರಮಾಣದಲ್ಲಿ ಅಷ್ಟು ಅವಧಿ ಸೇವಿಸಬೇಕು.

ಇಷ್ಟಿದ್ದರೂ ಸಹ ೪-೬ ವರ್ಷದ ಚಿಕಿತ್ಸೆಯ ನಂತರ, ಶೇ. ೩೦ ರೋಗಿಗಳು ಪೂರ್ಣ ಗುಣಮುಖರಾಗುತ್ತಾರೆ.

ಶೇ. ೪೦-೫೦ ರೋಗಿಗಳು ಅಪೂರ್ಣ ಗುಣಮುಖರಾದರೆ, ಶೇ. ೨೦-೩೦ ರೋಗಿಗಳಲ್ಲಿ ರೋಗದ ಲಕ್ಷಣಗಳು ಅದೇ ರೀತಿ ಮುಂದುವರಿಯಬಹುದು ಅಥವಾ ಮೊದಲಿಗಿಂತ ಹೆಚ್ಚಬಹುದು.

**ಡಾ|| ಪಾಲಾಕ್ಷ**
ಎಚ್.ಎ.ಎಲ್. ಆಸ್ಪತ್ರೆ, ಬೆಂಗಳೂರು- ೫೬೦ ೦೧೭

# ಮಳೆಯ ಸುತ್ತ ಅವೈಜ್ಞಾನಿಕ ಸಂಗತಿಗಳು

ಎಂದೂ ಕಾಣದಷ್ಟು ನೀರಿನ ಅಭಾವ ಈ ಸಲ ರಾಜ್ಯಾದ್ಯಂತ ತಲೆದೋರಿದೆ. ಜೂನ್ ತಿಂಗಳ ಮೊದಲ ವಾರದಿಂದಲೇ ಆರಂಭವಾಗಬೇಕಿದ್ದ ಮುಂಗಾರು ಮಳೆ ಮತ್ತಷ್ಟು ಮುಂದೂಡಲ್ಪಟ್ಟಿದೆ. ಈ ಮಧ್ಯೆ ಇವುಗಳ ಸುತ್ತ ಮುತ್ತ ನಡೆಯುತ್ತಿರುವ ವಿದ್ಯಮಾನಗಳು ಆಶ್ಚರ್ಯ ಹುಟ್ಟಿಸುತ್ತಿವೆ. ಪುರೋಹಿತಶಾಹಿಗಳು, ಮೂಢಾಚಾರಿಗಳು ಮಳೆಗಾಗಿ ಪ್ರಾರ್ಥನೆ, ಪೂಜೆಗಳ ಮಾಡಹೊರಟಿದ್ದಾರೆ. ಜನಸಮುದಾಯದ ಯೋಗಕ್ಷೇಮಗಳ ನಿಜ ಕಾರಣಗಳ ಕಂಡುಕೊಳ್ಳದ ಸರಕಾರ ತಾನೇ ತನ್ನ ಇಲಾಖೆ ವತಿಯಿಂದ ಮಳೆ ಬರಿಸಲು ದೇವಸ್ಥಾನಗಳಲ್ಲಿ ದೇವರ ಕೃಪೆಗಾಗಿ ಹೋಮ ಹವನಗಳಿಗಾಗಿ ಕರೆ ಕೊಟ್ಟಿದೆ. ಅದರೊಟ್ಟಿಗೆ ಕೃತಕ ಮಳೆ ತರಿಸುವ ಎಡಬಿಡಂಗಿತನವನ್ನು ಪ್ರದರ್ಶಿಸುತ್ತಿದೆ. ಸಚಿವರೋರ್ವರು ಉರುಳು ಸೇವೆ ನಡೆಸಿರುವುದು ವರದಿಯಾಗಿದೆ.

ಸದಾ ಜನರ ಅಜ್ಞಾನ ಅನನುಭವಗಳನ್ನು ಬಂಡವಾಳವಾಗಿಸಿಕೊಂಡಿರುವ ಪುರೋಹಿತವರ್ಗಕ್ಕೆ ಇಂತಹದೆಲ್ಲ ಹೇಳಿ ಮಾಡಿಸಿದಂತಿರುವ ಸಂದರ್ಭಗಳು. ಇವರ ಬೇಳೆ ಬೇಯಿಸಿಕೊಳ್ಳಲು ಜೋಳಿಗೆ ತುಂಬಿಸಿಕೊಳ್ಳಲು ಇದು ತಕ್ಕ ವೇಳೆ. ಗಮನಿಸಿ, ಪ್ರಕೃತಿ ಆಗುಹೋಗುಗಳು ಮಾನವ ನಿಯಂತ್ರಣದಲ್ಲಿ ಇಲ್ಲ ಎಂಬ ಸರಳ ಸತ್ಯವನ್ನು ನಾವೆಲ್ಲ ಒಪ್ಪಬೇಕಾಗಿದೆ. ಹಾಗಿರುವಾಗ ಈ ಅರ್ಥವಿಲ್ಲದ ಜಪ ತಪಗಳ ಅಗತ್ಯವಾದರೂ





ಏನು? ಕಡುಬೇಸಿಗೆಯಲ್ಲಿ ಈ ಕಂದಾಚಾರಿಗಳು, ಇವರ ಮಂತ್ರತಂತ್ರಗಳು ಎಲ್ಲಿರುವವ್ರೋ ತಿಳಿಯದು. ಇವರನ್ನೆಲ್ಲ ದೀರ್ಘಕಾಲದಿಂದ ನೀರಿನ ಅಭಾವ ಕಂಡುಬಂದು ಬರ ಬಿದ್ದಿರುವ ಸ್ಥಳಗಳಿಗೆ ರವಾನೆ ಮಾಡಿದರೆ ಎಷ್ಟೊಂದು ಕ್ಷೇಮ. ಅಲ್ಲಾದರೂ ಇವರ ಕೃಪೆಯಿಂದ ಮಳೆ ಬಂದು ಲೋಕ ಉದ್ಧಾರವಾದೀತು !

ನಮಗೆಲ್ಲ ಗೊತ್ತಿದೆ. ಮಳೆ, ಬಿಸಿಲು, ಚಳಿ ನಮ್ಮ ಮನೆಯ ಕ್ಯಾಲೆಂಡರಿಗೆ ತಕ್ಕಂತೆ ಬದಲಾಗುತ್ತಿರುವುದಿಲ್ಲ, ನಮ್ಮ ಅನುಕೂಲಕ್ಕಾಗಿ ನಾವೇ ಮಾಡಿಕೊಂಡು ಬಂದಿರುವ ವೇಳಾಪಟ್ಟಿಗಳಿವು. ಅದರಂತೆಯೇ ಪ್ರಕೃತಿ ನಡೆಯಬೇಕೆಂಬ ನಿಯಮವೇನಾದರೂ ಇದೆಯೆ ? ಈ ಗಲಾಟೆಗಳ ಮಧ್ಯೆ ಜ್ಯೋತಿಷಿಗಳು ಎಲ್ಲಿದ್ದಾರೋ! ಅವರಿಂದಾದರೂ ಸಮಸ್ಯೆಗೆ ಪರಿಹಾರ ಕಾಣಬಹುದೇ ? ಎಲ್ಲಿ ಮುದುರಿಕೊಂಡು ಕೂತಿದ್ದಾರೋ.

ನೀರಿನ ಅಭಾವ ತಲೆದೋರಲು ಸಾಕಷ್ಟು ಕಾರಣಗಳು ಇವೆ. ಅವುಗಳೆಲ್ಲವೂ ನಾವೇ ಸೃಷ್ಟಿಸಿಕೊಂಡ ದುರಾಚಾರದ ಫಲಗಳು. ಪ್ರಕೃತಿಯನ್ನು ನಾವು ಎಷ್ಟೊಂದು ದುರುಪಯೋಗಪಡಿಸಿಕೊಂಡಿದ್ದೇವೆ, ಹಾಳುಗೆಡಹಿದ್ದೇವೆ ಎಂದರೆ ಶತಮಾನಗಳೇ ಬೇಕಾಗಬಹುದು ಇದನ್ನು ಸರಿಪಡಿಸಲು. ಆ ವೇಳೆಗೆ ಮಾನವ ಕುಲ ನಾಶದ ಅಂಚನ್ನು ತಲುಪಿದರೂ ತಲುಪಬಹುದು.

ಮಲೆನಾಡಿನ ಪ್ರದೇಶಗಳನ್ನು ಗಮನಿಸಿ ಕೆಲವು ಸಂಗತಿಗಳನ್ನು ಹೇಳುತ್ತಿದ್ದೇನೆ. ಇಲ್ಲಿನ ಸಣ್ಣಪುಟ್ಟ ನದಿ ತೋಡುಗಳಲ್ಲಿ ಮೀನುಗಳು ಬಿಸಿನೀರಿನ ಕಾರಣಕ್ಕೆ ಆಮ್ಲಜನಕ ಕೊರತೆಯಿಂದ ಸಾಯತೊಡಗಿವೆ. ಇಲ್ಲಿನ ಹಿರಿಯರು ಹೇಳುವಂತೆ ಇಂತಹ ಘಟನೆಗಳು ನಡೆದುದು ನಮಗೆ ಗೊತ್ತಿಲ್ಲ. ನೀರಿನ ಅಭಾವವು ಇಷ್ಟೊಂದು ಕಂಡುಬಂದ ನೆನಪು ಇಲ್ಲ ಎನ್ನುತ್ತಾರವರು. ಆದರೆ ನಾವೆಲ್ಲ ಯೋಚಿಸಬೇಕಾದುದು ಒಂದು ಶತಮಾನದ ಈಚೆಗೆ ಪ್ರಕೃತಿ ಮೇಲೆ ನಡೆದ ಮಾನವನ ದಾಳಿ.

ಒಂದು ಕಾಲದಲ್ಲಿ ಸಮೃದ್ಧವಾಗಿದ್ದ ದಟ್ಟ ಅರಣ್ಯಗಳು ಇಂದು ಕಣ್ಮರೆಯಾಗುತ್ತಿವೆ. ಬಿದ್ದ ಮಳೆಯ ನೀರನ್ನು ನೆಲದೊಳಗೆ ಹಿಂಗಿಸುವಲ್ಲಿ ನೇರ ಪಾತ್ರವಹಿಸುತ್ತಿದ್ದ ಕಾಡು ಪ್ರದೇಶಗಳ ನಾಶದೊಂದಿಗೆ ನೀರು ಬರಬರನೆ ಹರಿದು ಸಮುದ್ರ ಸೇರುವಂತಾಗಿದೆ. ಮಾತ್ರವಲ್ಲ ಪ್ರಕೃತಿಯೊಂದಿಗೆ ಹೊಂದಾಣಿಕೆಯಲ್ಲಿದ್ದ ಕೃಷಿ ವಿಧಾನ ಬದಲಾಗುತ್ತಾ ಹೋಗಿದೆ.

ತಲೆಮಾರುಗಳಿಂದ ಭತ್ತ ಬೆಳೆಯುತ್ತಿದ್ದ ಗದ್ದೆಗಳೆಲ್ಲ ಇಂದು ಅಡಿಕೆ ತೋಟಗಳಾಗಿವೆ. ಗದ್ದೆ ಬದಿಯ ದಟ್ಟ ಕಾಡಿನ ಜಾಗಗಳನ್ನು ತೆಂಗು, ರಬ್ಬರ್‌ಗಳು ಆಕ್ರಮಿಸಿವೆ. ಭತ್ತದ ಬಯಲಿನ ವರ್ಷಪಿಡೀ ನೀರು ನಿಲ್ಲುವ ಭಾಗಗಳು, ಹಳ್ಳ ತೋಡುಗಳಿಗೆ ಚಿಕ್ಕಪುಟ್ಟ ಕೆರೆ ಕಟ್ಟೆಗಳು, ಮದಗಗಳು, ಬದುಗಳು ಒಂದು ರೀತಿಯಲ್ಲಿ ಪ್ರಕೃತಿಯೊಂದಿಗೆ ಸಹಮತವನ್ನು ಹೊಂದಿದ್ದವು. ಹಾಗಾಗಿ ಎಲ್ಲೆಲ್ಲೂ ತಂಪಿರುತಿತ್ತು, ನೀರಿನ ಮೂಲಗಳು ಚೆನ್ನಾಗಿದ್ದವು. ಅಂತರ್ಜಲ ಮಟ್ಟವು ತೊಂದರೆಗೆ ಒಳಗಾಗಿರಲಿಲ್ಲ. ಮಳೆ ಬರುವ ದಿನಗಳಲ್ಲಿ ಹಿಂದು ಮುಂದಾದರು ನೀರು ಸಾಕಷ್ಟು ಇರುತ್ತಿತ್ತು. ಪಂಪ್‌ಸೆಟ್‌ಗಳು, ಬೋರ್‌ವೆಲ್‌ಗಳು, ಬುಲ್ಡೋಜರ್ ಎಲ್ಲ ಆಧುನಿಕತೆ ಇಂದು ಕೃಷಿಗೆ ಬಂದಿದೆ. ಆದರೆ ದುರಾಸೆ, ಸ್ವಾರ್ಥ ಹಣದ ಬೆನ್ನು ಹತ್ತಿರುವ ಮಾನವನಿಗೆ ತನ್ನ ಮುಂದಿನ ತಲೆಮಾರಿಗಾದರೂ ಪ್ರಕೃತಿಯನ್ನು ಉಳಿಸಿಕೊಳ್ಳಬೇಕಾಗಿದೆ ಎಂಬ ಕಿಂಚಿತ್ತು ಜ್ಞಾನವೂ ಇಲ್ಲದೆ ಹೋಗಿದೆ.

ಇವತ್ತು ನಾವೆಲ್ಲರೂ ಆತ್ಮ ಶೋಧನೆ ಮಾಡಬೇಕಿದೆ. ನಮ್ಮ ಶೋಕಿಯ, ಆಡಂಬರದ, ಸಿಕ್ಕಿದ್ದನ್ನೆಲ್ಲ ಮುಕ್ಕುವ, ಕೊಳ್ಳೆ ಹೊಡೆಯುವ ಪ್ರವೃತ್ತಿಯಿಂದಾಗಿ ನೆಲ-ಜಲಗಳನ್ನು ಸಂಪೂರ್ಣ ಹಾಳುಗೆಡಹಿದ್ದೇವೆ. ತಂತ್ರಜ್ಞಾನವನ್ನು ಎಲ್ಲರ ಒಳಿತಿಗಾಗಿ ಬಳಸದೆ ಕೇವಲ ಕೆಲವೇ ಜನರ ಭೋಗದ ಜೀವನಕ್ಕಾಗಿ ದುರುಪಯೋಗಪಡಿಸಿಕೊಳ್ಳುತ್ತಿದ್ದೇವೆ. ಹೆಚ್ಚುತ್ತಿರುವ ಜಾಗತೀಕರಣ, ಖಾಸಗೀಕರಣಗಳು ಈ ದುಷ್ಟ ಬುದ್ಧಿಯನ್ನು ಇನ್ನಷ್ಟು ಪ್ರಚೋದನೆಗೆ ಒಳಪಡಿಸುತ್ತಿದ್ದು ನಿರಾಡಂಬರ, ಸರಳತನ ಎನ್ನುವ ಪದಗಳೇ ನಮಗೆ ಅಪರಿಚಿತವಾಗುತ್ತಿವೆ. ಇಂತಹ ಸಂದರ್ಭಗಳಲ್ಲಿ ಪ್ರಕೃತಿಯಲ್ಲಿ ಕಾಣಬರುವ ವಿದ್ಯಮಾನಗಳನ್ನು ನಾವು ವೈಜ್ಞಾನಿಕವಾಗಿ ವಿಶ್ಲೇಷಿಸಿ ಅದರ ನಿಜಕಾರಣಗಳನ್ನು ಅರಿತುಕೊಳ್ಳದೆ, ಮಂತ್ರಪಠಣಗಳಲ್ಲಿ ಮುಳುಗುತ್ತಿರುವುದು ಮೂರ್ಖತನದ ಪರಮಾವಧಿಯಾಗಿ ಕಾಣಬರುತ್ತಿದೆ. ಇದನ್ನೆಲ್ಲ ಪ್ರಚೋದಿಸುವ ಮಂದಿಗಳು, ವ್ಯವಸ್ಥೆಗಳು ಜನರನ್ನು ಮತ್ತಷ್ಟು ಅಂಧಕಾರಕ್ಕೆ ತಳ್ಳುತ್ತಾರೆ, ಮತ್ತು ಮೂಢನಂಬಿಕೆಯಡಿಯಲ್ಲಿ ಜನರನ್ನು ನಂಬಿಸಿ ಸುಲಿಯುವ ಹಳೆಯ ಸಂಪ್ರದಾಯವನ್ನು ಯಥಾಸ್ಥಿತಿಯಲ್ಲಿ ಮುಂದುವರಿಸುತ್ತಾರೆ ಎಂಬುದು ನೆನಪಿರಲಿ.

**ಗೋಪಾಲ್ ಪೆರಾಜೆ**
ಕೊಳಂಗಾಯ ಮನೆ, ಅಂಚೆ : ಪೆರಾಜೆ, ವಯಾ ಅರಂತೋಡು, ಸುಳ್ಯ ತಾಲ್ಲೂಕು

# ಭಾರತೀಯ ಇಚ್ಛಾಶಕ್ತಿಗೆ ಮೀರಿದ ಸಾಮಾಜಿಕ ನ್ಯಾಯ

*ಈ ದೇಶ ಎಷ್ಟೇ ಮಟ್ಟಿಗೆ ಸಾಮಾಜಿಕ ಸೇವೆ, ಸಮಾನತೆ, ಸಮಾನಾವಕಾಶಗಳನ್ನು ಒಪ್ಪಿಕೊಂಡಂತೆ ಮಾತನಾಡಿದರೂ ಅಸಹಾಯಕರ ಬಗೆಗೆ ಯಾವುದೇ ರಿಯಾಯಿತಿ, ಸವಲತ್ತು, ಮೀಸಲಾತಿ ಇತ್ಯಾದಿಗಳನ್ನು ಸುತರಾಂ ಮನಸಾರೆ ಒಪ್ಪಲೇ ಇಲ್ಲ.*

*ಹಿಂದುಳಿದ ವರ್ಗಗಳ ರಾಜಕೀಯ ಮೀಸಲಾತಿ ಲೋಕಸಭೆ ವಿಧಾನಸಭೆಗಳ ಹೊರಗಿಟ್ಟಿರುವುದಕ್ಕೆ ರಾಷ್ಟ್ರೀಯ ಪ್ರಗತಿ ವಿರೋಧಿ ಮನೋಭಾವವೇ ಕಾರಣ. ಇದೊಂದು ಹಿನ್ನಡೆ. ಜಾತಿ ಬಿಟ್ಟು ಬಾಳಲು ದೇಶದಲ್ಲಿ ಸಾಧ್ಯವೇ ? ಇಂತಹ ಪರಿಸ್ಥಿತಿಯಲ್ಲಿ ಈ ವಿಮುಖತೆಗೆ ಬೇರೆಯೇ ಕಾರಣಗಳಿರಬೇಕು. ಈ ದಿಸೆಯಲ್ಲಿ ಮುಂದುವರಿದವರು ಪ್ರತಿಭಾವಂತರೂ, ಸತ್ಯವಂತರೂ, ನಿಸ್ವಾರ್ಥಿಗಳೂ ಆಗದೇ ಹೋಗಿದ್ದು ಮಹಾದುರಂತ.*

**ಸಾ**ಮಾಜಿಕ ನ್ಯಾಯದ ಬಗೆಗೆ ಚಿಂತಿಸುವಾಗ ಪುಂಖಾನುಪುಂಖ ಭಾಷಣಗಳೂ, ದಿನದ ೨೪ ಘಂಟೆ ಸಮಾರಂಭಗಳೂ, ಲೆಕ್ಕವಿಲ್ಲದಷ್ಟು ಕಾನೂನುಗಳೂ ಜೊತೆಗೆ ಸಂವಿಧಾನದ ಬದ್ಧತೆ ಇದ್ದರೂ ಇಡೀ ದೇಶದಲ್ಲಿ ಯಾವುದೋ ಒಂದು ನಿಗೂಢವಲ್ಲದ ಶಕ್ತಿ ಸಾಮಾಜಿಕ ನ್ಯಾಯಕ್ಕೆ ವಿರುದ್ಧವಾಗಿ ಕಾರ್ಯ ನಿರತವಾಗಿದೆ ಎಂಬುದು ಸಾಮಾಜಿಕ ನ್ಯಾಯ ಸಾಗುವ ರೀತಿಯಿಂದ ಸ್ಪಷ್ಟವಾಗುತ್ತದೆ. ಈ ದೇಶ ಎಷ್ಟೇ ಮಟ್ಟಿಗೆ ಸಾಮಾಜಿಕ ಸೇವೆ, ಸಮಾನತೆ, ಸಮಾನಾವಕಾಶಗಳನ್ನು ಒಪ್ಪಿಕೊಂಡಂತೆ ಮಾತನಾಡಿದರೂ ಅಸಹಾಯಕರ ಬಗೆಗೆ ಯಾವುದೇ ರಿಯಾಯಿತಿ, ಸವಲತ್ತು, ಮೀಸಲಾತಿ ಇತ್ಯಾದಿಗಳನ್ನು ಸುತರಾಂ ಮನಸಾರೆ ಒಪ್ಪಲೇ ಇಲ್ಲ.

ಮಡಿಕೇರಿ ತಾಲ್ಲೂಕಿನ ಹಾಲಗುಂದ ಗ್ರಾಮ ಪಂಚಾಯಿತಿ ಅಧ್ಯಕ್ಷರ ಆಯ್ಕೆ ಉಚ್ಚ ನ್ಯಾಯಾಲಯದಲ್ಲಿ ಇತ್ಯರ್ಥವಾದ ವಿಷಯ ಭಾರತವು ಅದರಲ್ಲೂ ಕರ್ನಾಟಕ ತಲೆತಗ್ಗಿಸುವಂತಹ ವಿಚಾರ. ಅಧ್ಯಕ್ಷ ಪದ ಅನುಸೂಚಿತ ಜಾತಿಯ ಮಹಿಳೆಗೆ ಮೀಸಲಾಗಿದ್ದಿತು. ಶ್ರೀಮತಿ ಎಚ್. ಎಲ್. ಸರೋಜಿನಿಯವರೊಬ್ಬರೇ ಅನುಸೂಚಿತ ಜಾತಿಯ ಮಹಿಳಾ ಪಂಚಾಯತ್ ಸದಸ್ಯೆಯಾಗಿದ್ದವರು. ಅವರು ಹಿಂದಿನ ವರ್ಷ ಉಪಾಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದವರು. ಆದರೆ ಪಂಚಾಯತ್ ಸದಸ್ಯರುಗಳು ಇತರೆ ವರ್ಗದವರಾಗಿದ್ದು, ಯಾರೂ ಈ ಮಹಿಳೆಯ ಹೆಸರನ್ನು ಅಧ್ಯಕ್ಷತೆಗೆ ಸೂಚಿಸಲು ಮುಂದಾಗಲಿಲ್ಲ. ಈ ವರ್ಗ ಕಾನೂನಿಗೂ ಮೀರಿ ಸಮಸ್ಯೆಯನ್ನುಂಟುಮಾಡಿತು. ತೀರ ಅನುಚಿತ. ಇಡೀ ಸಮಾಜವೇ ತಲೆತಗ್ಗಿಸುವ ವಿಚಾರ. ಇಂತಹ ಜನ ಪ್ರತಿನಿಧಿಗಳು ತಾವು ಕೊಡಬಹುದಾದ ಕಾರಣಗಳಿಂದ ಅಸ್ಪೃಶ್ಯತಾ ನಿವಾರಣೆ ಕಾಯ್ದೆ ಅಡಿ ಆರೋಪಿಗಳಾಗುವುದರಲ್ಲಿ ಸಂದೇಹವಿಲ್ಲ. ಭಾರತೀಯ ಮನೋಧರ್ಮವೇ ಸಮಾನತೆ ತತ್ವಕ್ಕೆ ವಿರೋಧವಾದದು. ಉತ್ತಮಣ ಶ್ರೇಣಿಬದ್ಧ ಮನುವಾದಿ ಮನೋಸ್ಥಿತಿ. ಹಾಗಲ್ಲದಿದ್ದರೆ ದೇಶದಲ್ಲಿ ಸಾಮಾಜಿಕ ನ್ಯಾಯ ಸಾಧನೆ ಹಿಂದೆ ಉಳಿಯುತ್ತಿರಲಿಲ್ಲ. ಅನುಸೂಚಿತ ಜಾತಿ, ಅನುಸೂಚಿತ ಪಂಗಡ ಮತ್ತು ಇತರ ಹಿಂದುಳಿದ ವರ್ಗಗಳ ಶಿಕ್ಷಣ ಮತ್ತು ಉದ್ಯೋಗ ಕಾರ್ಯಕ್ರಮ ಈಗಿರುವಷ್ಟು ಅಸಮರ್ಪಕವಾಗುತ್ತಿರಲಿಲ್ಲ. ಅಸ್ಪೃಶ್ಯತಾ ನಿವಾರಣೆ, ಪ್ರತ್ಯೇಕ ಭೂಪ್ರದೇಶ ವಾಸದಂತಹ ಅಮಾನವೀಯ ಕಾರ್ಯಕ್ರಮಗಳು ಹಸನಾಗಲು ಈ ಪರಿಯ ನಿಷ್ಕ್ರಿಯತೆ ಇರುತ್ತಿರಲಿಲ್ಲ. ಉದಾಹರಣೆಗೆ: ಹಿಂದುಳಿದ ವರ್ಗದವರ ಏಳಿಗೆಗಾಗಿ ಸಿದ್ಧಪಡಿಸಿದ್ದ ಕಾಕಾ ಕಾಲೇಲ್ಕರ್ ವರದಿಯನ್ನು ಸುಲಭದಲ್ಲಿ ಮೂಲೆ ಗುಂಪಾಗಿಸಲು ಸಾಧ್ಯವಾಗುತ್ತಿರಲಿಲ್ಲ. ಹೇಗಾದರೂ ಪ್ರಯತ್ನಿಸಿ ಅದರ ನ್ಯೂನತೆಗಳನ್ನು ಸರಿಹೊಂದಿಸಿ ಪುನಃ ರೂಪಿಸಿ ಕಾರ್ಯಗತಗೊಳಿಸಬಹುದಿತ್ತು. ಬಹುದಿತ್ತೇನು, ಸಮಾಜದಲ್ಲಿ ಅವಕಾಶ ವಂಚಿತರ ಆಕಾಂಕ್ಷೆಗಳನ್ನು ಜೀವಂತ ಇರಿಸಲು, ಅಸಮಾನ ಅವಕಾಶಗಳನ್ನು ನೇರ್ಪಡಿಸಲು ಪ್ರಯತ್ನಿಸಬೇಕಾಗಿತ್ತು. ಸಮಾನತೆಗಾಗಿ ಹಾತೊರೆಯುವವರಿಗೆ ಸಮಾನ ಅವಕಾಶಗಳ ದಾರಿಯೊಂದು ಭದ್ರ ಆಧಾರವಾಗುತ್ತಿತ್ತು.

ತರುವಾಯದ ಮಂಡಲ್ ವರದಿಯನ್ನು ವಿನಾ ಕಾರಣ ಹತ್ತು ವರ್ಷ ಕಾಲ ಕಡತದಲ್ಲೇ ಉಳಿಸಲಾಗಿತ್ತು. ಈ ಕಡತವನ್ನು ತೆರೆದು ಪರಾಂಬರಿಸಿ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸಲು ಹೊಸ ನೀತಿಯ ಹೊಸ ಸರಕಾರವೇ ಬೇಕಾಯಿತು. ಆದರೆ ಈ ವರದಿಯ ವಿರುದ್ಧವಿದ್ದ ರಾಷ್ಟ್ರೀಯ ಪಟ್ಟಭದ್ರ ಹಿತಾಸಕ್ತಿಗಳನ್ನು ಮಣಿಸಲು ಹೊಸ ಸರಕಾರ ತನ್ನನ್ನೇ ಪಣಕ್ಕಿಟ್ಟು ಅಧಿಕಾರ ಕಳೆದುಕೊಳ್ಳಲೂ ಸಿದ್ಧವಾಗಬೇಕಾಯಿತು. ಹೇಗೂ ಕಾನೂನು ಅಸಹಾಯಕರ ಪರವಾಗಿದ್ದು ವಿಶೇಷ ಸವಲತ್ತುಗಳ ನೀತಿ ಗೆದ್ದು ಚಾರಿತ್ರಿಕ ಪ್ರಸಿದ್ಧಿ ಪಡೆಯಿತು. ತೀಕ್ಷ್ಣ ವಿರೋಧವೂ ಹೊರಬಿದ್ದು ರಾಡಿಯಾಯಿತು. ದೇಶದ ಗೌರವ ಗೌಣವಾಯಿತು.

ಇದೇ ರೀತಿ ಕರ್ನಾಟಕ ೨ನೇ ಹಿಂದುಳಿದ ವರ್ಗದ ಆಯೋಗದ ವರದಿ, ಅದೆಷ್ಟೇ ವೈಜ್ಞಾನಿಕವಾಗಿ ನಿರೂಪಿಸಿದ್ದರೂ ರಾಜಕೀಯ ಕಾರಣಗಳಿಗಾಗಿ ತಿರಸ್ಕರಿಸಿ ಸಂವಿಧಾನಕ್ಕೆ ಅಪಚಾರವೆಸಗಲಾಯಿತು. ಸಾಮಾಜಿಕವಾಗಿಯೂ ಶೈಕ್ಷಣಿಕವಾಗಿಯೂ ಹಿಂದುಳಿದವರ ಏಳಿಗೆ ಸಂವಿಧಾನ ಬದ್ಧವಾಗಿದ್ದೂ ಅನುಷ್ಠಾನಕ್ಕೆ ಬರದೆ ಹೋಯಿತು. ಸಾಮಾಜಿಕ ನ್ಯಾಯದ ಭದ್ರ ಬುನಾದಿ ಇಲ್ಲದ ನಮ್ಮ ಬಲಹೀನತೆಯನ್ನು ಈ ಸಂದರ್ಭ ಎತ್ತಿ ಹಿಡಿಯಿತು. ಪಟ್ಟಭದ್ರರ ಶಕ್ತಿ ನಾಚಿಕೆಬಿಟ್ಟು ಬಯಲಾಯಿತು.

ಇದಕ್ಕಿಂತ ಪ್ರಬಲವಾದ, ಕಾನೂನುಬದ್ಧವಾದ, ಮಾನವೀಯತೆಯ ಮುಖವನ್ನು ಎತ್ತಿ ಹಿಡಿಯುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರ ಅಭಿವೃದ್ಧಿ ಕಾರ್ಯ ಶೈಲಿ ಪರಿಶೀಲಿಸಿದರೆ, ಕರ್ನಾಟಕದಲ್ಲಿ ೧೦೧ ಅನುಸೂಚಿತ ಜಾತಿಗಳು ೪೯ ಅನುಸೂಚಿತ ಪಂಗಡಗಳವರೂ ಇದ್ದು ಈ ಪಟ್ಟಿಯು ಸಂವಿಧಾನದಲ್ಲೇ ಉಲ್ಲೇಖಗೊಂಡಿದೆ. ಉದ್ದೇಶ ಅತ್ಯಂತ ಕೆಳವರ್ಗದ ಪ್ರಜೆಗಳ ಅಭಿವೃದ್ಧಿ ಕಾರ್ಯಕ್ಕೆ ಸಂವೈಧಾನಿಕ ಕಾನೂನು ಲೇಪ. ಅಸ್ಪೃಶ್ಯತೆ, ಪ್ರತ್ಯೇಕತೆಗಳಂತಹ ಅನೀತಿಗಳೇ ರಾಷ್ಟ್ರೀಯ ಸಂಪ್ರದಾಯಗಳ ಕಳಂಕಗಳಾಗಿದ್ದು, ಅವುಗಳ ಮೂಲೋತ್ಪಾಟನೆಯೇ ಇದರ ಗುರಿ. ಇಂತಹ ಪ್ರಬಲವೂ, ಅತ್ಯವಶ್ಯಕವೂ ಆದ ರಾಷ್ಟ್ರಾಭಿವೃದ್ಧಿ ಕಾರ್ಯ ಸಾಗಿದ ರೀತಿ ಅತ್ಯಂತ ಅಸಮರ್ಪಕ. ರಾಷ್ಟ್ರವು ಬಾಯುಪಚಾರದ ಅನನ್ಯ ಸಮಾಜ ಕಲ್ಯಾಣ ಕಾರ್ಯಕ್ಕೆ ದಿನದ ೨೪ ಘಂಟೆಯೂ ಅಹರ್ನಿಶಿ ದನಿ ಎತ್ತುತ್ತಲೇ ಅತ್ಯಂತ ಹಿಂದುಳಿದವರ ವಿಶೇಷ ಸೌಕರ್ಯಗಳಿಗೆ ಅಂತರಾಳದ ವಿರೋಧ ಒಡ್ಡಿಕೊಂಡು ಇಚ್ಛಾ ಶಕ್ತಿಯ ಕೊರತೆ ಬಯಲಾಯಿತು. ಬ್ಯಾಕ್‌ಲಾಗ್ ಉದ್ಯೋಗ ಪ್ರಹಸನ ಇದಕ್ಕೆ ತೀಕ್ಷ್ಣವಾದ ಸಾಕ್ಷಿ. ಮಾನವೀಯತೆಯ ಲೇಪ ಲವಲೇಶವೂ ಇಲ್ಲದ ಸ್ವಾರ್ಥ ಸಾಮಾಜಿಕ ಗುಣಲಕ್ಷಣ. ಅರ್ಜಿ ಗುಜರಾಯಿಸಿಕೊಂಡು ಸಮಾಜ ಕಲ್ಯಾಣ ಸೌಕರ್ಯಗಳ ವಿತರಣಾ ವಿಧಾನ. ಸಿನಿಮಾ ಲೈಸೆನ್ಸ್‌ಗೆ ಅರ್ಜಿ ಗುಜರಾಯಿಸಿದ ಬಗೆ. ಬ್ರಿಟಿಷ್ ಆಡಳಿತ ನೀತಿ, ಹೀಗಾಗಿ ಪಾಲಿಗೆ ಬಂದಷ್ಟು ಪಂಚಾಮೃತ ಎಂಬಂತಾಯಿತು. ಸಿಕ್ಕಿದರೆ ಸೀರುಂಡೆ ನೀತಿ ಆಯಿತು. ದೊಡ್ಡ ಮೀನಿನ ಬಾಯಿಗೆ ಚಿಕ್ಕ ಮೀನು ಬಿದ್ದ ಪ್ರಸಂಗ. ೧೦೧ ಜಾತಿಯವರ ೪೯ ಪಂಗಡಗಳವರ ಸಂಪೂರ್ಣ ಸಮಾನಾಂತರ ಅಭಿವೃದ್ಧಿ ಯೋಜನೆ ಸರಕಾರದ ಜವಾಬ್ದಾರಿಯಾಗಿದ್ದೂ ಸರಕಾರ ಈ ದಿಸೆಯಲ್ಲಿ ತಕ್ಕ ಮಟ್ಟಕ್ಕೇರದೆ ಇಚ್ಛೆಯೇ ಇಲ್ಲದ ಕಾರ್ಯಸಾಧಕ ಸಂಸ್ಥೆಯಾಯಿತು. ಹಿಂದೆ ಬಿದ್ದವರನ್ನು ಕೈ ಹಿಡಿದು ಮುನ್ನಡೆಸಬೇಕಾದವರೇ ಕರ್ತವ್ಯ ವಿಮುಖರಾದರು. ಸರಕಾರಿ ಯಂತ್ರದ ಯೋಗ್ಯತೆ ಈ ಕೆಲಸಕ್ಕೆ ತಕ್ಕುದ್ದಾಗಿ ಪರಿಣಮಿಸಲಿಲ್ಲ. ಮನಃಸ್ಫೂರ್ತಿಯಿಂದ ಶ್ರದ್ಧಾಬದ್ಧವಾಗಿ ಕೆಲಸ ನಿರ್ವಹಿಸಿದ್ದರೆ ಆಂಧ್ರದಲ್ಲಿ ಮಾಲ-ಮಾದಿಗ, ಕರ್ನಾಟಕದಲ್ಲಿ ಎಡಗೈ-ಬಲಗೈ, ಮಹಾರಾಷ್ಟ್ರದಲ್ಲಿ ಮಹಾರ್-ಮಾಂಗ್, ಉತ್ತರ ಪ್ರದೇಶದಲ್ಲಿ ಜಟಾವ್-ಘಾಸಿ ಗುಂಪುಗಳಲ್ಲಿ ವಿಶೇಷ ಸೌಕರ್ಯಗಳ ತಾರತಮ್ಯದಿಂದಾಗಿ ಸಾಮಾಜಿಕ ವೈರುಧ್ಯಗಳೂ-ಕಾದಾಟಗಳೂ-ಕಿತ್ತಾಟಗಳೂ ನಡೆಯುತ್ತಿರಲಿಲ್ಲ. ಸರಕಾರದ ಇಲಾಖೆಗಳು ಶೈಕ್ಷಣಿಕ ಕ್ಷೇತ್ರದಲ್ಲೂ ಮೀಸಲಾತಿ ಪರಿಧಿಯಲ್ಲಿ ಸಮಾನ ಅಭಿವೃದ್ಧಿ ನೀತಿಯ ಅನುಸರಣೆಗಾಗಿ ವಿಚಕ್ಷಣೆಯಿಂದ ಕೆಲಸ ಮಾಡಿದ್ದರೆ, ಇಂತಹ ಅವಮಾನಕರ ಪರಿಸ್ಥಿತಿ ಉದ್ಭವವಾಗುತ್ತಿರಲಿಲ್ಲ. ಇವರಿಗೆ ವಿಶೇಷ ಪರಿಣತಿಯ ಜೊತೆಗೆ ಕರ್ತವ್ಯ ನಿಷ್ಠೆಯ ಅವಶ್ಯಕತೆ ಇತ್ತು. ವಿಷಯ ಬಹು ಸುಲಲಿತ. ಪ್ರತಿ ರಿಯಾಯಿತಿ ವಿಶೇಷ ಸೌಕರ್ಯ. ಅದು ಶಾಲಾ ದಾಖಲಾತಿಯೇ ಆಗಲಿ, ವಿದ್ಯಾರ್ಥಿ ವೇತನ

[illegible]

ಆಗಲಿ, ಉದ್ಯೋಗವೇ ಆಗಲಿ ಜಾತೀವಾರು ಅಂಕಿ ಸಂಖ್ಯೆಗಳು ಲಭ್ಯ. ಪ್ರಾಥಮಿಕ ಶಾಲಾ ಮಟ್ಟದಲ್ಲಿ, ಪ್ರೌಢಶಾಲಾ ಮಟ್ಟದಲ್ಲಿ, ತಾಂತ್ರಿಕ ಮತ್ತು ವೃತ್ತಿ ಶಿಕ್ಷಣ ಕ್ಷೇತ್ರದಲ್ಲಿ ಅಧ್ಯಯನ ಮಾಡುವವರ ವಾರ್ಷಿಕ ವರದಿಯ ಅಭಾವ ಈ ಏರುಪೇರುಗಳಿಗೆ ಕಾರಣ. ಸರ್ವ ಸಮಾನ ಶೈಕ್ಷಣಿಕ ಅವಕಾಶ ಒದಗಿಸಲು ಶ್ರಮಿಸಲು ಬೇಕಾದ ದತ್ತಾಂಶದ ಆಧಾರದಲ್ಲಿ ಕಾರ್ಯ ನಿರತರಾಗುವುದು ಇದಕ್ಕೆ ಅವಶ್ಯ. ಶಿಕ್ಷಣದಲ್ಲಿ ಲಿಂಗ ವೈರುಧ್ಯಗಳನ್ನೂ, ಉಚ್ಚ ವಿಷಯಗಳ ಅಧ್ಯಯನದಲ್ಲಿರುವ ಅನಾವಶ್ಯಕ ಅಸಮಾನತೆಗಳನ್ನೂ ನಿವಾರಿಸಬಹುದು. ಬಿಟ್ಟುಹೋದ ಜಾತಿಗಳ ಪಂಗಡಗಳ ಮಕ್ಕಳಿಗಾದ ಅನ್ಯಾಯ ಈ ಸೋಮಾರಿತನದಿಂದಾಗಿ ಅಪಾರ. ಸರ್ವತೋಮುಖ ಸಾಮಾಜಿಕ ಅಭಿವೃದ್ಧಿಗೆ ಮಾರಕಪ್ರಾಯ. ತೆರೆದಿಟ್ಟ ಸಾಮಾಜಿಕ ಸಮಾನತೆಯ ಬಾಗಿಲು ಸರ್ವರ ಜೀವನಾಕಾಂಕ್ಷೆಗಳನ್ನು ಸದಾ ಎಚ್ಚರದಿಂದ ಇರಿಸುತ್ತದೆ. ಈ ಪರಿಸ್ಥಿತಿಯಲ್ಲಿ ವಿದ್ಯಾವಂತರಾಗಿ, ಉದ್ಯೋಗಸ್ಥರಾದವರನ್ನು ಈರ್ಷೆಯಿಂದ ಕಾಣುವುದು ಸಮಂಜಸವಲ್ಲ. ಅವರು ಸರಕಾರದ ಯೋಜನೆಗಳನ್ನಷ್ಟೆ ಸದುಪಯೋಗಪಡಿಸಿಕೊಂಡು ಸ್ವ ಸಹಾಯಕರಾದವರು. ಸಮಾನಾವಕಾಶ ಮಾಡಿಕೊಡದ ಸರ್ವತೋಮುಖ ಅಭಿವೃದ್ಧಿ ಸಾಧಿಸಲಾಗದ ಅಧಿಕಾರಸ್ಥರ ಸೋಲು ರಾಷ್ಟ್ರೀಯ ಮನೋಗತಕ್ಕೆ ಸರಿಹೊಂದಿರುವ ವಿಷಯ ಬಹಳ ಗಹನವಾದದ್ದು. ಈ ಸೋಲನ್ನು ತಕ್ಕ ಕಾಲದಲ್ಲಿ ಸರಿಪಡಿಸದ ಜವಾಬ್ದಾರಿ ಹಿಂದುಳಿದವರ ಸಂಸದರ ಮೇಲೂ, ಸಾಮಾನ್ಯ ಸಂಸದರ ಮೇಲೂ, ಇತರ ಎಲ್ಲ ಜನಪ್ರತಿನಿಧಿಗಳ ಮೇಲೂ ಏಕ ಪ್ರಕಾರವಾಗಿದೆ. ಇದೇ ಈ ಲೇಖನದ ಶೀರ್ಷಿಕೆಯಾಗಿದೆ. ಅವ್ಯಕ್ತ ಶಕ್ತಿ ವಿರುದ್ಧ ದಿಕ್ಕಿನಲ್ಲಿ ಚಲಿಸುತ್ತಿದೆ. ಕಾಲ ಮಿಂಚಿಲ್ಲ. ಉದ್ಯೋಗದಲ್ಲಿ ಜಾತೀವಾರು ಅಂಕಿ ಸಂಖ್ಯೆ ತೆಗೆದುಕೊಂಡು ಅಧ್ಯಯನ ಮಾಡಬೇಕು. ೧೯೭೬-೧೯೮೬ ಹಾಗೂ ೧೯೮೬-೧೯೯೬ರ ಅವಧಿಯ ಇತರೆ ಹಿಂದುಳಿದವರ ಕರ್ನಾಟಕ ಸರಕಾರದ ಉದ್ಯೋಗಿಗಳ ಅಧ್ಯಯನ ಹಿಂದುಳಿದವರ ಅಭಿವೃದ್ಧಿ ಹೇಗೆ ಸಾಗುತ್ತಿದೆ ಎಂಬುದನ್ನು ತೋರುವುದು. ಉದ್ಯೋಗ ವರ್ತುಲದಲ್ಲಿ ಅತ್ಯಂತ ಹಿಂದುಳಿದ ಅವನತಿಯ ಹಾದಿಯಲ್ಲಿರುವ ಜಾತಿಗಳು ಪ್ರಾತಿನಿಧ್ಯಕ್ಕಾಗಿ ಹಂಬಲಿಸುತ್ತಿರುವುದನ್ನು, ತಮ್ಮ ಹಕ್ಕುಗಳಿಗಾಗಿ ಹಾತೊರೆಯುತ್ತಿರುವುದನ್ನು ಪತ್ತೆ ಹಚ್ಚಬಹುದು.

ಕಡೆಯದಾಗಿ ಶಾಶ್ವತ ಹಿಂದುಳಿದ ವರ್ಗಗಳ ಆಯೋಗಗಳ ಕೊಡುಗೆ ಏನೆಂದರೆ ದೇಶಾದ್ಯಂತ-ರಾಜ್ಯಾದ್ಯಂತ ಪರ್ಯಟನೆ ಮಾಡಿ ಹಿಂದುಳಿದವರ ಪಟ್ಟಿಗೆ ಸೇರಬಯಸುವವರಿಂದ ಅಹವಾಲು ಸ್ವೀಕರಿಸುವ ಒಂದೇ ಪ್ರವೃತ್ತಿ. ಪಟ್ಟಿಗೆ ಸೇರಿಸುವ ಮತ್ತು ಪಟ್ಟಿಯಿಂದ ಕೈಬಿಡುವ ಅಧ್ಯಯನ ಮತ್ತು ಶಿಫಾರಸ್ಸು ಅದರ ಅನುಷ್ಠಾನ ದೂರವೇ ಉಳಿದಿದೆ. ಪಟ್ಟಿಯಿಂದ ತೆಗೆಯಲು ಎಷ್ಟೇ ರಾಜಕೀಯ ಕಾರಣಗಳು ಅಡ್ಡಿ ಬಂದರೂ ಎಷ್ಟೊಂದು ಜಾತಿ ಗುಂಪುಗಳು ಸಂಪೂರ್ಣವಾಗಿ ಅಭಿವೃದ್ಧಿಯಿಂದ ವಿಮುಖವಾಗಿವೆ ಎಂದು ಕಂಡುಕೊಂಡು ಕನ್ನಡಿ ಹಿಡಿಯಲು ರಾಜಕೀಯ ಮತಗಳಿಕೆಯ ಪ್ರಜಾಪ್ರಭುತ್ವ ಅಡ್ಡಿ ಬರಲಾರದು. ಕಾರಣ ಸ್ಪಷ್ಟ. ಸಮಗ್ರ ಭಾರತೀಯ ಇಚ್ಛಾಶಕ್ತಿ ಸಾಮಾಜಿಕ ನ್ಯಾಯದ ಬಗೆಗೆ ಹೊಂದಿರುವ ಶ್ರದ್ಧಾರಾಹಿತ್ಯ ಮನೋಭಾವನೆ. ಅಸ್ಪೃಶ್ಯತೆಯನ್ನೇ ಆಗಲೀ




ಮೀಸಲಾತಿ ಬಗೆಗಿನ ಈರ್ಷೆಯನ್ನೇ ಆಗಲೀ ಮೂಲೋತ್ಪಾಟನೆ ಮಾಡಲು ಶಕ್ಯವೇ? ಭಾಷಣಗಳಲ್ಲಿ ಸರಿ. ಆದರೆ ವರ್ತನೆಗಳಲ್ಲಿ ಅಜಗಜಾಂತರ. ಈ ವೈರುಧ್ಯವನ್ನು ಸರಿಪಡಿಸಬಲ್ಲ, ಪ್ರಚಲಿತವನ್ನು ಬದಲಿಸಬಲ್ಲ, ಸ್ವಾರ್ಥಕ್ಕಾಗಿ ಧುರೀಣತ್ವದ ಅಭಾವ, ಗೈರು. ಐವತ್ತು ವರ್ಷಗಳ ಇತಿಹಾಸದಲ್ಲಿ ಹರಿಜನಕೇರಿಗಳನ್ನು ಹಳ್ಳಿಗಳ ಮುಖ್ಯ ಭಾಗಗಳೊಂದಿಗೆ ಪ್ರಾದೇಶಿಕವಾಗಿಯಾದರೂ ಬೆಸೆಯುವ ಮಾತು ಬರಲೇ ಇಲ್ಲ. ಸಹಪಂಕ್ತಿ ಭೋಜನದ ಗುಟ್ಟು ಸುಪ್ತವಾಗಿದ್ದು ಬಿಸಿಯೂಟ ಯೋಜನೆಯೊಂದಿಗೆ ಅಲ್ಲಲ್ಲಿ ಸ್ಫೋಟಗೊಂಡಿತು. ಅಂತರಜಾತಿ ವಿವಾಹಗಳು ಅನುಕೂಲಸಿಂಧುವಾಗಿ ಪರಿಣಮಿಸಿ ಆದರ್ಶ ಮಾಯ. ಸಮೂಹ ಪೂಜೆ-ಪುನಸ್ಕಾರ ಖಾಲಿ ಉದ್ಘೋಷಗಳು. ಯಥಾಸ್ಥಿತಿಯನ್ನು ಪರಂಪರೆಯಂತೆ ಕಾಪಾಡಿಕೊಂಡು ಅವ್ಯವಸ್ಥೆಯ ಅಸಮಾನತೆಯಲ್ಲೇ ಅಲ್ಪ ಸ್ವಲ್ಪ ಅನುಸರಿಸಿಕೊಂಡು ಬದುಕುವ, ಪರಿಸ್ಥಿತಿಗೆ ಹೊಂದಿಕೊಳ್ಳುವ ಹುನ್ನಾರ ಸರ್ವಥಾ ಸಮಂಜಸವಲ್ಲ. ಇಂತಹ ಅಸಮಾನತೆಯ ಅವ್ಯವಸ್ಥೆಯನ್ನು ಸರಿಪಡಿಸುವುದು ಸರ್ವರ ಹೊಣೆ ಎಂಬ ಭಾವನೆ ಬೆಳೆಸಿ ಅಂತಾರಾಷ್ಟ್ರೀಯವಾಗಿ ನಾವೂ ಅಂತಃಸಾಕ್ಷಿಯುಳ್ಳ ಜನರೆಂದು ಸಾಬೀತುಪಡಿಸುವ ಅವಶ್ಯಕತೆ ಹಿಂದೆಂದಿಗಿಂತಲೂ ಜರೂರು ಆಗಬೇಕಾದ ಪರಿವರ್ತನಾ ಕೆಲಸ. ಹಿಂದುಳಿದ ವರ್ಗದವರ ಲೋಕಸಭಾ ವಿಧಾನಸಭಾ ಜನಪ್ರತಿನಿಧಿ ಮೀಸಲಾತಿ ಮಹಿಳಾ ಮೀಸಲಾತಿಯನ್ನೂ ಮುನ್ನಡೆಸುತ್ತದೆ. ನಮ್ಮ ಮಹಾನ್ ದೇಶಕ್ಕಿದು ಭಾರವಲ್ಲ. ಖಾನೇಷುಮಾರಿ ೨೦೦೧.

ಹತ್ತು ವರುಷಗಳಿಗೊಮ್ಮೆ ನಡೆಯುವ ಜನಸಂಖ್ಯಾ ಎಣಿಕೆ ಭಾರತದ ಮಹಾಸಾಧನೆ. ಈ ಎಣಿಕೆ ಕಾರ್ಯದಲ್ಲಿ ಪ್ರತಿ ಪ್ರಜೆಯ ಹೆಸರು ನಮೂದಾಗುತ್ತದೆ. ಹಾಗೆಯೇ ಪ್ರತಿ ಹೆಸರಿನ ಎದುರು ವಯಸ್ಸು, ಲಿಂಗ, ಉದ್ಯೋಗ, ವರಮಾನ ಇತ್ಯಾದಿ ವಿವರಗಳನ್ನು ಪಡೆದು ಬರೆಯುತ್ತಾರೆ. ಜೊತೆಗೆ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಪ್ರಜೆಗಳ ಹೆಸರಿನ ಎದುರು ಅವರು ಯಾವ ಜಾತಿಗೆ ಸೇರಿ ಪರಿಶಿಷ್ಟರಾದರೆಂದೂ ನಮೂದಿಸಲಾಗುತ್ತದೆ. ಹಾಗಾಗಿ ಅವರಲ್ಲಿ ಯಾವ್ಯಾವ ಜಾತಿಯವರು ಎಷ್ಟೆಷ್ಟು ಸಂಖ್ಯೆಯಲ್ಲಿದ್ದಾರೆ, ಯಾವ ಪರಿಸ್ಥಿತಿಯಲ್ಲಿದ್ದಾರೆ, ವಿದ್ಯಾಭ್ಯಾಸ ಮಟ್ಟ, ವಯಸ್ಸು, ಜೀವನ ವಿಧಾನ, ವರಮಾನ ಹೀಗೆ ಸರ್ವ ವಿವರಗಳಿರುತ್ತವೆ. ೨೦೦೧ರ ಜನಗಣತಿಯಲ್ಲಿ ಮನೆ, ಕಕ್ಕಸ್ಸು, ಟಿವಿ, ವಾಹನ ಇತ್ಯಾದಿ ಸರ್ವ ವಿವರಗಳಿರುತ್ತವೆ. ಈ ವ್ಯವಹಾರವನ್ನು ಶ್ರದ್ಧೆಯಿಂದ ಪರಿಷ್ಕರಿಸಿದರೆ ಅನುಸೂಚಿತರಲ್ಲಿ ಯಾವ ಯಾವ ಜಾತಿಗಳು ಯಾವ ಮಟ್ಟದಲ್ಲಿವೆ ಎಂಬುದು ಹೊರ ಬರುತ್ತದೆ. ಪರಿಶಿಷ್ಟರಲ್ಲಿ ಸಮಾನಾಂತರ ಅಭಿವೃದ್ಧಿಯ ಅಂಕಿಸಂಖ್ಯೆ ತಿಳಿಯಲೆಂದೇ ಇವರುಗಳ ಜಾತಿಯನ್ನು ಕಡ್ಡಾಯವಾಗಿ ಜನಸಂಖ್ಯಾ ಗಣತಿಯಲ್ಲಿ ಸೇರಿಸಲಾಗಿದೆ. ಆದರೆ ಜನಸಂಖ್ಯಾಗಣತಿ ಇಲಾಖೆಯ ಅಧಿಕಾರವರ್ಗ ಸಾಮಾನ್ಯ ಜನ ಮನೋಭಾವದಿಂದಾಗಿ ಆಲಸ್ಯ ತೋರಿ ಉದಾಸೀನತೆಯಿಂದ ಆ ಕೆಲಸ ಮಾಡದೆ ಅನುಸೂಚಿತ ಜಾತಿಯವರ ಸರ್ವತೋಮುಖ ಅಭಿವೃದ್ಧಿ ಕಾರ್ಯ ಕುಂಠಿತಗೊಂಡಿದೆ. ಜಾತಿ ಜಾತಿಗಳಲ್ಲಿನ ಏರುಪೇರು ಸಾಕಷ್ಟು ವೈಮನಸ್ಯ ಬೆಳೆಸಿದೆ. ಸಮಾನ ಅಭಿವೃದ್ಧಿ ಕಾರ್ಯದಿಂದ ಜಾತಿಗಳ ಮಧ್ಯದ ಗೋಡೆಗಳನ್ನು ಶಿಥಿಲಗೊಳಿಸಿ ಸಹಕಾರ ಮನೋಭಾವ ಬೆಳೆಸುವ ಬದಲು ಅಜ್ಞಾನದ ಕಂದಕಗಳೇ ಗಟ್ಟಿಗೊಂಡು ಪ್ರಜಾಸತ್ತೆಗೆ ಸಲ್ಲದ ರಾಜಕೀಯ ಅಂತರಜಾತಿ ಗಲಾಟೆಗಳು ಬೆಳೆದಿವೆ.

ಹೀಗೆ ಚಾಲ್ತಿಯಲ್ಲಿರುವ ಜಾತೀವಾರು ಜನಗಣತಿಯನ್ನು ಸಕಾರಣವಾಗಿ ಹಿಂದುಳಿದ ವರ್ಗದವರಿಗೂ ಒಳಪಡಿಸಬೇಕು. ಇಡೀ ದೇಶದಲ್ಲಿ ಎಷ್ಟೆಷ್ಟು ಕುಟುಂಬಗಳಿಗೆ ಎಷ್ಟು ಮನೆಗಳಿವೆ, ಇದರಲ್ಲಿ ಎಷ್ಟಕ್ಕೆ ಕಕ್ಕಸುಗಳಿವೆ, ಟಿವಿ – ವಾಹನಗಳಿವೆ, ಇತ್ಯಾದಿ. ವ್ಯಾಪಾರ ವಹಿವಾಟುಗಳಿಗೆ ಸಂಬಂಧಿಸಿದ ಪುಂಖಾನುಪುಂಖ ಅಂಕಿಸಂಖ್ಯೆಗಳನ್ನು ಸೇರಿಸಿ ಉತ್ಪಾದನಾ ಯೋಜನೆಗಳಿಗೆ ಸಹಾಯಕವಾಗುವಂತೆ ಈಗ ಆಗಿದೆ. ಕುಂಬಾರಿಕೆ, ಕಮ್ಮಾರಿಕೆ, ಅಕ್ಕಸಾಲಿಗ, ಬಡಿಗೇರ, ನೇಯ್ಗೆ, ದರ್ಜಿ, ಕ್ಷೌರಿಕ ಇತ್ಯಾದಿ ಹಲವು ವೃತ್ತಿಗಳು ಜಾತಿ ಆಧಾರವಾಗಿದ್ದು ಇವರ ಬವಣೆ ವಿವರವಾಗಿ ತಿಳಿಯುವುದು ಅತ್ಯವಶ್ಯಕ ಎಂಬ ಅರಿವಿಗಿಂತ ಇವರ ವಿವರಗಳನ್ನು ಜಾತೀವಾರಾಗಿ ತಿಳಿಯುವುದು ವೃಥಾ ಅನವಶ್ಯಕ ತೊಂದರೆ ಎಂದು ಜಾತಿಗಳ ದೆಸೆಯಿಂದಲೇ ಹಲವಾರು ಅನರ್ಹತೆ, ದಾಸ್ಯ, ಹಿಂಜರಿಕೆ, ಕೀಳರಿಮೆಗಳ ಸಂಪರ್ಕವೇ ಇಲ್ಲದವರು ತೀರ್ಮಾನಿಸಿ ಕೈಬಿಟ್ಟಿರುತ್ತಾರೆ. ಹಿಂದುಳಿದ ವರ್ಗಗಳ ರಾಜಕೀಯ ಮೀಸಲಾತಿ ಲೋಕಸಭೆ ವಿಧಾನಸಭೆಗಳ ಹೊರಗಿಟ್ಟಿರುವುದಕ್ಕೆ ರಾಷ್ಟ್ರೀಯ ಪ್ರಗತಿ ವಿರೋಧಿ ಮನೋಭಾವವೇ ಕಾರಣ. ಇದೊಂದು ಹಿನ್ನೆಡೆ. ಜಾತಿ ಬಿಟ್ಟು ಬಾಳಲು ದೇಶದಲ್ಲಿ ಸಾಧ್ಯವೇ? ಇಂತಹ ಪರಿಸ್ಥಿತಿಯಲ್ಲಿ ಈ ವಿಮುಖತೆಗೆ ಬೇರೆಯೇ ಕಾರಣಗಳಿರಬೇಕು. ಈ ದಿಸೆಯಲ್ಲಿ ಮುಂದುವರಿದವರು, ಪ್ರತಿಭಾ ವಂತರು, ಸತ್ಯವಂತರೂ, ನಿಸ್ವಾರ್ಥಿಗಳೂ ಆಗದೇ ಹೋಗಿದ್ದು ಮಹಾದುರಂತ.

ಸಿ. ಹೆಚ್. ಜಾಕೋಬ್ ಲೋಬೊ
೯೯೩, ೩ನೇ ಮೇನ್, ಹೊಸಕೆರೆಹಳ್ಳಿ ಬಡಾವಣೆ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಸೃಷ್ಟಿಯ ವಿಧಾನದಲಿ ನರನಂತೆ ನರನಿಲ್ಲ

ಡಾ|| ಎನ್. ಎಸ್. ಲೀಲಾ

"ಕರಾಗ್ರೇ ವಸತೇ ಲಕ್ಷ್ಮಿ..." ಹೀಗೆನ್ನುತ್ತಲೇ ಕೆಲವರ ಸುಪ್ರಭಾತ ಆರಂಭವಾಗುತ್ತದೆ. ನಂತರ "ನಿನ್ನ ಪಾದಾರವಿಂದಗಳಲ್ಲಿ ನಮಿಸುವೆವು ಕೈ ಹಿಡಿದು ನಡೆಸೆಮ್ಮನು", ಎಂಬ ಮೊರೆ ಇಡುತ್ತಾರೆ. ಭಗವಂತ ತನ್ನ ಅಭಯ ಹಸ್ತವನ್ನು ನೀಡುವ ಭಂಗಿಯಲ್ಲಿಯೇ ಅವನನ್ನು ಸೃಷ್ಟಿಸಿಕೊಂಡಿದ್ದಾರೆ. "ಹೆಜ್ಜೆಯ ಮೇಲೆ ಹೆಜ್ಜೆಯನಿಕ್ಕುತ..." ಎಂದೇ ಸಿರಿ ದೇವತೆಯನ್ನು ಪ್ರಾರ್ಥಿಸುತ್ತೇವೆ. "ಭಗವಂತ ಕೈಕೊಟ್ಟ ಯಾತಕ್ಕಂತ?..." ಎನ್ನುತ್ತಾ ವೇದಾಂತದ ಮಾತುಗಳನ್ನು ಸಹಜವಾಗಿ ಬಳಸುತ್ತೇವೆ. ಮಗು ಹುಟ್ಟಿದಾಗ "ರೂಪವಿಲ್ಲದಿದ್ದರೂ ಕೈ-ಕಾಲು ಗಟ್ಟಿಯಾಗಿದ್ದರೆ ಸಾಕೆಂದು" ಹಾರೈಸುತ್ತೇವೆ. ವಯಸ್ಸಾದಂತೆ ಮೃತ್ಯು ಭಯ ಆವರಿಸಿದಾಗ "ಕೈ-ಕಾಲು ಗಟ್ಟಿಯಾಗಿರುವಾಗಲೇ ಭಗವಂತಾ ಕರೆಸಿಕೊಳ್ಳಯ್ಯ" ಎಂಬ ಉದ್ಗಾರದ ಮಾತುಗಳೂ ಸರ್ವೇಸಾಮಾನ್ಯ. ನಿಶ್ಶಕ್ತಿಯಾದಾಗ ಕೈ-ಕಾಲು ಸೋತ ಅನುಭವ, ಭಯಭೀತರಾದಾಗ ಕೈ-ಕಾಲು ನಡುಗುವ ಅನುಭವ, ಮಕ್ಕಳನ್ನು ಬೆದರಿಸುವಾಗ ಕೈ-ಕಾಲು ಮುರೀತೀನಿ" ಅಥವಾ "ಕೈ-ಕಾಲು ಕಟ್ಟಿ ಕೂಡಿ ಹಾಕ್ತೀನಿ" ಎನ್ನುವಾಗ ತಂದೆ-ತಾಯಿಯರಿಗೆ ಸುಲಭವಾಗಿ ಸಿಗುವ ಅಂಗ ಕೈ-ಕಾಲುಗಳು. ಯಾರನ್ನಾದರೂ ಸ್ವಾಗತಿಸುವಾಗ ಮುಂದೆ ಚಾಚುವುದು ಕೈಯನ್ನು, ಬೀಳ್ಕೊಡುವಾಗ 'ಟಾ-ಟಾ' ಹೇಳಲು ಕೈ, ನೃತ್ಯದಲ್ಲಿ ಭಂಗಿಗಳನ್ನು ಪ್ರದರ್ಶಿಸಲು ಕೈ-ಕಾಲು, ಮೂಕಾಭಿನಯಕ್ಕೆ ಮುಂದಾಗುವುದೂ



ಕೈ-ಕಾಲು, ಇಂಗಿತಗಳನ್ನು ಸೂಚಿಸಲು ಬೆರಳೊಂದೇ ಸಾಕು. ಕೈ ಚಳಕ ಬಳಸಿ ಬೆಳಕು - ನೆರಳಿನ ಚಿತ್ರಣ ಬಿಡುವುದೇ ಒಂದು ಕಲೆ.

ಹೀಗೆ ಹೇಳುತ್ತಾ ಹೋದರೆ ಕೈ-ಕಾಲುಗಳಿಗೆ ಸಾಟಿಯುಂಟೇ ? ಹಿಂದೆ ಗೋವಾದಲ್ಲಿ ಪೋರ್ಚುಗೀಸರು ಆಳುತ್ತಿದ್ದಾಗ ಕಳ್ಳತನ ಮಾಡಿದವರ ಕೈಯನ್ನೇ ಕತ್ತರಿಸುತ್ತಿದ್ದರಂತೆ. ರಾಜ ಮಹಾರಾಜರು ತಪ್ಪಿತಸ್ಥರ ಕೈ-ಕಾಲು, ಕಿವಿ, ಮೂಗುಗಳನ್ನು ಕತ್ತರಿಸಿ ಗಡಿಪಾರು ಮಾಡುತ್ತಿದ್ದ ಸಂಗತಿ ಚರಿತ್ರೆಯಲ್ಲಿ ಸಿಗುತ್ತದೆ. ಕೆಲವು ರಾಜರುಗಳ ಆಡಳಿತದಲ್ಲಿ ಕಲಾಕಾರರ ಕೃತಿಗಳು ತಮಗೇ ಸೀಮಿತವಾಗಿರಬೇಕೆಂಬ ಸ್ವಾರ್ಥದಿಂದ ಅವರ ಕಾರ್ಯ ಮುಗಿಯುತ್ತಿದ್ದಂತೇ ಕೈ ಕತ್ತರಿಸುವ ಕ್ರೌರ್ಯವೂ ಇತಿಹಾಸದಲ್ಲಿದೆ. ಹೇಳುತ್ತ ಹೋದಂತೆ ಕೈ-ಕಾಲುಗಳ ಪುರಾಣಕ್ಕೆ ಮತ್ತಷ್ಟು ಕೈ-ಕಾಲುಗಳೇ ಹುಟ್ಟಿಕೊಳ್ಳಬಹುದು. ವೈದ್ಯರು ರೋಗಿಯನ್ನು ಪರೀಕ್ಷಿಸುವಾಗ ಮೊದಲು ನೋಡುವುದು ಹಸ್ತವನ್ನು, ಹಿಡಿಯುವದು ನಾಡಿಯನ್ನು. ದೇಹದ ವ್ಯವಸ್ಥಿತ ಸ್ಥಿತಿಗೂ 'ಕೈ'ಯೇ ಕೈಗನ್ನಡಿ.

ರುಂಡ, ಮುಂಡಗಳಂತೆ, ಕೈ ಮತ್ತು ಕಾಲುಗಳು ದೇಹದ ಅವಿಭಾಜ್ಯ ಅಂಗಗಳು. ಅವುಗಳಲ್ಲಿ ಕಂಡುಬರುವ ವ್ಯತ್ಯಾಸಗಳು ಮತ್ತು ಇತರ ಪ್ರಾಣಿಗಳಲ್ಲಿರುವಂತಹ ಹೋಲಿಕೆಗಳನ್ನು ಗಮನಿಸಿದಾಗ ಜೀವಿಯಿಂದ ಜೀವಿಗಳಿಗೇ ಅಲ್ಲದೇ ವ್ಯಕ್ತಿಯಿಂದ ವ್ಯಕ್ತಿಗೂ ಏನೆಲ್ಲಾ ವ್ಯತ್ಯಾಸಗಳಿವೆ ಎಂದು ಗುರುತಿಸಬಹುದು. ಈ ಅಂಗಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ನಮ್ಮ ಒಂದು ಹಸ್ತದಲ್ಲಿನ ಐದು ಬೆರಳುಗಳೇ ಸಮನಿರದಿರುವಾಗ, ಒಟ್ಟು ಜನಸಂಖ್ಯೆಯನ್ನು ಇಪ್ಪತ್ತರಿಂದ ಗುಣಿಸಿ ಬರುವ ಸಂಖ್ಯೆಗಿಂತಲೂ ಹೆಚ್ಚಿನ ವಿಭಿನ್ನತೆಗಳ ಮಹಾಪೂರವನ್ನೇ ಕಾಣಬಹುದೆಂದು ಊಹಿಸಬಹುದು. ವೈವಿಧ್ಯತೆಯೇ ವಿಶ್ವದ ವೈಚಿತ್ರ್ಯ.



ಚೋಟುಕಾಲು, ಹಲಬೆಟ್ಟುತನ, ಕೈಕೋರೆಯಿಂದ ಹುಟ್ಟಿದ ಮಗು

ಕೈ-ಕಾಲುಗಳ ಉದ್ದ, ಹಸ್ತದ ಆಕಾರ, ಬೆರಳುಗಳ ರಚನೆ, ಆಕಾರ, ಸಂಖ್ಯೆ, ಉಗುರುಗಳ ಆಕಾರ – ಹೀಗೆ ಪ್ರತಿಯೊಂದು ಅಂಶಗಳಲ್ಲೂ ಭಿನ್ನತೆಗಳನ್ನು ಪರೀಕ್ಷಿಸಿದರೆ ಪರಮಾಣುವಿನ ಹಂತದಲ್ಲಿ ಜೀವರಹಸ್ಯಗಳನ್ನು ಅರಿಯುವ ಸಾಹಸದ ಜಯಭೇರಿ ಘೋಷಿಸಿಕೊಂಡಿದ್ದರೂ, ಮಾನವನ ವಂಶವಾಹಿ ಅಕ್ಷರಮಾಲೆ ಸಿದ್ಧವಾಗಿದ್ದರೂ, ಅನೇಕ ಸವಾಲುಗಳಿಗೆ ಇನ್ನೂ ನಿರುತ್ತರವೇ ದೊರಕುವುದು.

ಕೈ-ಕಾಲುಗಳ ಅಂಗವಿಕಲತೆಗಳನ್ನು ಮೂರು ವಿಧವಾಗಿ ಪರಿಗಣಿಸಬಹುದು. (೧.) ಆನುವಂಶಿಕ ಮತ್ತು ಬೆಳವಣಿಗೆಯ ಕುಂಠಿತ ಕಾರಣಗಳು (೨.) ಅನಾರೋಗ್ಯ ಮತ್ತು ಅಪೌಷ್ಟಿಕತೆಯ ಕಾರಣಗಳು (೩.) ಅಪಘಾತಗಳಿಂದಾದುವು.

ಕೈ-ಕಾಲುಗಳಲ್ಲಿ ಐದು ಬೆರಳುಗಳಿರುವುದು ಸ್ವಾಭಾವಿಕ ಲಕ್ಷಣ. ನಿಮ್ಮ ಕುಟುಂಬದ, ಸ್ನೇಹಿತರ ಕೈ-ಕಾಲುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಒಂದು ಕ್ರಮಬದ್ಧ ಲಕ್ಷಣವಿಹುದೇ ಈ ಸೃಷ್ಟಿಯಲ್ಲಿ, ಎಂಬ ಪ್ರಶ್ನೆ ಏಳಬಹುದು. ಕೆಲವು ಕುಟುಂಬಗಳಲ್ಲಿ ಮೋಟು ಬೆರಳುಗಳು ಕಂಡುಬಂದರೆ ಮತ್ತೆ ಕೆಲವರಲ್ಲಿ ಬೆರಳು ಉದ್ದುದ್ದನೆಯಾಗಿ, ಮಿಗಿಲ್ತನವಾಗಿ ಕಂಡುಬರಬಹುದು. ಕೆಲವರಲ್ಲಿ ಬೆರಳುಗಳು ಕೂಡಿಕೊಂಡು 'ಕೂಡು ಬೆರಳ್ತನ' ಉಂಟಾಗಬಹುದು. ಕೆಲವರಿಗೆ ಐದು ಸಾಧಾರಣ ಬೆರಳುಗಳೊಂದಿಗೆ ಮಾಂಸದ ಮುದ್ದೆಯಂತಹ ಮತ್ತೊಂದು ಕಿರ್ಬೆರಳಿರಬಹುದು. ಹೆಬ್ಬೆರಳು ದೃಢವಾಗಿ ನೆಟ್ಟಗೆ ಕೆಲವರಲ್ಲಿ ನಿಲ್ಲಬಹುದಾದರೆ, ಮತ್ತೆ ಕೆಲವರಲ್ಲಿ ಕಮಾನಾಗಿರಬಹುದು. ಇನ್ನೂ ಕೆಲವರಲ್ಲಿ ಹೆಬ್ಬೆರಳನ್ನು ಸಂಪೂರ್ಣವಾಗಿ ಕೆಳಕ್ಕೆ ಬಾಗಿಸಬಹುದು. ಇದನ್ನು ಮಿಗಿಲು ಚಾಚಿಕೆ ಎನ್ನುತ್ತಾರೆ. ಹೊರಂಕ ಹೆಬ್ಬೆರಳು ಕೆಲವ ರಿಗಿದ್ದರೆ, ಒಳಂಕ ಹೆಬ್ಬೆರಳು ಇತರರಲ್ಲಿ ಕಾಣಬಹುದು. ಪಾದದ ಹೆಬ್ಬೆರಳು ಹೊರ ಭಾಗಕ್ಕೆ ಎಂದರೆ ಇನ್ನುಳಿದ ಕಾಲ್ಬೆರಳುಗಳ ಕಡೆ ಬಾಗಿರುತ್ತದೆ ಅಥವಾ ದೂರ ಬಾಗಿರುತ್ತದೆ.

ಮರಳಿನ ಮೇಲೆ ಅಥವಾ ಒದ್ದೆ ಪಾದದಲ್ಲಿ ನಡೆದಾಗ ಪಾದದ ಮುದ್ರೆ ಬೀಳುತ್ತದೆ. ಸಾಮಾನ್ಯವಾಗಿ ಬೆರಳುಗಳು ಮತ್ತು ಹಿಮ್ಮಡಿ ಪೂರ್ಣವಾಗಿ ಮುದ್ರಿತವಾಗಿ ಮಧ್ಯಭಾಗದ ಕಮಾನು ಮುದ್ರಿತವಾಗುವುದಿಲ್ಲ. ಆದರೆ ಕೆಲವರಲ್ಲಿ ಮಧ್ಯಭಾಗವೂ ಪೂರ್ಣವಾಗಿ ಮುದ್ರಿತವಾಗುವುದನ್ನು ಕಾಣಬಹುದು. ಅಂತಹವರ ಚಪ್ಪಲಿಗಳನ್ನು ಪರೀಕ್ಷಿಸಿದರೆ, ಅದು ಸಮವಾಗಿ ಸವೆದಿರುವುದನ್ನು ಕಾಣಬಹುದು. ಇಲ್ಲದಿದ್ದಲ್ಲಿ ಬೆರಳುಗಳ ಭಾಗ ಮತ್ತು ಹಿಮ್ಮಡಿ ಭಾಗ ಮಾತ್ರ ಹೆಚ್ಚು ಸವೆದು ಮಧ್ಯಭಾಗ ಹೊಸದರಂತೆಯೇ ಕಾಣುವುದು ಸಾಮಾನ್ಯ. ಇದನ್ನೇ ಚಪ್ಪಟೆ ಪಾದ ಎನ್ನುತ್ತೇವೆ. ವ್ಯಕ್ತಿ ನಿಂತಾಗ ಪಾದಗಳನ್ನು ಪಕ್ಕದಿಂದ ವೀಕ್ಷಿಸಿದರೆ ಸಾಮಾನ್ಯವಾಗಿ ಪಾದವು ಕಮಾನಿನಂತೆ ಬಾಗಿರುವುದನ್ನು ಕಾಣುತ್ತೇವೆ. ಚಪ್ಪಟೆ ಪಾದದವರಲ್ಲಿ ಅದು ಸಪಾಟಾಗಿರುವುದನ್ನು ಕಾಣಬಹುದು.

ಮೋಟು ಬೆರಳು, ಬಹು ಬೆರಳ್ತನ, ಕೂಡು ಬೆರಳ್ತನ, ಚಿಕ್ಕ ಕೈ-ಕಾಲು (ಮೆಲ್ಲೆಲು ರೂಪುಗೆಡಿಕೆ - Achondroplasia)













ಈ ಲಕ್ಷಣಗಳು ಒಂದೇ ಕುಟುಂಬದಲ್ಲಿ ಪ್ರಧಾನ ಗುಣವಾಗಿದ್ದು ಪೀಳಿಗೆಯಿಂದ ಪೀಳಿಗೆಗೆ ಹರಿದು ಬರಬಹುದು. ಎಡಚತನ ಗೌಣ ಗುಣವಾಗಿ ಕೆಲವು ಕುಟುಂಬಗಳಲ್ಲಿ ಆಗಾಗ ಕಾಣಬರಬಹುದು.

ಪೌರಾಣಿಕ ಮತ್ತು ಐತಿಹಾಸಿಕ ವ್ಯಕ್ತಿಗಳಲ್ಲಿ ಇಂತಹ ಅನೇಕ ಮಾದರಿಗಳನ್ನು ಉದಾಹರಿಸಬಹುದು. ಮಹಾಭಾರತದಲ್ಲಿ ಬರುವ ಕುಂತಳ ದೇಶದ ಮೇಧಾವಿ ಎಂಬ ಅರಸನ ಮಗ ಚಂದ್ರಹಾಸನಿಗೆ ಎಡಕಾಲಲ್ಲಿ ಆರು ಬೆರಳುಗಳಿದ್ದ ಉಲ್ಲೇಖ ಬರುತ್ತದೆ. ದುರಾದೃಷ್ಟ ವಶಾತ್ ತಂದೆ-ತಾಯಿಯರನ್ನು ಕಳೆದುಕೊಂಡ ಚಂದ್ರಹಾಸನನ್ನು ಮಂತ್ರಿಯಾದ ದುಷ್ಟಬುದ್ಧಿ ದುರಾಸೆಯ ಕಾರಣದಿಂದ ಸಾಯಿಸಲು ಕಟುಕರಿಗೆ ಹೇಳಿ ಕುರುಹು ಒಂದನ್ನು ತರಲು ಆಜ್ಞಾಪಿಸಿದಾಗ, ಕಟುಕರು ಕನಿಕರಗೊಂಡು ಅವನನ್ನು ಕೊಲ್ಲದೆ, ಅವನ ಹೆಚ್ಚಿನ ಬೆರಳನ್ನು ಮಾತ್ರ ಕತ್ತರಿಸಿ ಕುರುಹೆಂದು ಮಂತ್ರಿಗೆ ಒಪ್ಪಿಸುತ್ತಾರೆ. ಅಂದರೆ ಈ ಹೆಚ್ಚಿನ ಬೆರಳು ಚಂದ್ರಹಾಸನ ಪ್ರಾಣ ಕಾಪಾಡುವ ದ್ಯೋತಕವಾಯಿತು.

ಇಂಗ್ಲೆಂಡಿನ ದೊರೆಯಾದ ೮ನೇ ಹೆನ್ರಿಯ ಆರು ಹೆಂಡತಿಯರಲ್ಲಿ ಅನ್ನೆ ಬೊಲೆನ್ ಒಬ್ಬಳು. ಇವಳನ್ನು ಚಿತ್ರಿಸುವಾಗ ಚಿತ್ರಕಾರರು ಅವಳ ಕೈಗಳನ್ನು ಮುಚ್ಚಿಯೇ ತೋರಿಸುತ್ತಿದ್ದರು. ಆ ಗುಟ್ಟನ್ನು ವಿಜ್ಞಾನಿಗಳು ಅವಳ ಕೈನಲ್ಲಿ ಬೆರಳು ಮಿಗಿಲ್ತನವಿದ್ದ ಕಾರಣವೆಂದು ಪತ್ತೆ ಹಚ್ಚಿದ್ದಾರೆ.



ಜಪಾನಿನ ಒಟಾಟೇಕೆ

ಅಮೆರಿಕದ ಪ್ರಗತಿಶೀಲ ಅಧ್ಯಕ್ಷನೆಂದು ಹೆಸರು ಮಾಡಿದ ಅಬ್ರಹಾಂ ಲಿಂಕನ್ (೧೮೦೯-೧೮೬೫), ಅಸಮರೂಪದ ಉದ್ದ ಕೈಕಾಲುಗಳನ್ನು ಹೊಂದಿದ್ದರಿಂದ ಅದನ್ನು ''ಮಾರ್ಫನ್ ಲಕ್ಷಣ''ವೆಂದು ಗುರುತಿಸಿ ವೈದ್ಯಕೀಯ ಪುಸ್ತಕದಲ್ಲಿ ದಾಖಲಿಸಲಾಗಿದೆ.

ಇತ್ತೀಚೆಗೆ ಪತ್ರಿಕಾ ಮತ್ತು ಟಿ. ವಿ. ಮಾಧ್ಯಮಗಳಲ್ಲಿ ಬೆರಳು ಮಿಗಿಲ್ತನದ ಅನೇಕ ಕುಟುಂಬಗಳ ಬಗೆಗೆ ವರದಿ ಮಾಡಲಾಗಿದೆ.

ಆನುವಂಶಿಕ ಗುಣಲಕ್ಷಣಗಳೇ ಅಲ್ಲದೆ ಭ್ರೂಣ ಬೆಳವಣಿಗೆಯ ವಿವಿಧ ಹಂತಗಳಲ್ಲಿ ಉಂಟಾಗುವ ಅನೇಕ ಕುಂದು ಕೊರತೆಗಳಿಂದ ಅಂಗವಿಕಲ ಮಕ್ಕಳು ಜನಿಸುವರು. ಲಟ್ಟೆಗಾಲು (Club foot), ಕೈ-ಕಾಲುಗಳ ಕೊರೆ, ಅರ್ಧಂಬರ್ಧ ಬೆಳೆದ ಕೈ ಕಾಲುಗಳು, ಹಸ್ತ ಮತ್ತು ಪಾದಗಳಿಲ್ಲದಿರುವುದು – ಹೀಗೆ ಹತ್ತು ಹಲವಾರು ನ್ಯೂನತೆಗಳೂ ಕಾಣಿಸಿಕೊಳ್ಳಬಹುದು. ಇವುಗಳಲ್ಲಿ ಕೆಲವು ವಂಶವಾಹಿಗಳ ಬಳುವಳಿಯಾದರೆ ಮತ್ತೆ ಕೆಲವು ಬಾಹ್ಯ ಮತ್ತು ಆಂತರಿಕ ಪ್ರಭಾವಗಳಿಂದ ಉಂಟಾಗಬಹುದು. ಅಂತಹುದೊಂದು ಗಾಬರಿಪಡಿಸುವ ಉದಾಹರಣೆ ಎಂದರೆ ೧೯೫೭ರಲ್ಲಿ ಗರ್ಭಿಣಿ ಸ್ತ್ರೀಯರ ವಾಕರಿಕೆ ತಡೆಗಟ್ಟಲು ವರದಾನವೆಂಬಂತೆ ಪರಿಚಯಿಸಿದ ಥಾಲಿಡೊಮೈಡ್ ಔಷಧಿಯ ಪರಿಣಾಮ. ಯಾವುದೇ ಆತಂಕವಿಲ್ಲದೆ ಈ ಔಷಧಿಯನ್ನು ಬಳಸಬಹುದೆಂದ ವೈದ್ಯರು ಅದನ್ನು ಗರ್ಭಿಣಿಯರಿಗೆ ಶಿಫಾರಸ್ಸು ಮಾಡಿದರು. ೧೯೬೧ರಲ್ಲಿ ಆಸ್ಟ್ರೇಲಿಯಾದ ಸಿಡ್ನಿ ಮತ್ತು ಪಶ್ಚಿಮ ಹ್ಯಾಂಬರ್ಗ್‌ನಲ್ಲಿ ಹುಟ್ಟಿದ ಅನೇಕ ಶಿಶುಗಳು ಕೈ-ಕಾಲುಗಳ ನ್ಯೂನತೆಯಿಂದ ಹುಟ್ಟಿದ ದಾಖಲೆಯಾಯಿತು. ಇದೇ ಫೋಕೋಮೆಲಿಯಾ. ಈ ಪದ ಗ್ರೀಕ್ ಪದವಾಗಿದ್ದು 'ಸೀಲ್ ಪ್ರಾಣಿಯ ಕಾಲು' ಎಂಬ ಅರ್ಥ ನೀಡುತ್ತದೆ. ಇಂತಹ ನ್ಯೂನತೆಗಳು ಥಾಲಿಡೋಮೈಡ್ ಬೆಳವಣಿಗೆಯ ಹಂತದಲ್ಲಿ ಮಾಡಿದ ಪ್ರಭಾವ ಎಂದು ತಿಳಿದುಬಂತು.

ಗರ್ಭದ ಬೆಳವಣಿಗೆಯಲ್ಲಿ ೧೫ರಿಂದ ೬೦ ದಿನಗಳ ಹಂತ ಅತಿ ಮಹತ್ವದ್ದು. ಈ ಕಾಲಾವಧಿಯಲ್ಲಿ ಭ್ರೂಣದ ರಚನೆ ಹಾಗೂ ಅಂಗಗಳ ಮೂಳೆಯು ರೂಪುಗೊಳ್ಳುತ್ತದೆ. ಜರ್ಮನ್ ಮೀಸಲ್ಸ್, ಕ್ಷ-ಕಿರಣ, ಕೆಲವೊಂದು ಔಷಧಿಗಳು, ಸಿಗರೇಟ್ ಸೇವನೆ – ಮುಂತಾದವು ಮಗುವಿನ ಬೆಳವಣಿಗೆಯ ವಿವಿಧ ಹಂತಗಳಲ್ಲಿ ಪ್ರಭಾವ ಬೀರಿ, ವಿಸ್ಮಯ ಸೃಷ್ಟಿ ಹಾಗೂ ಬೀಭತ್ಸತೆಯನ್ನು ತರಬಹುದು.



೬ ವರ್ಷದ ದೇವನಹಳ್ಳಿಯ ಕಿರಣ್

ಸೃಷ್ಟಿಯ ವಿಧಾನದಲ್ಲಿ ಸೊಟ್ಟುಗಳು ನೂರಾರು. ಇಂತಹ ನ್ಯೂನತೆಗಳಲ್ಲೂ ವಿಚಿತ್ರ ದಾಖಲೆಗಳನ್ನು ಮಾಡಿರುವ ಹತ್ತು ಹಲವಾರು ಉದಾಹರಣೆಗಳಿವೆ. ಜಪಾನ್‌ನ ಒಟಾಟೇಕೆಗೆ ಎರಡು ಕೈಗಳು ಹಾಗೂ ಮೊಣಕಾಲಿನ ಮುಂದಿನ ಭಾಗಗಳಿಲ್ಲ. ಈತ ಬ್ಯಾಸ್ಕೆಟ್ ಬಾಲ್ ಆಡಬಲ್ಲ, ಚರ್ಚಾ ಸ್ಪರ್ಧೆಗಳಲ್ಲಿ ತನ್ನ ಸಾಮರ್ಥ್ಯ ನಿರೂಪಿಸಬಲ್ಲ. ತನ್ನ ಆತ್ಮಚರಿತ್ರೆ ''ನೋ ವನ್ ಈಸ್ ಪರ್ಫೆಕ್ಟ್'' ಬರೆದು ದಾಖಲೆಯ ಮಾರಾಟವಾಗಿರುವುದನ್ನು ನೋಡಿದರೆ ಅಂಗವಿಕಲರು ಆತ್ಮವಿಶ್ವಾಸ ಬೆಳೆಸಿಕೊಳ್ಳಬಹುದಾಗಿದೆ. ದೇವನಹಳ್ಳಿಯ ೬ ವರ್ಷದ ಪೋರನಾದ ಕಿರಣ್ ಹಸ್ತವಿಲ್ಲದಿದ್ದರೂ ರೇಖಾಲೇಖದಲ್ಲಿ ವಿಸ್ಮಯ ಸೃಷ್ಟಿಯನ್ನೇ ಮಾಡಬಲ್ಲವನಾಗಿದ್ದಾನೆ. ದಾಖಲಿಸಿದ ಇಂತಹ ನೂರಾರು ಉದಾಹರಣೆಗಳು ಜಗತ್ತಿನಾದ್ಯಂತ ಸಿಗುತ್ತವೆ.

ವಂಶಪಾರಂಪರ್ಯ ಮತ್ತು ಕುಂಠಿತ ಭ್ರೂಣ ಬೆಳವಣಿಗೆಯೇ ಅಲ್ಲದೆ ಅನಾರೋಗ್ಯ ಮತ್ತು ಅಪೌಷ್ಟಿಕತೆಯಿಂದಲೂ ಕೈಕಾಲುಗಳು ಬಲಹೀನವಾಗುವ ಸಂಭವವಿದೆ. ಥೈರಾಯ್ಡ್ ಗ್ರಂಥಿಯು ಬಾಲ್ಯದಲ್ಲಿಯೇ ಕಡಿಮೆ ಕ್ರಿಯಾಶೀಲತೆ ತೋರಿದಲ್ಲಿ, ಮಗುವಿಗೆ ಕುಬ್ಜತನ ಉಂಟಾಗುತ್ತದೆ. ಅದೇ ಅದರ ಕ್ರಿಯಾಶೀಲತೆಯಲ್ಲಿ ಅಸಮತೋಲನ ಕಂಡುಬಂದರೆ ದೊಡ್ಡ ತಲೆ, ಸಣ್ಣ ಕೈ-ಕಾಲುಗಳು ಬೆಳೆದು ಬೌದ್ಧಿಕ ಮಟ್ಟದಲ್ಲೂ ಕುಂದು ಉಂಟಾಗಬಹುದು. ಪ್ರೋಟಿನ್ ಕೊರತೆಯ ಆಹಾರದಿಂದ ಮಕ್ಕಳಲ್ಲಿ ಕ್ವಾಶಿಯೋಕರ್ ಮತ್ತು ಮರಾಸ್‌ಮಸ್ ಎಂಬ ಕಾಯಿಲೆಗಳು ಬರಬಹುದು. ಈ ಕಾಯಿಲೆಯಲ್ಲಿ ಮೂಳೆ-ಚಕ್ಕಳದಂತಹ ಕೈ-ಕಾಲುಗಳು ಉಂಟಾದರೆ, ವಿಟಮಿನ್ ಡಿ ಕೊರತೆಯಿಂದ ಪಕ್ಷಿದೋಷ (ರಿಕೆಟ್ಸ್) ಉಂಟಾಗಬಹುದು. ರಿಕೆಟ್ಸ್‌ನಲ್ಲಿ ಕಾಲಿನ ಮೂಳೆಗಳು ಬಿಲ್ಲಿನಾಕಾರಕ್ಕೆ ಬಾಗಿರುವುದನ್ನು ಕಾಣಬಹುದು.

ಆಂದೋಳನೋಪಾದಿಯಲ್ಲಿ ನಡೆಯುತ್ತಿರುವ ಪಲ್ಸ್ ಪೋಲಿಯೋ ಕಾರ್ಯಕ್ರಮ ಜಗತ್ತನ್ನು ಪೋಲಿಯೋದಿಂದ ಮುಕ್ತಗೊಳಿಸುವ ನಿಟ್ಟಿನಲ್ಲಿ ಜರುಗುತ್ತಿದೆ. ಪೋಲಿಯೋ (ಪೋಲಿಯೋ ಮೈಲೈಟಿಸ್), ಎಂಟಿರೋ ವೈರಸ್‌ನಿಂದ ಸೋಂಕುರೋಗವಾಗಿ ಹರಡುವ ಕಾಯಿಲೆ. ಇದು ಹೆಚ್ಚಾಗಿ ಮಕ್ಕಳಲ್ಲೇ ಕಂಡುಬಂದು ಜೀವನ ಪರ್ಯಂತ ಅಂಗವಿಕಲರಾಗಿ ಬಳಲುವಂತೆ ಮಾಡುತ್ತದೆ. ಇಂದು ಬಳಕೆಯಲ್ಲಿರುವ ಬಾಯಿ ಮೂಲಕ ನೀಡುವ ಯಶಸ್ವಿ ''ಸ್ಯಾಬಿನ್'' ಲಸಿಕೆ ತಯಾರಿಸಿದ ರಷ್ಯಾದ ಆಲ್ಬರ್ಟ್ ಬ್ರೂಸ್ ಸ್ಯಾಬಿನ್ (೧೯೦೬- ೧೯೯೩) ಎಂಬ ವಿಜ್ಞಾನಿ ೧೯೮೩ರಲ್ಲಿ ಪೋಲಿಯೋ ರೋಗಕ್ಕೆ ಬಲಿಯಾಗಿ ಅಂಗವಿಕಲರಾದದ್ದು ಒಂದು ವಿಪರ್ಯಾಸವೇ ಸರಿ. ಪೋಲಿಯೋಪೀಡಿತ ಅಂಗವಿಕಲರಿಗೆ ವೈದ್ಯಕೀಯದ ಮತ್ತೊಂದು ಮಹತ್ವದ ಬಳುವಳಿಯಾಗಿ ಅಂಗಮರ್ದನ ಮತ್ತು ಕೃತಕ ಅಂಗಗಳ ಜೋಡಣಾ ಕಲೆಯೂ ಬೆಳೆದುಬಂದು ವಿಜ್ಞಾನ ಕ್ಷೇತ್ರದಲ್ಲಿ ಹೊಸ ಹೊಸ ಸಂಶೋಧನೆಗಳಿಗೆ ಎಡೆ ಮಾಡಿಕೊಟ್ಟಿದೆ.

ಕೃತಕ ಅಂಗಗಳ ಅಳವಡಿಕೆ ಅಂಗವಿಕಲರಿಗೆ ವರದಾನವಾಗಿ ಅವುಗಳನ್ನು ಕೊಟ್ಟವರು ಹೊರಾಂಗಣ ಕ್ರೀಡೆ, ನರ್ತನಗಳನ್ನು ಸಹಜವಾಗಿಯೇ ಮಾಡಬಹುದಾದಷ್ಟು ತಂತ್ರಜ್ಞಾನ ಬೆಳೆದಿದೆ.

ಸಕ್ಕರೆ ಕಾಯಿಲೆಯಿಂದ ಬಳಲುವವರು ತಮ್ಮ ಪಾದಗಳ ಆರೈಕೆ ಮತ್ತು ರಕ್ಷಣೆ ಮಾಡಿಕೊಳ್ಳುವುದು ಅನಿವಾರ್ಯ.



ಯಾವುದೇ ಗಾಯ ಹಾಗೂ ಜೀವಾಣು ಸೋಂಕುಗಳಿಂದ ಅಂಗಾಂಶಗಳು ಕೊಳೆತು (gangrene) ಕಾಲು ಕಳೆದು ಕೊಂಡಿರುವ ಉದಾಹರಣೆಗಳು ಸಾಕಷ್ಟು ಸಿಗುವುದರಿಂದ ಈ ದಿಶೆಯಲ್ಲಿ ಹೆಚ್ಚಿನ ಕಾಳಜಿ ವಹಿಸಿಕೊಳ್ಳುವುದು ಅಗತ್ಯ.

ಕುಷ್ಠ ರೋಗದ ಲಕ್ಷಣಗಳಲ್ಲಿ ನರಗಳ ದೌರ್ಬಲ್ಯದಿಂದ ಮುಂಗಾಲು, ಮುಂಗೈ, ಕಾಲು ಮತ್ತು ಕೈಬೆರಳುಗಳು ಕಾರ್ಯ ಹೀನವಾಗಿ ವಿಕೃತಗೊಳ್ಳುವುದನ್ನೂ ಕಾಣಬಹುದು. ಆದರೆ ಇಂದು ಸೂಕ್ತ ಚಿಕಿತ್ಸೆಯಿಂದ ಇದನ್ನು ತಡೆಗಟ್ಟಬಹುದಾಗಿದೆ.

ಫೈಲೇರಿಯಾ ಎಂಬ ಪರಾವಲಂಬಿ ಹುಳುವಿನಿಂದ ''ಆನೆ ಕಾಲು ರೋಗ'', ಅತಿ ಹೆಚ್ಚಾಗಿ ಸಮುದ್ರ ತೀರವಿರುವ ಪ್ರದೇಶಗಳಲ್ಲಿ ಕಾಣಬರುತ್ತದೆ. ಈ ಹುಳುವು ಹಾಲ್ರಸದ ಪ್ರವಹನೆಗೆ ಅಡ್ಡಿ ಮಾಡುವುದರಿಂದ ಹೆಚ್ಚಾಗಿ ಕಾಲಿನ ಭಾಗಗಳು ಕೊಳೆಯುತ್ತಾ ಊದಿಕೊಳ್ಳುವುದು.


ಲಟ್ಟೆಗಾಲು

ರೋಗ-ರುಜಿನಗಳಲ್ಲದೇ ಅಪಘಾತಗಳಿಂದ ಕೈಕಾಲು ಕಳೆದುಕೊಳ್ಳುವ ಸಾಧ್ಯತೆಗಳೂ ಇವೆ. ಇದೆಲ್ಲಕ್ಕಿಂತ ಮಾನವನ ಚಟುವಟಿಕೆಗಳಿಂದ ಉಂಟಾಗುವ ಪರಿಸರ ಮಾಲಿನ್ಯದಿಂದ ಕೈಕಾಲುಗಳ ಮೇಲೆ ಆಗುವ ಗಾಬರಿ ಹುಟ್ಟಿಸುವ ಭೀಕರ ಪ್ರಕರಣವನ್ನು ಇತ್ತೀಚೆಗೆ ವಿಶ್ವ ಆರೋಗ್ಯ ಸಂಸ್ಥೆ ನಡೆಸಿದ ವೀಕ್ಷಣೆ ವರದಿ ಮಾಡಿದೆ. ಪಶ್ಚಿಮ ಬಂಗಾಳ ಮತ್ತು ಬಾಂಗ್ಲಾದೇಶದಲ್ಲಿನ ಅನೇಕ ಹಳ್ಳಿಗಳಲ್ಲಿ ಕೊಳವೆ ಬಾವಿಗಳ ನೀರಿನಲ್ಲಿ ಆರ್ಸೆನಿಕ್ ಎಂಬ ರಾಸಾಯನಿಕ ವಸ್ತುವಿನ ಪ್ರಮಾಣ ನಿಗದಿಯಾದ ಒಂದು ಲೀಟರಿನಲ್ಲಿ ೫೦ ಮೈಕ್ರೋ ಗ್ರಾಂ ಗರಿಷ್ಠ ಮಿತಿಗಿಂತ (೧ಗ್ರಾಂನ ೧,೦೦,೦೦೦ ಒಂದು ಭಾಗ, ಒಂದು ಮೈಕ್ರೋ ಗ್ರಾಂ) ಅಧಿಕವಾಗಿದ್ದು, ಇದನ್ನು ಸೇವಿಸುವ ಬಡಹಳ್ಳಿಯ ಜನರು ''ಕಡುಕೊಂಪರಕೆ ಚರ್ಮ'' (Hyperkeratosis)ದ ಕಾಯಿಲೆಯಿಂದ ಬಳಲು ವಂತಾಗಿದೆ. ಪಶ್ಚಿಮ ಬಂಗಾಳದ ನಾಡಿಯಾ ಗ್ರಾಮದಲ್ಲಿ ೧೯೬೦ರಲ್ಲಿ ಬೋರ್‌ವೆಲ್‌ಗಳನ್ನು ತೋಡಿದಾಗ ಅದರಿಂದ ಬಂದ ಹೆಚ್ಚು ಆರ್ಸೆನಿಕ್ ಬೆರೆತ ನೀರನ್ನು ಕುಡಿದು ಕಂಗಾಲಾದವರು, ''ಭೂತದ ಚೇಷ್ಟೆ'' ಎಂದು ಗಾಬರಿಗೊಂಡು ಹಳ್ಳಿಯನ್ನೇ ತೊರೆದ ನಿದರ್ಶನವಿದ್ದರೂ ಕಾಳಜಿ ವಹಿಸದೆ, ನೀರಿನ ಗುಣಮಟ್ಟ ಪರೀಕ್ಷಿಸದೆ ಬಾಂಗ್ಲಾದೇಶದ ೪೨ ಮತ್ತು ಪಶ್ಚಿಮಬಂಗಾಳದ ೯ ತಾಲ್ಲೂಕುಗಳಲ್ಲಿನ ಸುಮಾರು ೯೮೫ ಹಳ್ಳಿಗಳಲ್ಲಿ ಆರ್ಸೆನಿಕ್ ಪ್ರಭಾವ ಬೀರಿರುವ ವರದಿಗಳು ಸಿಕ್ಕಿವೆ. ಅಲ್ಲಿಯ ಜನರ ಕೂದಲು, ಉಗುರು, ಮೂತ್ರ ಪರೀಕ್ಷೆಗಳಿಂದ ಈ ಅಂಶ ಬೆಳಕಿಗೆ ಬಂದಿರುವುದು ಎಚ್ಚರಿಕೆಯ ಗಂಟೆಯಾಗಿ ಪರಿಣಮಿಸಲಿ ಎಂಬುದೇ ಆಶಯ. ಇಲ್ಲೆಲ್ಲಾ ಆರ್ಸೆನಿಕ್ ಹೆಚ್ಚಳಕ್ಕೆ ಅನಿವಾರ್ಯವಲ್ಲದ ಮಾನವ ನಿರ್ಮಿತ ಪರಿಸರ ಮಾಲಿನ್ಯವೇ ಕಾರಣ.

ಕರ್ನಾಟಕ-ಕೇರಳ ಗಡಿಯಲ್ಲಿರುವ ಪಡ್ರೆ ಹಳ್ಳಿಯ ಕತೆಯೂ ಚಿಂತಾಜನಕವಾಗಿದೆ. ಎಂಡೋಸಲ್ಫಾನ್ ಎಂಬ ಕೀಟ ನಾಶಕದ ಸಿಂಪಡಿಕೆ ಅನೇಕ ಕಾಯಿಲೆಗಳನ್ನು ಆಹ್ವಾನಿಸಿರು ವುದಲ್ಲದೆ ಹುಟ್ಟಿನಲ್ಲೇ ವಿಕೃತಿಗಳನ್ನೂ ಉಂಟು ಮಾಡುತ್ತಿದೆ. ಏಡಿ, ನಳ್ಳಿಗಳ ಉಗುರುಗಳಂತೆ (Lobster Claw foot) ಕಾಣುವ ಕೈ ಬೆರಳುಗಳು ಇಂತಹುಗಳಲ್ಲೊಂದು.

ಹೀಗೆ ವಂಶಪಾರಂಪರ್ಯದ ಕೊಡುಗೆಯೇ ಅಲ್ಲದೆ ನಾವೇ ಸೃಷ್ಟಿಸಿಕೊಂಡಿರುವ ಬದುಕಿನ ಆಯಾಮಗಳ ಕಾರಣ ವಾಗಿ ಮುಂದಿನ ಪೀಳಿಗೆಗಳಲ್ಲಿ ಬಗೆ ಬಗೆಯ ಆಕಾರ ವಿಕಾರ ಗಳನ್ನು ಕೇವಲ ಕೈ-ಕಾಲುಗಳಲ್ಲಿಯೇ ಪರಿಪರಿ ವಿಧಗಳಲ್ಲಿ ಸೃಷ್ಟಿಸ ಬಹುದಾದಲ್ಲಿ ಇತರ ಅಂಗಗಳ ವೈವಿಧ್ಯತೆಗಳನ್ನು, ಪರಿಣಾಮಗಳನ್ನು ಊಹಿಸಲೂ ಸಾಧ್ಯವಾಗಲಾರದು.

ಬೆರಳುಗಳಲ್ಲಿನ ಶಂಕು, ಚಕ್ರ, ಕಮಾನುಗಳನ್ನು ಗುರುತಿಸಬಹುದಾದರೆ, ಅದು ಪ್ರತಿ ವ್ಯಕ್ತಿಗೂ ಭಿನ್ನ. ಆದ್ದರಿಂದ ಹೆಬ್ಬೆಟ್ಟಿನ ಗುರುತೇ ಸಹಿ ಮಾಡುವುದಕ್ಕಿಂತ ಕ್ಷೇಮವಾದ ಚಿಹ್ನೆ, ಏಕೆಂದರೆ ಅದನ್ನು ಯಾರೂ ಫೋರ್ಜರಿ ಮಾಡಲಾರರು. ಸ್ವಂತಿಕೆಯ ಸೂಚಕಕ್ಕೆ ನಮ್ಮ ಕಾಲಮೇಲೆ ನಿಲ್ಲಬೇಕೆಂಬ ವಿವರಣೆ ನೀಡುವುದು ಸಾಮಾನ್ಯ. ಹೀಗೆ ಅಂಗುಷ್ಠ ಮತ್ತು ಉಂಗುಷ್ಠಗಳೆರಡೂ ಮಾನವನಲ್ಲಿ ಭಿನ್ನತೆಯನ್ನೂ, ಸೃಷ್ಟಿಯ ವೈಚಿತ್ರ್ಯವನ್ನೂ, ಪರಿಸರ ಮಾಲಿನ್ಯದ ಚಿಹ್ನೆಯನ್ನೂ ಪ್ರತಿಬಿಂಬಿಸುವ ಅಂಗವಾಗಿ ಬೆಳೆದುಬಂದಿದೆ.

ಡಾ|| ಎನ್. ಎಸ್. ಲೀಲಾ
೧೦೫, ವೆಸ್ಟ್ ಪಾರ್ಕ್ ಅಪಾರ್ಟ್‌ಮೆಂಟ್, ೧೪-೩ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩

## ಆವಿಯಾಗುವ ತನಕ



ಸುತ್ತೆಲ್ಲಾ ಏಣಿ ಇಲ್ಲದ ಎತ್ತರದ ಗೋಡೆ
ಬದುಕು ನಿನ್ನದೇ ಹಸಿದ ವೇಳೆಗೆ
ಕಲಿತವರ ಕಲಿಯದವರ ನಿತ್ಯ ಉಸ್ತುವಾರಿ
ಕೈ ಕೆಸರು ಬಾಯಿ ಮೊಸರು ಈ ಮನೆಯ ಮಾತಲ್ಲ.

ಮುಗಿದರೂ ಆಯ್ತು ಮುಗಿಯದಿದ್ದರೂ ಆಯ್ತು
ಎಣಿಕೆಯ ದಿನ ಎಣಿಸದ ದಿನ ಈ ಕಲ್ಲು ಕೋಟೆಯೊಳಗೆ
ಕಲ್ಲು ತುಂಬಿದ ಮನ ನಿತ್ರಾಣವಾಗಿ ತೆವಳುತಿದೆ
ಮಾನವನಾಗುವವರೆಗೂ ಕಾಯಬೇಕಲ್ಲ

ಅಲ್ಲಿಲ್ಲ ಇಲ್ಲಿಲ್ಲ ನಮ್ಮ ನಡುವೆ ಇಲ್ಲವೇ ಇಲ್ಲ
ಬದುಕು ಬವಣೆಯ ಹಾದಿ ಹಾವು-ಏಣಿಯಾಟ
ಬದುಕುವ ಒದ್ದಾಣದ ನಿಟ್ಟುಸಿರು ಮೂಲೆ ಮೂಲೆಯಲ್ಲಿ
ಅದಕಾಗಿ ಅಪರಾಧಿಯಂತೆ ಕಾಲ ಕೊಲ್ಲಬೇಕಲ್ಲ.

ನಿತ್ಯ ಮನದಿ ನೋವಿನ ನೋವಿನ ಕದನ
ಕಲ್ಲಿನ ಕೋಟೆಯ ಸೆಳೆತಕ್ಕೆ ಸಾವಿರದ ನಮನ
ಭಯವೆ, ಅಭಯವೆ ಬದುಕಿನ ಪತನದ ತನನ
ಒಡ್ಡುಗಟ್ಟಿದ ಬದುಕು ಆವಿಯಾಗುವ ತನಕ

ಎಂ. ರವಿಕುಮಾರ್, ಸಮೇತನಹಳ್ಳಿ ಅಂಚೆ, ಕಾಡುಗುಡಿ ಮಾರ್ಗ, ಬೆಂಗಳೂರು-೬೭

# ವಿಶ್ವ ಮಹಿಳೆಯರ ಸ್ಥಾನ ಕುರಿತು ಅಂಕಿ ಅಂಶಗಳ ಚಿತ್ರಣ



ಡಾ॥ ಹೇಮಲತ ಎಚ್. ಎಂ.

**ಯಾವುದೇ ದೇಶದ ಜನರ, ಗುಂಪುಗಳ, ವರ್ಗಗಳ ಹಾಗೂ ವ್ಯಕ್ತಿಗಳ ಪರಿಸ್ಥಿತಿ, ಸ್ಥಾನ, ಜೀವನಮಟ್ಟ, ಪ್ರಗತಿ, ಹಿನ್ನೆಡೆ ಮುಂತಾದವುಗಳನ್ನು ಪರಿಮಾಣಾತ್ಮಕ ಅಥವಾ ಗುಣಾತ್ಮಕ ಅಂತಗಳಿಂದ ನೋಡಬಹುದು. ಪರಿಮಾಣಾತ್ಮಕ ಅಂತಗಳು ಹೆಚ್ಚು ನಿರ್ದಿಷ್ಟವಾದ ಸೂಚಿಗಳಾಗಿವೆ. ವಿಶ್ವದ ಮಹಿಳೆಯರ ಬಗ್ಗೆಯೂ ಜನಗಣತಿ, ಆರೋಗ್ಯ, ಶೈಕ್ಷಣಿಕ, ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿನ ಅಂಕಿ ಅಂತಗಳ ಮೂಲಕ ತಿಳಿದುಕೊಳ್ಳಬಹುದು.**

**ಮುಂದಿನ ೨೦ ವರ್ಷಗಳಲ್ಲಿ ಅಭಿವೃದ್ಧ ದೇಶಗಳಲ್ಲಿ ೧೫-೪೯ ವಯೋಮಿತಿಯ ಸ್ತ್ರೀಯರ ಸಂಖ್ಯೆ ಶೇ. ೧೧ ಕಡಿಮೆಯಾದರೆ ಅನಭಿವೃದ್ಧ ದೇಶಗಳಲ್ಲಿ ಶೇ. ೧೯ರಷ್ಟು ಹೆಚ್ಚಾಗಲಿದೆ. ಪೂರ್ವ ಏಷ್ಯಾ ಹಾಗೂ ಯೂರೋಪ್ ರಾಷ್ಟ್ರಗಳಲ್ಲಿ ಈ ವಯಸ್ಸಿನ ಸ್ತ್ರೀಯರ ಸಂಖ್ಯೆ ಕಡಿಮೆಯಾಗಲಿದೆ.**

**ಯಾ**ವುದೇ ದೇಶದ ಜನರ, ಗುಂಪುಗಳ, ವರ್ಗಗಳ ಹಾಗೂ ವ್ಯಕ್ತಿಗಳ ಪರಿಸ್ಥಿತಿ, ಸ್ಥಾನ, ಜೀವನಮಟ್ಟ, ಪ್ರಗತಿ, ಹಿನ್ನೆಡೆ ಮುಂತಾದವುಗಳನ್ನು ಪರಿಮಾಣಾತ್ಮಕ ಅಥವಾ ಗುಣಾತ್ಮಕ ಅಂಶಗಳಿಂದ ನೋಡಬಹುದು. ಪರಿಮಾಣಾತ್ಮಕ ಅಂಶಗಳು ಹೆಚ್ಚು ನಿರ್ದಿಷ್ಟವಾದ ಸೂಚಿಗಳಾಗಿವೆ. ವಿಶ್ವದ ಮಹಿಳೆಯರ ಬಗ್ಗೆಯೂ ಜನಗಣತಿ, ಆರೋಗ್ಯ, ಶೈಕ್ಷಣಿಕ, ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿನ ಅಂಕಿಅಂಶಗಳ ಮೂಲಕ ತಿಳಿದು ಕೊಳ್ಳಬಹುದು.

ವಿಶ್ವದ ಸರಾಸರಿ ಮಟ್ಟದಲ್ಲಿ ಮಹಿಳೆಯರ ಸ್ಥಿತಿ ಹೀಗಿದೆ : ೨೦೦೩ನೇ ಇಸವಿಯ ಅಂಕಿ ಅಂಶದಂತೆ ಮಹಿಳೆಯರ ಜನಸಂಖ್ಯೆ ೩,೦೮೩ ಮಿಲಿಯ. ಪ್ರತಿ ೧೦೦ ಪುರುಷರಿಗೆ ೯೯ ಮಹಿಳೆಯರಿದ್ದಾರೆ. ೧,೫೯೪ ಮಿಲಿಯ ಮಹಿಳೆಯರು ೧೫-೪೯ ವರ್ಷ ವಯೋಮಿತಿ ಯವರಾಗಿದ್ದಾರೆ (೫೨%). ಮಹಿಳೆಯರ ನಿರೀಕ್ಷಿತ ಜೀವಿತಾವಧಿ ೬೯ ವರ್ಷವಾಗಿದ್ದು ಪುರುಷರದಕ್ಕಿಂತ (೬೫) ಅಧಿಕವಾಗಿದೆ. ಫಲವತ್ತತೆ ದರವು ೨.೮ ಇದೆ. ಮುಂದಿನ ೨೦ ವರ್ಷಗಳಲ್ಲಿ ೧೫-೪೯ ವರ್ಷ ವಯಸ್ಸಿನ ಮಹಿಳೆಯರ ಸಂಖ್ಯೆ ೧೫೯೪ ರಿಂದ ೧೮೭೩ ಮಿಲಿಯಕ್ಕೆ ಏರಲಿದೆ.

ಸಂತಾನೋತ್ಪತ್ತಿ ಹಾಗೂ ಆರೋಗ್ಯವನ್ನು ಗಮನಿಸಿದರೆ ಶೇ. ೫೭ ಸ್ತ್ರೀಯರು ಹೆರಿಗೆ ಸಮಯದಲ್ಲಿ ವೈದ್ಯರು ಅಥವಾ ದಾದಿಯರ ಸೇವೆ ಪಡೆಯುತ್ತಾರೆ. ಶೇ. ೬೦ ಮಹಿಳೆಯರು ಗರ್ಭನಿರೋಧಕ್ಕೆ ಒಳಪಟ್ಟಿದ್ದಾರೆ. ೧ಲಕ್ಷ ಮಕ್ಕಳ ಜನನಕ್ಕೆ ೪೦೦ ಮಂದಿ ತಾಯಂದಿರು ಸಾವನ್ನಪ್ಪುತ್ತಾರೆ. ೧೫-೪೯ ವರ್ಷದ ಒಟ್ಟು ಜನಸಂಖ್ಯೆಯಲ್ಲಿ ಶೇ. ೧೧ ಜನರು ಏಡ್ಸ್ ಕಾಯಿಲೆಗೆ ತುತ್ತಾಗಿದ್ದಾರೆ. ಅವರಲ್ಲಿ ಮಹಿಳೆಯರ ಪ್ರಮಾಣ ಶೇ. ೪೮. ವಿಶ್ವದ ೧೬೮ ದೇಶಗಳಲ್ಲಿ ೬೦ ದೇಶಗಳು ಗರ್ಭಪಾತ ಕಾಯಿದೆ ಜಾರಿಗೊಳಿಸಿವೆ. ೫೫ ದೇಶಗಳು ಸಂಪೂರ್ಣವಾಗಿ ನಿಷೇಧಿಸಿವೆ. ಉಳಿದ ದೇಶಗಳು ವಿಶೇಷ ಸಂದರ್ಭಗಳಲ್ಲಿ, ತಾಯಿ ಮಗು ಆರೋಗ್ಯ ದೃಷ್ಟಿಯಿಂದ ಗರ್ಭಪಾತಕ್ಕೆ ಅನುಮತಿ ನೀಡುತ್ತವೆ. ಎಲ್ಲಿ ಗರ್ಭಪಾತವು ಕಾನೂನುಬದ್ಧವಾಗಿದೆಯೋ ಅಲ್ಲಿ ಫಲವತ್ತತೆಯ ದರ ಕಡಿಮೆಯಿರುವುದು ಕಂಡುಬರುತ್ತದೆ.

ಶೈಕ್ಷಣಿಕ ಕ್ಷೇತ್ರದಲ್ಲಿ ಸ್ತ್ರೀಯರ ಸಾಕ್ಷರತೆ ಪ್ರಮಾಣ ಶೇ. ೬೯ ಇದ್ದರೆ ಪುರುಷರದು ಶೇ. ೮೩. ವಿಶ್ವ ಹೆಣ್ಣುಮಕ್ಕಳ ಶಾಲಾ ದಾಖಲಾತಿಯಲ್ಲಿ ಹೆಚ್ಚಿನ ಪ್ರಗತಿ ಕಂಡುಬಂದಿಲ್ಲ. ೧೯೮೫ರಲ್ಲಿ ಅದು ಶೇ. ೪೩ ಇದ್ದುದು ೯೩-೯೭ರ ಅವಧಿಯಲ್ಲಿ ಶೇ. ೫೫ಕ್ಕೆ ಏರಿತು. ಇದೇ ಅವಧಿಯಲ್ಲಿ ಗಂಡುಮಕ್ಕಳ ಶಾಲಾ ದಾಖಲಾತಿ ಶೇ. ೫೪ರಿಂದ ೬೩ಕ್ಕೆ ಏರಿತು. ವಿಶ್ವದ ಒಟ್ಟು ಶ್ರಮಶಕ್ತಿಯಲ್ಲಿ ಮಹಿಳಾ ದುಡಿಮೆಗಾರರು ಶೇ. ೬೨ ಇದ್ದರೆ ಪುರುಷರು ಶೇ. ೮೭ರಷ್ಟಿದ್ದಾರೆ.

ಬೇರೆಲ್ಲ ಕ್ಷೇತ್ರಗಳಿಗಿಂತ ಅತ್ಯಂತ ಕಡಿಮೆ ಭಾಗವಹಿಸುವಿಕೆಯಿರುವ ಕ್ಷೇತ್ರವೆಂದರೆ ರಾಜಕೀಯ. ಜಗತ್ತಿನ ವಿವಿಧ ದೇಶಗಳ ಸಂಸತ್ತಿನಲ್ಲಿ ಮಹಿಳೆಯರ ಪ್ರಾತಿನಿಧ್ಯ ಶೇ. ೧೪ ಇದೆ. ಶೇ. ೧೧ರಷ್ಟು ಮಹಿಳೆಯರು ಸಚಿವಾಲಯ ಮತ್ತು ಇತರ ಅಧಿಕಾರ ಸ್ಥಾನಗಳನ್ನು ಹೊಂದಿದ್ದಾರೆ. ಕಳೆದ ದಶಕದ ಅಂಕಿ ಅಂಶಗಳಿಗೆ ಹೋಲಿಸಿದರೆ ಅತ್ಯಲ್ಪ ಪ್ರಮಾಣದಲ್ಲಿ ಸ್ತ್ರೀಯರ ರಾಜಕೀಯ ಭಾಗವಹಿಸುವಿಕೆ ಉತ್ತಮಗೊಂಡಿರುವುದು ಕಂಡುಬರುತ್ತದೆ.

ಇನ್ನು ಖಂಡವಾರು ಮತ್ತು ದೇಶವಾರು ಮಟ್ಟದಲ್ಲಿ ಮಹಿಳೆಯರ ಸ್ಥಾನವನ್ನು ಪರಿಶೀಲಿಸಿದರೆ, ಲಭ್ಯವಿರುವ ಒಟ್ಟು ೧೬೮ ದೇಶಗಳಲ್ಲಿ ಮಹಿಳೆಯರ ಸಂಖ್ಯೆ ಶೇ. ೫೦ಕ್ಕಿಂತ ಕಡಿಮೆಯಿದೆ. ಇವುಗಳಲ್ಲಿ ಹೆಚ್ಚಿನವು ಏಷ್ಯಾ ಹಾಗೂ ಆಫ್ರಿಕಾ ಖಂಡಗಳಿಗೆ ಸೇರಿವೆ. ಈ ದೇಶಗಳಲ್ಲಿ ಪ್ರತಿ ೧೦೦ ಪುರುಷರಿಗೆ ೯೫-೯೯ ಮಹಿಳೆಯರಿದ್ದಾರೆ. ಪಶ್ಚಿಮ ಏಷ್ಯಾದ ದೇಶಗಳಲ್ಲಿ ಸ್ತ್ರೀಪುರುಷ ಅನುಪಾತ ತುಂಬಾ ಕಡಿಮೆಯಿದೆ. ಯುನೈಟೆಡ್ ಅರಬ್ ಎಮಿರೇಟ್ಸ್‌ನಲ್ಲಿ ೧೦೦ ಪುರುಷರಿಗೆ ೫೨ ಮಹಿಳೆಯರು, ಖತಾರ್ ೫೬, ಬೆಹ್ರೆನ್ ೭೪, ಕುವೈತ್ ೭೨, ಒಮನ್ ೮೯ ಹಾಗೂ ಸೌದಿ ಅರೇಬಿಯದಲ್ಲಿ ೮೮ ಇದೆ. ಈ ದೇಶಗಳು ಆರ್ಥಿಕವಾಗಿ ಮುಂದುವರಿದಿದ್ದರೂ ಸ್ತ್ರೀಪುರುಷ ಅನುಪಾತ ಮಹಿಳೆಯರಿಗೆ ಪ್ರತಿಕೂಲವಾಗಿದೆ.

ಮುಂದಿನ ೨೦ ವರ್ಷಗಳಲ್ಲಿ ಅಭಿವೃದ್ಧ ದೇಶಗಳಲ್ಲಿ ೧೫-೪೯ ವಯೋಮಿತಿಯ ಸ್ತ್ರೀಯರ ಸಂಖ್ಯೆ ಶೇ. ೧೧ ಕಡಿಮೆಯಾದರೆ ಅನಭಿವೃದ್ಧ ದೇಶಗಳಲ್ಲಿ ಶೇ. ೧೯ರಷ್ಟು ಹೆಚ್ಚಾಗಲಿದೆ. ಪೂರ್ವ ಏಷ್ಯಾ ಹಾಗೂ ಯೂರೋಪ್ ರಾಷ್ಟ್ರಗಳಲ್ಲಿ ಈ ವಯಸ್ಸಿನ ಸ್ತ್ರೀಯರ ಸಂಖ್ಯೆ ಕಡಿಮೆಯಾಗಲಿದೆ.

ಜನಸಂಖ್ಯೆ ಹೆಚ್ಚಳಕ್ಕೆ ಕಾರಣವಾಗಿರುವ ಫಲವತ್ತತೆ ದರವು ಅಭಿವೃದ್ಧ ದೇಶಗಳಲ್ಲಿ ಕಡಿಮೆಯಿದೆ (೧.೬). ಅಭಿವೃದ್ಧಿಶೀಲ ದೇಶಗಳಲ್ಲಿ ೩.೨ ಇದೆ. ಅತಿ ಹೆಚ್ಚಿನ ಫಲವತ್ತತೆಯ ದರ ಸೋಮಾಲಿಯಾದಲ್ಲಿದೆ (೭.೩). ಹಾಂಗ್‌ಕಾಂಗ್‌ನಲ್ಲಿ ಅತಿ ಕಡಿಮೆಯಿದೆ (೧.೦). ಯೂರೋಪಿನ ದೇಶಗಳಲ್ಲಿ ಎರಡಕ್ಕಿಂತ ಕಡಿಮೆಯಿದೆ. ಆಫ್ರಿಕಾದ ದೇಶಗಳಲ್ಲಿ ೫ಕ್ಕಿಂತ ಹೆಚ್ಚಿದೆ. ಏಷ್ಯಾ, ದಕ್ಷಿಣ ಅಮೆರಿಕಾ ಹಾಗೂ ಲ್ಯಾಟಿನ್ ಅಮೆರಿಕಾಗಳಲ್ಲಿ ೨.೩ ಇದೆ. ವಿಶ್ವದ ಜನಸಂಖ್ಯಾ ಹೆಚ್ಚಳಕ್ಕೆ ಆಫ್ರಿಕಾ ಖಂಡದ ರಾಷ್ಟ್ರಗಳ ಕೊಡುಗೆ ಅಪಾರ.

ಮಹಿಳೆಯರ ಆರೋಗ್ಯ ಮಟ್ಟ ಹಾಗೂ ಸಂತಾನೋತ್ಪತ್ತಿಯನ್ನು ತೆಗೆದುಕೊಂಡರೆ ಅಭಿವೃದ್ಧ ದೇಶಗಳಲ್ಲಿ ಅಧಿಕ ಮಹಿಳೆಯರು (ಶೇ. ೭೩) ಗರ್ಭನಿರೋಧಕವನ್ನು ಬಳಸು ವುದು ಕಂಡುಬರುತ್ತದೆ. ಆದರೆ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಕೇವಲ ಶೇ. ೪೭ ಸ್ತ್ರೀಯರು ಗರ್ಭನಿರೋಧಕವನ್ನು ಬಳಸುತ್ತಿದ್ದಾರೆ. ಖಂಡವಾರು ತೆಗೆದುಕೊಂಡರೆ ಆಫ್ರಿಕಾದಲ್ಲಿ ಗರ್ಭನಿರೋಧಕದ ಬಳಕೆ ತುಂಬ ಕಡಿಮೆಯಿದೆ. ಅತ್ಯಧಿಕ ಫಲವತ್ತತೆ ದರ ಹೊಂದಿ ರುವ ನೈಜರ್‌ನಲ್ಲಿ ಕೇವಲ ಶೇ. ೪ರಷ್ಟು ಸ್ತ್ರೀಯರು ಸಂತಾನಹರಣಕ್ಕೊಳಪಟ್ಟಿದ್ದಾರೆ.

ಹೆರಿಗೆ ಸಮಯದಲ್ಲಿ ನುರಿತ ವೈದ್ಯರು ಹಾಗೂ ದಾಯಿಗಳ ಸೇವೆ ಪಡೆಯುವ ಮಹಿಳೆಯರ ಸಂಖ್ಯೆಯಲ್ಲಿ ಅಭಿವೃದ್ಧ ಹಾಗೂ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಅಗಾಧವಾದ ವ್ಯತ್ಯಾಸವಿದೆ. ಅವರ ಪ್ರಮಾಣ ೯೯% ಅಭಿವೃದ್ಧ ದೇಶಗಳಲ್ಲಿದ್ದರೆ ೫೦% ಅಭಿವೃದ್ಧಿಶೀಲ ದೇಶಗಳಲ್ಲಿದೆ. ಆಫ್ರಿಕಾದ ಕೆಲವು ದೇಶಗಳಲ್ಲಿ ಹೆರಿಗೆಗೆ ಆಸ್ಪತ್ರೆಗೆ ಹೋಗುವ ಸ್ತ್ರೀಯರ ಸಂಖ್ಯೆ ತುಂಬಾ ಕಡಿಮೆಯಿದೆ.

ಮಕ್ಕಳು ಹುಟ್ಟಿದಾಗ ತಾಯಂದಿರ ಮರಣದ ದರ ೧ ಲಕ್ಷಕ್ಕೆ ೨೧ ಅಭಿವೃದ್ಧ ದೇಶಗಳಲ್ಲಿದ್ದರೆ, ಅಭಿವೃದ್ಧಿಶೀಲ ದೇಶಗಳಲ್ಲಿ ೪೦೦ ಇದೆ. ಅತ್ಯಧಿಕ ತಾಯಂದಿರ

ಮರಣ ದರ ಆಫ್ರಿಕಾದ ದೇಶಗಳಲ್ಲಿ ಕಂಡುಬರುತ್ತದೆ. ಸಿಯೋರಾ ಲಿಯೋನೆ ೨೧೦೦, ರುವಾಂಡಾ ೨೩೦೦, ಬುರುಂಡಿ ೧೯೦೦, ಇಥಿಯೋಪಿಯಾ ೧೮೦೦, ಸೋಮಾಲಿಯಾ ೧೬೦೦ ಮತ್ತು ಸೂಡಾನ್ ೧೫೦೦ ತಾಯಂದಿರು ಮರಣ ಹೊಂದುತ್ತಾರೆ. ಅತಿ ಕಡಿಮೆ ತಾಯಂದಿರ ಮರಣದರ ಹೊಂದಿರುವ ದೇಶಗಳೆಂದರೆ ಗ್ರೀಸ್ ೨, ಕೆನಡಾ. ಫಿನ್‌ಲ್ಯಾಂಡ್, ಆಸ್ಟ್ರೇಲಿಯಾ ೬ ಇತ್ಯಾದಿ. ಏಷ್ಯಾದಲ್ಲಿ ಅತಿ ಹೆಚ್ಚು ತಾಯಂದಿರ ಮರಣ ದರ ಹೊಂದಿರುವ ದೇಶ ನೇಪಾಳ (೮೩೦).

ಮಹಿಳೆಯರ ಆರೋಗ್ಯ ಮತ್ತು ಜನನ ಪ್ರಮಾಣದ ಮೇಲೆ ಪ್ರಭಾವ ಬೀರುವ ಅಂಶವೆಂದರೆ ಗರ್ಭಪಾತ ನೀತಿ. ಮೊದಲೇ ಹೇಳಿದ ಹಾಗೆ ಗರ್ಭಪಾತವನ್ನು ನಿಷೇಧಿಸಿರುವ ದೇಶಗಳಲ್ಲಿ ಫಲವತ್ತತೆಯ ದರ ಅಧಿಕವಾಗಿದೆ. ಉದಾಹರಣೆಗೆ ನೈಜರ್, ಉಗಾಂಡ, ಸೋಮಾಲಿಯಾ ಹಾಗೂ ತಾನ್ಜೇನಿಯಾಗಳಲ್ಲಿ ಗರ್ಭಪಾತವನ್ನು ಸಂಪೂರ್ಣವಾಗಿ ನಿಷೇಧಿಸಲಾಗಿದೆ. ಇಲ್ಲಿ ಫಲವತ್ತತೆ ದರ ೬.೭ ಇದೆ. ಹೆಚ್ಚು ಕಡಿಮೆ ಎಲ್ಲಾ ಅಭಿವೃದ್ಧ ದೇಶಗಳು ಗರ್ಭಪಾತ ನೀತಿಯನ್ನು ಜಾರಿಗೊಳಿಸಿವೆ.

ಸಹರಾ ಆಫ್ರಿಕಾದಲ್ಲಿ ಜನರು ಬಹು ಲೈಂಗಿಕ ಚಟುವಟಿಕೆಯಲ್ಲಿ ತೊಡಗುವುದರಿಂದ ಏಡ್ಸ್ ವ್ಯಾಪಕವಾಗಿ ಹರಡುತ್ತಿದೆ. ಪುರುಷರಿಗಿಂತ ಚಿಕ್ಕ ವಯಸ್ಸಿನ ಹೆಣ್ಣು ಮಕ್ಕಳು ಜೈವಿಕ ಹಾಗೂ ಸಾಮಾಜಿಕ ಕಾರಣಗಳಿಂದಾಗಿ ಏಡ್ಸ್‌ಗೆ ಸುಲಭವಾಗಿ ತುತ್ತಾಗುತ್ತಾರೆ. ಶಾರೀರಿಕ ವ್ಯತ್ಯಾಸದಿಂದ ಇದರ ವೈರಸ್ ಲೈಂಗಿಕ ಸಂಪರ್ಕದಿಂದ ಸುಲಭವಾಗಿ ಪುರುಷರಿಂದ ಮಹಿಳೆಯರಿಗೆ ಹರಡುತ್ತದೆ. ಹುಡುಗಿಯರು ಹಾಗೂ ಚಿಕ್ಕ ವಯಸ್ಸಿನ ಸ್ತ್ರೀಯರು ಈಗಾಗಲೆ ಇದಕ್ಕೆ ತುತ್ತಾಗಿರುವ ವಯಸ್ಸಾದ ಗಂಡಸರೊಂದಿಗೆ ಲೈಂಗಿಕ ಸಂಪರ್ಕ ಹೊಂದುವುದರಿಂದ, ಅವರನ್ನು ವಿರೋಧಿಸಲು ಆಗದೆ, ಗರ್ಭನಿರೋಧಕವನ್ನು ಬಳಸಲು ಒತ್ತಾಯಿಸಲೂ ಆಗದೆ ಏಡ್ಸ್‌ಗೆ ಗುರಿಯಾಗುತ್ತಿದ್ದಾರೆ.

ಆರೋಗ್ಯ ತಜ್ಞರು, ಸ್ತ್ರೀಪುರುಷರ ನಡುವೆ ಇರುವ ಸಾಮಾಜಿಕ ಪಾತ್ರ, ವ್ಯತ್ಯಾಸ ಮತ್ತು ಸಂದರ್ಭಗಳನ್ನು ಬಳಸಿಕೊಂಡು ಏಡ್ಸನ್ನು ನಿವಾರಿಸಲು ಯತ್ನಿಸುತ್ತಿದ್ದಾರೆ. ಉದಾ : ಮಹಿಳೆಯರಿಗೆ ಲೈಂಗಿಕತೆಯ ವಿಚಾರದಲ್ಲಿ ಮಾತನಾಡುವ ಕೌಶಲ್ಯ ಕಲಿಸುವುದು, ಮಾಹಿತಿ ನೀಡುವುದು, ಇತ್ಯಾದಿ. ಮಹಿಳೆಯರು ಮಾನವ ಹಕ್ಕು ಹಾಗೂ ಲೈಂಗಿಕತೆಯ ಮೇಲೆ ನಿಯಂತ್ರಣ ಹೊಂದುವಂತೆ ಮಾಡಲು ಸರ್ಕಾರ ಹಾಗೂ ದಾನಿ ಸಂಸ್ಥೆಗಳು ಕಾರ್ಯಕ್ರಮ ಹಮ್ಮಿಕೊಂಡಿವೆ. ಜನರ ಜೀವನ ಮಟ್ಟ ಹಾಗೂ ಸ್ಥಾನವನ್ನು ಸೂಚಿಸುವ ಮತ್ತೊಂದು ಪ್ರಮುಖ ಅಂಶ ಶಿಕ್ಷಣ ಮಟ್ಟ. ಶಿಕ್ಷಣವು ಅಭಿವೃದ್ಧಿ ಸೂಚಿಯೂ ಆಗಿದೆ. ಇತ್ತೀಚಿನ ವಿಶ್ವಸಂಸ್ಥೆಯ ಸಮ್ಮೇಳನಗಳು ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರಿಕಗೊಳಿಸುವುದಕ್ಕೆ ಮತ್ತು ಹೆಣ್ಣು-ಗಂಡು ಮಕ್ಕಳ ಶಾಲಾ ದಾಖಲಾತಿಯ ನಡುವಿನ ಅಂತರವನ್ನು ಕಡಿಮೆ ಮಾಡುವುದಕ್ಕೆ ಕರೆ ಕೊಟ್ಟಿವೆ. ಸ್ತ್ರೀ ಶಿಕ್ಷಣವು ಮಹಿಳೆ ಮತ್ತು ಮಕ್ಕಳ ಆರೋಗ್ಯಮಟ್ಟವನ್ನು ಸುಧಾರಿಸುತ್ತದೆ ಹಾಗೂ ದೇಶದ ಆರ್ಥಿಕ ಬೆಳವಣಿಗೆಯನ್ನು ಕ್ಷಿಪ್ರಗೊಳಿಸುತ್ತದೆ ಎಂಬ ಅಂಶವನ್ನು ಅನೇಕ ಸರ್ಕಾರಗಳು ಕಂಡುಕೊಂಡಿವೆ. ಶಿಕ್ಷಿತ ಮಹಿಳೆಯರು ಆರೋಗ್ಯ ಕುಟುಂಬವನ್ನು ಹೊಂದಿರುತ್ತಾರೆ. ಏಕೆಂದರೆ ಅವರು ಶಿಕ್ಷಣಕ್ಕೆ ಆದ್ಯತೆ ನೀಡಿ ವಿವಾಹದ ವಯಸ್ಸನ್ನು ಮುಂದಕ್ಕೆ ಹಾಕುತ್ತಾರೆ; ನಿಧಾನವಾಗಿ ವಿವಾಹವಾಗಿ ಕುಟುಂಬ ಯೋಜನೆಯನ್ನು ಅಳವಡಿಸಿಕೊಂಡು ಸಣ್ಣ ಕುಟುಂಬಗಳನ್ನು ಹೊಂದಿರುತ್ತಾರೆ. ಜೊತೆಗೆ ಮನೆಕೆಲಸವನ್ನು ಕಡಿಮೆ ಮಾಡಿಕೊಂಡು ಹೊರಗೆ ದುಡಿಯುತ್ತಾ ಆರ್ಥಿಕ ಸ್ವಾವಲಂಬನೆಯನ್ನು ಹೊಂದಿರುತ್ತಾರೆ. ಅಶಿಕ್ಷಿತ ಮಹಿಳೆಯರಿಗಿಂತ ತಮ್ಮ ಆರೋಗ್ಯಕ್ಕೆ ಹೆಚ್ಚಿನ ಗಮನ ನೀಡುತ್ತಾರೆ.

೧೯೯೦ರ ದಶಕದಲ್ಲಿ ಜಗತ್ತಿನ ಎಲ್ಲಾ ದೇಶಗಳಲ್ಲಿ ಹೆಣ್ಣು ಗಂಡು ಮಕ್ಕಳ ಪ್ರಾಥಮಿಕ ಶಾಲಾ ಮಟ್ಟ ಅಧಿಕಗೊಂಡಿದೆ. ಪ್ರಾಥಮಿಕ ಮಟ್ಟದಲ್ಲಿ ಹೆಣ್ಣು ಗಂಡು ಮಕ್ಕಳ ದಾಖಲಾತಿ ಅಂತರ ಕಡಿಮೆಯಾಗಿದ್ದರೂ ಪ್ರೌಢಶಾಲಾ ಮಟ್ಟದಲ್ಲಿ ಈಗಲೂ ಹೆಚ್ಚಾಗಿದೆ. ಈ ಹಂತದಲ್ಲಿ ಹೆಣ್ಣು ಮಕ್ಕಳು ಶಾಲೆ ಬಿಡುವುದು ಹೆಚ್ಚು. ಗೃಹ ಕೆಲಸಗಳು, ಚಿಕ್ಕ ಮಕ್ಕಳನ್ನು ನೋಡಿಕೊಳ್ಳುವುದು, ಚಿಕ್ಕ ವಯಸ್ಸಿಗೆ ವಿವಾಹ, ಬೇಗ ಮಕ್ಕಳಾಗುವುದು ಹಾಗೂ ಶಿಕ್ಷಣ ಕುರಿತು ತಂದೆತಾಯಿಗಳ ಉದಾಸೀನ ಧೋರಣೆ ಹೆಣ್ಣು ಮಕ್ಕಳು ವಿದ್ಯಾಭ್ಯಾಸ ಮುಂದುವರಿಸುವುದಕ್ಕೆ ಅಡ್ಡಿಯಾಗಿವೆ.

ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಸಾಕ್ಷರತೆಯ ಪ್ರಮಾಣ ಸ್ತ್ರೀಯರದು ೬೬%, ಪುರುಷರದು ೭೬%. ಅಭಿವೃದ್ಧ ರಾಷ್ಟ್ರಗಳಲ್ಲಿ ಸ್ತ್ರೀಪುರುಷರ ಸಾಕ್ಷರತೆ ಅಂತರ ಕಡಿಮೆಯಿದೆ ೧.೩%. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಅದು ೧೦-೨೦%ರಷ್ಟಿದೆ. ಆಫ್ರಿಕಾದ ದೇಶಗಳಲ್ಲಿ ಸಾಕ್ಷರರ ಸಂಖ್ಯೆ ತುಂಬ ಕಡಿಮೆಯಿದೆ.

ಏಷ್ಯಾದಲ್ಲಿ ಕೆಲವೇ ದೇಶಗಳು ಶೇಕಡಾ ೯೫ಕ್ಕಿಂತ ಹೆಚ್ಚಿನ ಸ್ತ್ರೀ ಸಾಕ್ಷರತೆ ಸಾಧಿಸಿವೆ. ಅನೇಕ ದೇಶಗಳಲ್ಲಿ ಅದು ಶೇ. ೭೦ರಿಂದ ೮೦ ಇದೆ. ದಕ್ಷಿಣ ಮಧ್ಯ ಏಷ್ಯಾದ ರಾಷ್ಟ್ರಗಳಲ್ಲಿ ಸ್ತ್ರೀ ಸಾಕ್ಷರತೆ ತುಂಬ ಕಡಿಮೆಯಿದೆ (೪೫%). ಅತಿ ಕಡಿಮೆ ಸ್ತ್ರೀ ಸಾಕ್ಷರತೆ ಹೊಂದಿರುವ ದೇಶಗಳು ಪಾಕಿಸ್ತಾನ (೨೧%), ನೇಪಾಳ (೨೪%), ಮತ್ತು ಅಫಘಾನಿಸ್ತಾನ (೨೨%). ಯೂರೋಪಿನ ಎಲ್ಲಾ ದೇಶಗಳಲ್ಲೂ ಶೇ. ೯೮-೯೯ರಷ್ಟು ಸ್ತ್ರೀ ಸಾಕ್ಷರತೆಯಿದೆ.

ಹೆಣ್ಣು ಮಕ್ಕಳ ಶಾಲಾ ದಾಖಲಾತಿಯಲ್ಲೂ ಅಭಿವೃದ್ಧ





## ಉಡುಗೊರೆಯಾಗಿ 'ಹೊಸತು ಚಂದಾ'

'ಹೊಸತು' ನಿಮ್ಮ ಪತ್ರಿಕೆ. ನಿಮ್ಮದೇ ಭಾವನೆಗಳ ಬುತ್ತಿ. ನಮ್ಮ ಜೊತೆ ನೀವಿದ್ದೀರಿ ಎನ್ನುವ ಭರವಸೆ ನಮಗೆ ಪ್ರತಿ ತಿಂಗಳು 'ಹೊಸತು'ವನ್ನು ಮತ್ತಷ್ಟು ಕ್ರಿಯಾಶೀಲವಾಗಿ ರೂಪಿಸಲು ಸಾಧ್ಯವಾಗಿಸುತ್ತಿದೆ. ಹಾಗಾಗಿ, ದಿಕ್ಕು ತಪ್ಪುತ್ತಿರುವ ಇಂದಿನ ಕಲುಷಿತ ಸಾಮಾಜಿಕ ಪರಿಸರದಲ್ಲಿ ಓದುಗನಿಗೊಂದು ದಾರಿದೀಪವಾಗಿ 'ಹೊಸತು' ಮೂಡಿಬರುತ್ತಿದೆ. ಇದರಲ್ಲಿ ನಿಮ್ಮ ಸಹಕಾರ ದೊಡ್ಡದು. ಒಳ್ಳೆಯ ಓದು, ಉತ್ತಮ ಮುಖಚಿತ್ರ ಹಾಗೂ ಜನಪರ ಚಿಂತನೆಗಳಿಗೆ ಚಾಲನೆ ನೀಡುತ್ತ 'ಹೊಸತು' ಸದಭಿರುಚಿಯ ಪತ್ರಿಕೆಯಾಗಿ ರೂಪುಗೊಂಡು, ಸತ್ವಯುತ ಬರಹಗಾರರ ಬಳಗವನ್ನು ಹೊಂದಿದೆ.

ಆತ್ಮೀಯರೆ,

ನಿಮ್ಮ ಗೆಳೆಯರಿಗೆ/ಬಂಧುಗಳಿಗೆ ವಿವಿಧ ಕಾರ್ಯಕ್ರಮ/ಸಮಾರಂಭಗಳಲ್ಲಿ ಉಡುಗೊರೆ ನೀಡುತ್ತೀರಲ್ಲವೆ ? ಅಂಥದೊಂದು ಉಡುಗೊರೆ 'ಹೊಸತು' ಪತ್ರಿಕೆಯ ಚಂದಾ ಏಕಾಗಬಾರದು ? ಎಂಥ ಕ್ರಿಯಾತ್ಮಕ ಯೋಜನೆ ಅಲ್ಲವೇ ! ಪ್ಲಾಸ್ಟಿಕ್ ಪೇಪರ್ ನಡುವೆ ಸೊರಗಿ ಕುಳಿತ ಹೂಗುಚ್ಛ ನೀಡುವುದಕ್ಕಿಂತ ಸದಭಿರುಚಿಯ 'ಹೊಸತು'ವಿನಂತಹ ಪತ್ರಿಕೆ ನೀಡುವುದು ಒಳ್ಳೆಯ ಓದನ್ನು ಪ್ರಚುರಪಡಿಸುವ ನಿಟ್ಟಿನಲ್ಲಿ ನಿಮ್ಮ ಸದಾಶಯವನ್ನು ವ್ಯಕ್ತಪಡಿಸುತ್ತದಲ್ಲವೆ ? ಜೊತೆಗೆ ಅದು ನೀವು ನಮಗೆ ನೀಡಿದ ಪ್ರೋತ್ಸಾಹವೂ ಆಗುತ್ತದೆ.

ನೀವು ಮಾಡಬೇಕಾದ್ದಿಷ್ಟೆ..........

ನಿಮ್ಮ ಸ್ನೇಹಿತರಿಗಾಗಿ/ಬಂಧುಗಳಿಗಾಗಿ 'ಹೊಸತು ಚಂದಾ' ಉಡುಗೊರೆ ನೀಡಬೇಕೆಂದಿದ್ದಲ್ಲಿ ಆಕರ್ಷಕ ವರ್ಣರಂಜಿತ 'ಹೊಸತು ಚಂದಾ ಕೂಪನ್'ಗಳನ್ನು ನಮ್ಮಿಂದ ಖರೀದಿಸಿ. ಒಂದು ವರ್ಷದ ಚಂದಾ ಕೂಪನ್‌ಗೆ ರೂ. ೧೦೦, ಮೂರು ವರ್ಷದ ಕೂಪನ್‌ಗೆ ರೂ. ೨೫೦. ನಿಮಗೆ ಅಗತ್ಯವಿರುವಷ್ಟು ಕೂಪನ್‌ಗಳಿಗೆ ತಗಲುವ ಮೊಬಲಗನ್ನು ಎಂ.ಓ. ಅಥವಾ ಡಿ.ಡಿ. ಮೂಲಕ ಕೆಳಕಂಡ ವಿಳಾಸಕ್ಕೆ ಕಳಿಸಿ ಕೂಪನ್‌ಗಳನ್ನು ಪಡೆಯಿರಿ. ಈ ಕೂಪನ್‌ಗಳನ್ನು ಖರೀದಿಸಿದ ಆರು ತಿಂಗಳೊಳಗಾಗಿ ಅವನ್ನು ಉಡುಗೊರೆಯಾಗಿ ಬಳಸಿ. ನಿಮ್ಮಿಂದ ಉಡುಗೊರೆ ಪಡೆದವರು ತಮ್ಮ ಹೆಸರು, ವಿಳಾಸ ತುಂಬಿ ಅದನ್ನು ನಮಗೆ ಹಿಂದಿರುಗಿಸಿದ ಕೂಡಲೆ ಅವರ ಹೆಸರನ್ನು ನೋಂದಾಯಿಸಿ ಅವರಿಗೆ 'ಹೊಸತು' ಪತ್ರಿಕೆಯನ್ನು ಕಳಿಸಿಕೊಡಲಾಗುವುದು.

**ಹೊಸತು** ೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರಪಾರ್ಕ್ ಪೂರ್ವ, ಬೆಂಗಳೂರು-೫೬೦ ೦೦೧
ದೂರವಾಣಿ : ೨೨೦೩೫೮೮೦/೮೧/೮೨ E-mail : nkp@bgl.vsnl.net.in

ಗಮನಿಸಿ : 'ಹೊಸತು ಚಂದಾ' ಉಡುಗೊರೆ ಕೂಪನ್‌ಗಳು ಬೆಂಗಳೂರು, ಮಂಗಳೂರು, ಮೈಸೂರು, ಹಾಗೂ ಗುಲ್ಬರ್ಗಾ ನಗರಗಳಲ್ಲಿರುವ ನವಕರ್ನಾಟಕ ಪುಸ್ತಕ ಮಳಿಗೆಗಳಲ್ಲೂ ಲಭ್ಯ. ಉಡುಗೊರೆ ಪಡೆದವರು ಕೂಪನ್‌ಅನ್ನು ತುಂಬಿ ನೇರವಾಗಿ 'ಹೊಸತು' ಕಛೇರಿಗೆ ಕಳಿಸಬಹುದು, ಇಲ್ಲವೇ ಯಾವುದೇ ನವಕರ್ನಾಟಕ ಪುಸ್ತಕ ಮಳಿಗೆಯಲ್ಲಿ ನೀಡಬಹುದು.

ಹಾಗೂ ಅಭಿವೃದ್ಧಿಶೀಲ ರಾಷ್ಟ್ರಗಳ ನಡುವೆ ಅಗಾಧವಾದ ಅಂತರವಿದೆ. ಪೂರ್ವ ಆಫ್ರಿಕಾದಲ್ಲಿ ಹೆಣ್ಣು ಮಕ್ಕಳ ದಾಖಲಾತಿ ಪ್ರೌಢಶಾಲೆಯಲ್ಲಿ ಶೇ. ೧೩, ಗಂಡು ಮಕ್ಕಳದು ಶೇ. ೧೮; ಮಧ್ಯ ಆಫ್ರಿಕಾದಲ್ಲಿ ೧೯% ಮತ್ತು ೩೧%. ಸಬ್ ಸಹರಾ ಆಫ್ರಿಕಾದಲ್ಲಿ ಕ್ರಮವಾಗಿ ೨೩%, ೨೯% ಇದೆ. ಲ್ಯಾಟಿನ್ ಅಮೆರಿಕಾ ಮತ್ತು ಕೆರೇಬಿಯನ್ ದೇಶಗಳಲ್ಲಿ ಹೆಣ್ಣು ಮಕ್ಕಳ ದಾಖಲಾತಿ ಹೆಚ್ಚು ಕಡಿಮೆ ಸಮವಾಗಿದೆ. ಸರಾಸರಿ ಶೇ. ೫೫ರಷ್ಟಿದೆ. ಅರ್ಜೆಂಟೈನಾದಲ್ಲಿ ಮಾತ್ರ ಶೇ. ೮೧ ಹೆಣ್ಣು ಮಕ್ಕಳು ಶೇ. ೭೩ ಗಂಡು ಮಕ್ಕಳು ಪ್ರೌಢಶಾಲೆಯಲ್ಲಿ ದಾಖಲಾತಿ ಹೊಂದಿದ್ದಾರೆ. ಉರುಗ್ವೆಯಲ್ಲಿ ಹೆಣ್ಣು ಮಕ್ಕಳ ದಾಖಲಾತಿ ಅಧಿಕವಾಗಿದೆ ೯೦%. ಗಂಡು ಮಕ್ಕಳದು ೭೫%.

ವಿಶ್ವದಲ್ಲಿ ಸಂಪೂರ್ಣ ಸಾಕ್ಷರತೆಯನ್ನು ಸಾಧಿಸುವ ನಿಟ್ಟಿನಲ್ಲಿ ವಿಶ್ವಸಂಸ್ಥೆಯು ಸೇರಿದಂತೆ ಅಂತಾರಾಷ್ಟ್ರೀಯ ಮಟ್ಟದಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಹಾಗೂ ಮಕ್ಕಳ ದಾಖಲಾತಿ ಹೆಚ್ಚಿಸಲು ಗಮನ ಹರಿಸುತ್ತಿರುವುದು ಸಮಾಧಾನಕರ ಅಂಶವಾಗಿದೆ.

ಮಹಿಳೆಯರು ಪ್ರಮುಖ ಪಾತ್ರ ವಹಿಸುವ ಮತ್ತು ಅವರ ಸ್ಥಾನವನ್ನು ಸೂಚಿಸುವ ಮತ್ತೊಂದು ಕ್ಷೇತ್ರ ಆರ್ಥಿಕ ಕ್ಷೇತ್ರ. ಸ್ತ್ರೀಯರು ಆದಾಯ ಗಳಿಸುವಂತಾದರೆ, ಸಂಪನ್ಮೂಲಗಳ ಮೇಲೆ ನಿಯಂತ್ರಣ ಹೊಂದಿದರೆ ಅವರ ಆರ್ಥಿಕ ಪರಿಸ್ಥಿತಿ ಉತ್ತಮಗೊಳ್ಳುತ್ತದೆ. ಜಗತ್ತಿನ ಎಲ್ಲಾ ಪ್ರದೇಶಗಳಲ್ಲಿ ಮಹಿಳಾ ದುಡಿಮೆಗಾರರ ಸಂಖ್ಯೆ ಹೆಚ್ಚಾಗುತ್ತಿದೆ. ಕುಟುಂಬ ಯೋಜನೆಯ ಅಳವಡಿಕೆಯಿಂದ ಅಧಿಕ ಮಕ್ಕಳ ಪಾಲನೆಯಿಂದ ಮುಕ್ತಿಗೊಂಡ ಸ್ತ್ರೀಯರಿಗೆ ಹೊರಗೆ ದುಡಿಯಲು ಸಮಯ ದೊರಕುತ್ತಿದೆ. ದುಡಿಯುವ ಮಹಿಳೆಯರ ಕುರಿತು ಸಮಾಜದ ಮನೋಭಾವ ಕೂಡ ಬದಲಾಗುತ್ತಿದೆ. ಕೆಲವು ದೇಶಗಳಲ್ಲಿ ಕುಟುಂಬ ಮತ್ತು ಮಕ್ಕಳ ಪಾಲನೆಗೆ ಸಂಬಂಧಪಟ್ಟಂತೆ ಜಾರಿಗೆ ತಂದಿರುವ ಹೊಸ ನೀತಿಗಳು ಉದ್ಯೋಗಸ್ಥ ಮಹಿಳೆಯರಿಗೆ ಪೂರಕವಾಗಿ ಕೆಲಸ ಮಾಡುತ್ತಿವೆ. ಜೊತೆಗೆ ಆರ್ಥಿಕ ಬೆಳವಣಿಗೆ ಮತ್ತು ಸೇವಾ ಕ್ಷೇತ್ರಗಳ ಅಭಿವೃದ್ಧಿ (ಉದಾ: ಹಣಕಾಸು, ಸಂಪರ್ಕ ಹಾಗೂ ಪ್ರವಾಸೋದ್ಯಮ) ಮಹಿಳೆಯರ ಉದ್ಯೋಗಾವಕಾಶಗಳನ್ನು ಹೆಚ್ಚಿಸಿವೆ.

ಈ ಎಲ್ಲಾ ಬೆಳವಣಿಗೆ ಇತ್ಯಾತ್ಮಕವಾಗಿದ್ದರೂ ದುಡಿಮೆ ಕ್ಷೇತ್ರದಲ್ಲಿ ಮಹಿಳೆಯರು ಸಮಾನತೆ ಪಡೆದಿಲ್ಲ. ಅವರು ಹೆಚ್ಚಾಗಿ ಕಡಿಮೆ ಕೂಲಿಯ ಕೆಲಸಗಳಲ್ಲಿ ತೊಡಗಿದ್ದಾರೆ. ಪುರುಷರಿಗಿಂತ ಕಡಿಮೆ ದರ್ಜೆಯ ಕೆಲಸಗಳಲ್ಲಷ್ಟೇ ಅಲ್ಲ ನಿರುದ್ಯೋಗದಲ್ಲೂ ಅವರ ಪ್ರಮಾಣ ಅಧಿಕವಾಗಿದೆ. ಅಸಂಘಟಿತ ಕ್ಷೇತ್ರದಲ್ಲಿ ಸ್ತ್ರೀಯರು ಕೇಂದ್ರೀಕೃತವಾಗಿದ್ದಾರೆ. ಉದಾ : ಹಣ್ಣು ತರಕಾರಿ ಮಾರುವುದು, ಮನೆ ಕೆಲಸ, ಕಟ್ಟಡ ಕೆಲಸ, ಮನೆಯಲ್ಲಿ ಆಹಾರ ಸಂಸ್ಕರಣೆ, ಬೀಡಿ ಕಟ್ಟುವುದು – ಮುಂತಾದವುಗಳಲ್ಲಿ ಕಂಡುಬರುವ ಸ್ತ್ರೀಯರು ಅಲ್ಲಿ ಯಾವುದೇ ಸವಲತ್ತು ಸುರಕ್ಷತೆಗಳನ್ನು ಹೊಂದಿರುವುದಿಲ್ಲ. ಕಡಿಮೆ ವೇತನ ಪಡೆಯುತ್ತಾರೆ. ಉದ್ಯೋಗ ಸುರಕ್ಷತೆ, ಆರೋಗ್ಯ ವಿಮೆ, ರಜಾದಿನಗಳ ಸೌಲಭ್ಯವಿರುವುದಿಲ್ಲ. ಒಂದೇ ಕ್ಷೇತ್ರದಲ್ಲಿ ಒಂದೇ ತರಹದ ಕೆಲಸವನ್ನು ಮಾಡಿದರೂ, ಪುರುಷರಿಗೆ ಸಮನಾಗಿ ದುಡಿದರೂ ಅವರಿಗಿಂತ ಕಡಿಮೆ ಕೂಲಿ ಪಡೆಯುತ್ತಾರೆ. ಉದಾ : ಬಾಂಗ್ಲಾದೇಶದಲ್ಲಿ ಪುರುಷರ ವೇತನದ ಶೇ. ೫೦ರಷ್ಟನ್ನು ಸ್ತ್ರೀಯರು ಪಡೆಯುತ್ತಾರೆ. ಬ್ರೆಜಿಲ್ ೫೪%, ದಕ್ಷಿಣ ಕೊರಿಯಾ ೫೬%, ಥೈಲ್ಯಾಂಡ್ ೬೮%, ಮೆಕ್ಸಿಕೋ ೭೧%, ಈಜಿಪ್ಟ್ ೭೪% ಹಾಗೂ ಫ್ರಾನ್ಸ್‌ನಲ್ಲಿ ಪುರುಷರ ಕೂಲಿಯಲ್ಲಿ ಶೇ. ೭೯ರಷ್ಟನ್ನು ಸ್ತ್ರೀಯರು ಪಡೆಯುತ್ತಾರೆ.

ಈಗಲೂ ಕೆಲವು ಮಹಿಳೆಯರಿಗೆ ಹೊರಗಿನ ದುಡಿಮೆಯು ಸ್ಥಾನವನ್ನು ಉತ್ತಮಪಡಿಸಿಕೊಳ್ಳುವ ಸಾಧನವಾಗಿಲ್ಲ. ಬದಲಿಗೆ ಇಷ್ಟವಿಲ್ಲದ ಆರ್ಥಿಕ ಅಗತ್ಯ ಮತ್ತು ಹೊರೆಯಾಗಿದೆ. ಜೊತೆಗೆ ಸ್ತ್ರೀಯರು ತಮ್ಮ ಸಂತಾನೋತ್ಪತ್ತಿಯ ಅವಧಿಯಲ್ಲೆ ಹೊರಗೆ ದುಡಿಯಲು ಹೋಗುತ್ತಾರೆ. ಇದರಿಂದ ಮನೆ ಕೆಲಸ ಮತ್ತು ಹೊರಗಿನ ಕೆಲಸಗಳ ದ್ವಿಹೊರೆ ಹೊತ್ತುಕೊಂಡು ಪುರುಷರಿಗಿಂತ ಹೆಚ್ಚಾಗಿ ದುಡಿಯುತ್ತಾರೆ. ಇತ್ತೀಚಿನ ವಿಶ್ವಸಂಸ್ಥೆಯ ಸಮ್ಮೇಳನದಲ್ಲಿ, ದುಡಿಮೆ ಕ್ಷೇತ್ರದಲ್ಲಿ ಸ್ತ್ರೀಪುರುಷರ ನಡುವಿನ ತಾರತಮ್ಯವನ್ನು ಕಡಿಮೆಮಾಡಿ ಮಹಿಳೆಯರಿಗೆ ಹೆಚ್ಚಿನ ಸವಲತ್ತುಗಳನ್ನು ಮಾಡಿಕೊಡಬೇಕೆಂದು ಸರ್ಕಾರಗಳಿಗೆ ನಿರ್ದೇಶನ ನೀಡಿದೆ. ಉದಾ : ಹೆರಿಗೆ ಭತ್ಯೆ, ಶಿಶುಗಳ ಪಾಲನೆ, ಕೆಲಸದ ವೇಳೆಯಲ್ಲಿ ಬದಲಾವಣೆ ಇತ್ಯಾದಿ.

ಜಗತ್ತಿನಾದ್ಯಂತ ಸ್ತ್ರೀ ಯಜಮಾನಿಕೆಯಲ್ಲಿ ನಡೆಯುತ್ತಿರುವ ಕುಟುಂಬಗಳ ಸಂಖ್ಯೆ ಹೆಚ್ಚಾಗುತ್ತಿದೆ. ಅನೇಕ ಕಾರಣಗಳಿಂದ ಪುರುಷ ಯಜಮಾನಿಕೆಯ ಕುಟುಂಬಗಳಿಗಿಂತ ಸ್ತ್ರೀ ಯಜಮಾನಿಕೆಯ ಕುಟುಂಬಗಳು ಹೆಚ್ಚು ಬಡತನದಿಂದ ಕೂಡಿರುತ್ತವೆ. ದಕ್ಷಿಣ ಆಫ್ರಿಕಾ, ಉತ್ತರ ಅಮೆರಿಕಾ, ಕೆರೇಬಿಯನ್, ಮಧ್ಯ ಏಷಿಯಾ ಹಾಗೂ ಯೂರೋಪಿನ ಕೆಲವು ಭಾಗಗಳಲ್ಲಿ ನಾಲ್ಕನೇ ಒಂದು ಭಾಗಕ್ಕಿಂತ ಹೆಚ್ಚಿನ ಕುಟುಂಬಗಳನ್ನು ಸ್ತ್ರೀಯರೇ ನಡೆಸುತ್ತಿದ್ದಾರೆ. ವಿಚ್ಛೇದನ, ವಿಧವೆಯರು, ಕೆಲಸಕ್ಕಾಗಿ ಪುರುಷರ ವಲಸೆ, ಯುದ್ಧ ಮತ್ತು ಇತರ ಗಲಭೆಗಳ ಪ್ರಯುಕ್ತ ಸ್ತ್ರೀ ಯಜಮಾನಿಕೆಯ ಕುಟುಂಬಗಳು ಹುಟ್ಟಿಕೊಳ್ಳುತ್ತಿವೆ. ವಯಸ್ಸಾದ ಹೆಂಗಸರು ನಿರ್ವಹಿಸುವ ಕುಟುಂಬಗಳ ಪ್ರಮಾಣವು ಅಧಿಕವಾಗುತ್ತಿದೆ.

ಮಹಿಳೆಯರಿಗೆ ಸಾಮಾಜಿಕ ಅಧಿಕಾರ ಹಾಗೂ ಸಂಪನ್ಮೂಲಗಳ ಲಭ್ಯತೆಯಿಲ್ಲದಿರುವುದರಿಂದ ಬಡತನ ಹಾಗೂ ಲಿಂಗವ್ಯವಸ್ಥೆಯ ನಡುವೆ ಹತ್ತಿರದ ಸಂಬಂಧವಿದೆ. ಆದರೆ ಆದಾಯ ಮತ್ತು ಬಡತನದ ಬಗ್ಗೆ ಅಂಕಿಅಂಶಗಳ ಕೊರತೆಯಿರುವುದರಿಂದ ಬಡತನದಲ್ಲಿರುವ ಪುರುಷರ ಸಂಖ್ಯೆ ಎಷ್ಟು, ಮಹಿಳೆಯರ ಸಂಖ್ಯೆ ಎಷ್ಟು ಎಂದು ತಿಳಿಯಲು ಸಾಧ್ಯವಾಗಿಲ್ಲ. ಆದಾಗ್ಯೂ ಬಡರಾಷ್ಟ್ರಗಳಲ್ಲಿ ಲಿಂಗ ವ್ಯತ್ಯಾಸ ಅಧಿಕ ಪ್ರಮಾಣದಲ್ಲಿರುವುದಕ್ಕೆ ಸಾಕ್ಷ್ಯಾಧಾರವಿರುವುದರಿಂದ ಲಿಂಗ ಸಮಾನತೆಯನ್ನು ತರುವುದರ ಮೂಲಕ ಬಡ ದೇಶಗಳನ್ನು ಶ್ರೀಮಂತಗೊಳಿಸಬಹುದು.

೧೯೭೯ರಲ್ಲಿ ವಿಶ್ವಸಂಸ್ಥೆಯು 'ಮಹಿಳೆಯರ ಮೇಲೆ ತೋರುವ ಎಲ್ಲಾ ರೀತಿಯ ತಾರತಮ್ಯವನ್ನು ಹೋಗಲಾಡಿಸುವ ಒಡಂಬಡಿಕೆ'ಯನ್ನು ಜಾರಿಗೆ ತಂದು ಮಹಿಳೆಯರ ರಾಜಕೀಯ ಭಾಗವಹಿಸುವಿಕೆಯ ಹಕ್ಕನ್ನು ಪ್ರತಿಪಾದಿಸಿತು. ಅಂತರರಾಷ್ಟ್ರೀಯ ಮಟ್ಟದ ರಾಜಕೀಯ ವಲಯದಲ್ಲೂ ಮಹಿಳಾ ದನಿ ಕೇಳಲಾರಂಭಿಸಿತು. ಕೆಲವು ರಾಷ್ಟ್ರಗಳಲ್ಲಿ ಕಳೆದೆರಡು ದಶಕಗಳಲ್ಲಿ ಮಹಿಳೆಯರ ರಾಜಕೀಯ ಭಾಗವಹಿಸುವಿಕೆ ಹೆಚ್ಚಲು ಕಾರಣ ಅಲ್ಲಿ ನೀಡಿದ ಮೀಸಲಾತಿ ಸೌಲಭ್ಯ. ಬ್ರೆಜಿಲ್, ಫ್ರಾನ್ಸ್, ಭಾರತ, ಫಿಲಿಫೈನ್ಸ್ ಮತ್ತು ಉಗಾಂಡ ದೇಶಗಳಲ್ಲಿ ಮೀಸಲಾತಿಯನ್ನು ನೀಡಲಾಗಿದೆ. ಈ ಮೀಸಲಾತಿಯ ಪ್ರಯುಕ್ತ ದಕ್ಷಿಣ ಆಫ್ರಿಕಾದಲ್ಲಿ ಶೇ. ಒಂದು ಇದ್ದ ಮಹಿಳೆಯರ ಪ್ರಮಾಣ ಶೇ. ೩೦ಕ್ಕೆ ಏರಿತು. ಎಲ್ಲಾ ಸ್ತರಗಳಲ್ಲೂ, ಹಂತಗಳಲ್ಲೂ ಮಹಿಳೆಯರ ರಾಜಕೀಯ ಭಾಗವಹಿಸುವಿಕೆಯನ್ನು ಹೆಚ್ಚಿಸಬೇಕೆಂದರೆ ರಾಷ್ಟ್ರ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ವ್ಯಾಪಕವಾದ ಹಾಗೂ ಗಂಭೀರ ಪ್ರಯತ್ನಗಳು ನಡೆಯಬೇಕಾಗಿದೆ.

ಡಾ|| ಹೇಮಲತ ಎಚ್. ಎಂ.
ಮಹಿಳಾ ಅಧ್ಯಯನ ಕೇಂದ್ರ, ಮಾನಸ ಗಂಗೋತ್ರಿ, ಮೈಸೂರು - ೬




ದಿನಾಂಕ ೧೯.೯.೨೦೦೩ರಂದು ಮೈಸೂರಿನ ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್ ಸಭಾಂಗಣದಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನ ಮತ್ತು ಮಾರಾಟ ಯಶಸ್ವಿಯಾಗಿ ನಡೆಯಿತು. ಖ್ಯಾತ ಲೇಖಕ ಮತ್ತು ಕುವೆಂಪು ಅಧ್ಯಯನ ಸಂಸ್ಥೆಯ ವಿಶ್ರಾಂತ ಅಧ್ಯಕ್ಷರಾದ ಡಾ|| ಸಿ. ಪಿ. ಕೃಷ್ಣಕುಮಾರ್ ಪುಸ್ತಕ ಪ್ರದರ್ಶನ ಉದ್ಘಾಟಿಸಿದರು.

# ವಿಸ್ತಾರಗೊಳ್ಳುತ್ತಿರುವ ಮಾಧ್ಯಮ ಮಾರುಕಟ್ಟೆ ಬಡವಾಗುತ್ತಿರುವ ಪ್ರಜಾತಂತ್ರ

**ನಾಗರಿಕರಿಗೆ ಅಗತ್ಯವಾದ ಮಾಹಿತಿ ನೀಡಿ ಅವರು ಮುಕ್ತ ಸಂವಾದದಲ್ಲಿ ಪಾಲ್ಗೊಂಡು ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವಲ್ಲಿ ಮಾಧ್ಯಮಗಳು ಪ್ರಮುಖ ಪಾತ್ರ ವಹಿಸಬೇಕು. ಸರ್ಕಾರದ ನಿಯಂತ್ರಣ ಮತ್ತು ಸಮಾಜದ ಪ್ರಬಲ ಶಕ್ತಿಗಳಿಂದ ಸ್ವತಂತ್ರವಾಗಿರುವ ಮಾಧ್ಯಮಗಳು ಮಾತ್ರ 'ಸಾರ್ವಜನಿಕ ವೇದಿಕೆ'ಯನ್ನು ನಾಗರಿಕರಿಗೆ ನೀಡಬಲ್ಲವು. ಸಮಾಜದ ಅತಿ ದುರ್ಬಲರನ್ನು ಪ್ರತಿನಿಧಿಸುವಂತಹ ಮಾಧ್ಯಮಗಳು ಹುಟ್ಟಿ ಬೆಳೆಯುವ ಅವಕಾಶವಿದ್ದಾಗ ಮಾತ್ರ ಪ್ರಜಾತಂತ್ರ ಉಳಿಯಲು ಸಾಧ್ಯ. ಆದರೆ ವಿಸ್ತಾರಗೊಳ್ಳುತ್ತಿರುವ ನವ ಉದಾರನೀತಿ ಅಂತಹ ಮಾಧ್ಯಮಗಳನ್ನು ಮೊಳೆಯಬಿಡುವುದಿಲ್ಲ. ಕೆಲವೇ ಬಂಡವಾಳಶಾಹಿಗಳ ಹಿಡಿತದಲ್ಲುಳಿಯುವ ಮಾಧ್ಯಮಗಳು ನಾಗರಿಕರನ್ನು ರಾಜಕೀಯ ಶೂನ್ಯರನ್ನಾಗಿಸುತ್ತವೆ. ಒಂದು ಪ್ರತಿಷ್ಠಿತ ವರ್ಗ ರಾಜಕೀಯ ಪ್ರಕ್ರಿಯೆಯ ಮೇಲೆ ನಿಯಂತ್ರಣ ಸಾಧಿಸುತ್ತದೆ. ಚುನಾವಣೆಗಳಲ್ಲಿ ಮತ ಚಲಾಯಿಸುವುದಕ್ಕೆ ಮಾತ್ರ ಜನಸಾಮಾನ್ಯರ ರಾಜಕೀಯ ಪಾತ್ರ ಸೀಮಿತವಾಗುತ್ತದೆ.**

ತೊಂಬತ್ತರ ದಶಕದಿಂದೀಚೆಗೆ ಮಾಧ್ಯಮ ಕ್ಷೇತ್ರದಲ್ಲಾಗುತ್ತಿರುವ ತೀವ್ರಗತಿಯ ಬೆಳವಣಿಗೆಯನ್ನು 'ಸಂವಹನ ಕ್ರಾಂತಿ' ಎಂದು ಹೇಳಲಾಗುತ್ತಿದೆ. ಆರ್ಥಿಕ ಮತ್ತು ಸಾಂಸ್ಕೃತಿಕ ಜಾಗತೀಕರಣದ ಪ್ರಕ್ರಿಯೆಯ ಭಾಗವಾಗಿರುವ ಈ ಬೆಳವಣಿಗೆ ನಾಗರಿಕರ ಅಭಿವ್ಯಕ್ತಿ ಸ್ವಾತಂತ್ರ್ಯದ ದೃಷ್ಟಿಯಿಂದ ಅಪಾಯಕಾರಿ. ಜಾಗತೀಕರಣವೆಂದರೆ ನವ ಉದಾರವಾದವನ್ನು ಜಗತ್ತಿನುದ್ದಕ್ಕೂ ವಿಸ್ತರಿಸುವುದೇ ಆಗಿದೆ. ಸಮಾಜದ ಎಲ್ಲ ಸಮಸ್ಯೆಗಳಿಗೆ ಮಾರುಕಟ್ಟೆಯೇ ಪರಿಹಾರ ನೀಡಬಲ್ಲದು ಎಂದು ಹೇಳುವ ಈ ವಾದ ಖಾಸಗಿ ಕಾರ್ಪೊರೇಷನ್‌ಗಳು ಯಾವುದೇ ಅಡೆತಡೆಯಿಲ್ಲದೆ ವ್ಯವಹಾರ ನಡೆಸಲು ಅನುಕೂಲವಾಗುವಂತೆ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ನಿಯಮಗಳನ್ನು ರೂಪಿಸಬೇಕು ಎಂಬ ಒತ್ತಡವನ್ನು ಹೇರುತ್ತದೆ. ಈ ವಾದಕ್ಕನುಗುಣವಾಗಿಯೇ ಎಲ್ಲೆ ಇಲ್ಲದ ಮಾಧ್ಯಮ ಮಾರುಕಟ್ಟೆಯ ವಿಸ್ತರಣೆಗೆ ಅನಿರ್ಬಂಧಿತ ಅವಕಾಶ ಕಲ್ಪಿಸಲಾಗುತ್ತಿದೆ.

ತೈಲ, ಮೋಟಾರುವಾಹನ, ಸೋಪು, ತಂಬಾಕು ಮತ್ತು ಔಷಧ ಉದ್ದಿಮೆಗಳಲ್ಲಿ ಕೆಲವೇ ಕಂಪನಿಗಳು ಅಂತರರಾಷ್ಟ್ರೀಯ ಮಾರುಕಟ್ಟೆಯ ಮೇಲೆ ಹಿಡಿತ ಸಾಧಿಸಿರುವಂತೆ ಬೆರಳೆಣಿಕೆಯಷ್ಟೇ ಸಂಸ್ಥೆಗಳು ಮಾಧ್ಯಮ ಮಾರುಕಟ್ಟೆಯ ಬಹುಪಾಲನ್ನು ಆಕ್ರಮಿಸಿವೆ. ಬೆನ್ ಬ್ಯಾಗ್ಡಿಕಿಯನ್ ಎಂಬ ಸಂಶೋಧಕ ೧೯೮೨ರಲ್ಲಿ 'ಮಾಧ್ಯಮ ಏಕಸ್ವಾಮ್ಯತೆ' ಎನ್ನುವ ಪುಸ್ತಕ ಪ್ರಕಟಿಸಿದಾಗ ೫೦ ಮಾಧ್ಯಮ ಸಂಸ್ಥೆಗಳು ಪ್ರಪಂಚದ ಮಾಧ್ಯಮ ಮಾರುಕಟ್ಟೆಯ ಅರ್ಧಕ್ಕೂ ಹೆಚ್ಚು ಪಾಲನ್ನು ಹೊಂದಿದ್ದವು. ಆ ಪುಸ್ತಕದ ೨೦೦೦ದ ಮುದ್ರಣದ ವೇಳೆಗೆ ಆ ಸಂಖ್ಯೆ ೧೦ಕ್ಕೆ ಇಳಿದಿತ್ತು. ಮುಂದಿನ ಎರಡು ವರ್ಷಗಳಲ್ಲಿ ಅದು ೬ಕ್ಕೆ ಇಳಿಯಿತು. ಎಒಎಲ್ ಟೈಮ್ ವಾರ್ನರ್, ನ್ಯೂಸ್ ಕಾರ್ಪೊರೇಷನ್, ಡಿಸ್ನಿ, ಬರ್ಟಲ್ಸ್‌ಮನ್, ವೈಯಾಕಾಮ್ ಮತ್ತು ವಿವೆಂಡಿ ಯೂನಿವರ್ಸಲ್ ಎಂಬ ಈ ಆರು ಸಂಸ್ಥೆಗಳು ಮಾಹಿತಿ ಮತ್ತು ಮನರಂಜನೆಯನ್ನು ತಯಾರಿಸುವುದಲ್ಲದೆ ತಮ್ಮ ಎಲ್ಲ ಉತ್ಪನ್ನಗಳಿಗೆ ಜಾಗತಿಕ ವಿತರಣಾ ಜಾಲವನ್ನು ಹೊಂದಿವೆ. ಪತ್ರಿಕೆಗಳು ಮತ್ತು ನಿಯತಕಾಲಿಕೆಗಳ ಪ್ರಕಟಣೆ, ಸಿನಿಮಾ ನಿರ್ಮಾಣ ಮತ್ತು ಹಂಚಿಕೆ, ಟೆಲಿವಿಷನ್ ಮತ್ತು ರೇಡಿಯೊ ಚಾನೆಲ್‌ಗಳು, ಇಂಟರ್ನೆಟ್, ಪುಸ್ತಕ ಪ್ರಕಟಣೆ, ಸಂಗೀತ, ವಿಡಿಯೊ, ದೂರಸಂಪರ್ಕ, ಥೀಮ್ ಪಾರ್ಕುಗಳು, ಮನರಂಜನಾ ಉತ್ಪನ್ನಗಳ ಮಾರಾಟ ಹೀಗೆ ಮಾಧ್ಯಮ ಕ್ಷೇತ್ರದ ಎಲ್ಲಾ ಹಂತಗಳಲ್ಲೂ ತಮ್ಮ ಜಾಲವನ್ನು ಹರಡಿಕೊಂಡಿವೆ.

ಪ್ರಪಂಚದಲ್ಲೆ ಬಹುದೊಡ್ಡ ಮಾಧ್ಯಮ ಸಂಸ್ಥೆಯಾದ ಎಒಎಲ್ ಟೈಮ್ ವಾರ್ನರ್ ೧೪೦ ನಿಯತಕಾಲಿಕೆಗಳು, ೭೫ ಟೆಲಿವಿಷನ್ ಚಾನೆಲ್‌ಗಳು, ೨೩ ಸಿನಿಮಾ ಕಂಪನಿಗಳು, ೭ ಪುಸ್ತಕ ಪ್ರಕಟಣಾ ಘಟಕಗಳು ಮತ್ತು ೧೫ ಇಂಟರ್‌ನೆಟ್ ಸೇವೆಗಳ ಒಡೆತನ ಹೊಂದಿದೆ. ಭಾರತದಲ್ಲಿ ಲಕ್ಷಾಂತರ ಓದುಗರನ್ನು ಹೊಂದಿರುವ ಟೈಮ್, ಫಾರ್ಚೂನ್, ಲೈಫ್ ನಿಯತಕಾಲಿಕೆಗಳು; ಅಪಾರ ವೀಕ್ಷಕರನ್ನು ಹೊಂದಿರುವ ಸಿ.ಎನ್.ಎನ್, ಹೆಚ್‌ಬಿಒ, ಕಾರ್ಟೂನ್ ನೆಟ್‌ವರ್ಕ್, ಟಿಎನ್‌ಟಿ, ಟೆಲಿವಿಷನ್ ಚಾನೆಲ್‌ಗಳು; ಸಿನಿಮಾ ತಯಾರಿಕೆ, ವಿತರಣೆ ಮತ್ತು ಪ್ರದರ್ಶನದಲ್ಲಿ ತೊಡಗಿರುವ

**ಡಾ|| ಡಿ. ಎಸ್. ಪೂರ್ಣಾನಂದ**

ವಾರ್ನರ್ ಬ್ರದರ್ಸ್ ಪಿಕ್ಚರ್ಸ್, ವಾರ್ನರ್ ಹೋಮ್ ವಿಡಿಯೋ, ವಾರ್ನರ್ ಬ್ರದರ್ಸ್ ಅನಿಮೇಷನ್ ಮತ್ತು ವಾರ್ನರ್ ಬ್ರದರ್ಸ್ ಇಂಟರ್‌ನ್ಯಾಷನಲ್ ಥಿಯೇಟರ್ಸ್ ಈ ಸಂಸ್ಥೆಯ ಘಟಕಗಳು.

ಅಮೆರಿಕಾ-ಆಸ್ಟ್ರೇಲಿಯಾ ನಾಗರಿಕನಾಗಿರುವ ರೂಪರ್ಟ್ ಮರ್ಡಾಕ್‌ನ ನ್ಯೂಸ್ ಕಾರ್ಪೊರೇಷನ್ ೧೭೫ ಪತ್ರಿಕೆಗಳು, ೯ ಸಿನಿಮಾ ಕಂಪನಿಗಳು, ೧೮ ಟೆಲಿವಿಷನ್ ಜಾಲಗಳು ಮತ್ತು ೭ ಪುಸ್ತಕ ಪ್ರಕಟಣಾ ಘಟಕಗಳನ್ನು ಹೊಂದಿದೆ. ತೊಂಬತ್ತರ ದಶಕದ ಆರಂಭದಲ್ಲೆ ಭಾರತಕ್ಕೆ ಬಂದ ಸ್ಟಾರ್ ಮತ್ತು ನ್ಯಾಷನಲ್ ಜಿಯಾಗ್ರಫಿಕ್ ಚಾನೆಲ್‌ಗಳು, ಪುಸ್ತಕ ಪ್ರಕಟಣಾ ಸಂಸ್ಥೆಯಾದ ಹಾರ್ಪರ್ ಕೊಲಿನ್ಸ್, ಯುವ ಶ್ರೋತೃಗಳನ್ನು ಆಕರ್ಷಿಸಿರುವ ರೇಡಿಯೋ ಸಿಟಿ ನ್ಯೂಸ್ ಕಾರ್ಪೊರೇಷನ್‌ನ ಅಂಗಸಂಸ್ಥೆಗಳಾಗಿವೆ.

ಇಎಸ್‌ಪಿಎನ್, ವಾಲ್ಟ್ ಡಿಸ್ನಿ, ಮತ್ತು ದಿ ಹಿಸ್ಟರಿ ಚಾನೆಲ್‌ಗಳು ೧೬೫ ದೇಶಗಳಲ್ಲಿ ಮಾರುಕಟ್ಟೆ ಹೊಂದಿರುವ ಡಿಸ್ನಿ ಕಂಪನಿಯ ಘಟಕಗಳು. ನಿಕಲೋಡಿಯನ್ ಮತ್ತು ಎಂಟಿವಿ ಚಾನೆಲ್‌ಗಳು ವೈಯಾಕಾಮ್ ಗುಂಪಿಗೆ ಸೇರಿದವು. ಯೂರೋಪಿನೆಲ್ಲೆಡೆ ತಮ್ಮ ಜಾಲಗಳನ್ನು ಹರಡಿಕೊಂಡಿರುವ ಬರ್ಟಲ್ಸ್‌ಮನ್ ಮತ್ತು ವಿವೆಂಡಿ ಯೂನಿವರ್ಸಲ್ ಸಂಸ್ಥೆಗಳು ಭಾರತದಲ್ಲಿ ತಮ್ಮ ಮಾರುಕಟ್ಟೆಯನ್ನು ಕಳೆದ ಕೆಲವು ವರ್ಷಗಳಿಂದ ವಿಸ್ತರಿಸಿಕೊಳ್ಳುತ್ತಿವೆ.

ಈ ಎಲ್ಲ ಮಾಧ್ಯಮ ಸಂಸ್ಥೆಗಳ ಉದ್ದೇಶ ಲಾಭ ಗಳಿಸುವುದು ಮತ್ತು ಪಾಶ್ಚಿಮಾತ್ಯ ಆರ್ಥಿಕ ಮತ್ತು ರಾಜಕೀಯ ನೀತಿಗಳನ್ನು ಬೆಂಬಲಿಸುವುದೇ ಆಗಿದೆ. ಆ ಕಾರಣಕ್ಕಾಗಿಯೇ ಅವು ಬಹುರಾಷ್ಟ್ರೀಯ ಕಂಪನಿಗಳ ವಕ್ತಾರರಂತೆ ವರ್ತಿಸುತ್ತವೆ. ಕೋಕಕೋಲ ಮತ್ತು ಪೆಪ್ಸಿ ಕಂಪನಿಗಳ ಲಘು ಪಾನೀಯಗಳಲ್ಲಿ ಕೀಟನಾಶಕಗಳ ಪ್ರಮಾಣ ನಿಗದಿತ ಮಟ್ಟಕ್ಕಿಂತ ಹೆಚ್ಚಿದೆ ಎಂದು ಪ್ರಕಟಿಸಿದ ವಿಜ್ಞಾನ ಮತ್ತು ಪರಿಸರ ಕೇಂದ್ರಕ್ಕೆ ಯಾವುದೇ ಪರಿಣತಿ ಮತ್ತು ಮಾನ್ಯತೆ ಇಲ್ಲ ಎಂಬ ಅಪಪ್ರಚಾರವನ್ನು ವಿದೇಶಿ ಮಾಧ್ಯಮ ಸಂಸ್ಥೆಗಳು ಆರಂಭಿಸಿದ್ದು ಇತ್ತೀಚಿನ ಒಂದು ಉದಾಹರಣೆಯಷ್ಟೆ. ವಿದೇಶಿ ಮಾಧ್ಯಮ ಸಂಸ್ಥೆಗಳು

ಭಾರತೀಯ ಮಾಧ್ಯಮಗಳಲ್ಲಿ ಪಾಲುದಾರಿಕೆಯನ್ನು ಕಬಳಿಸುತ್ತಿರುವುದಲ್ಲದೆ ಮಾಧ್ಯಮ ಸಂಬಂಧಿತ ಕಂಪನಿಗಳನ್ನು ಕೊಂಡುಕೊಳ್ಳುತ್ತಿವೆ.

ತೊಂಬತ್ತರ ದಶಕಕ್ಕೂ ಮೊದಲು ಬಹುತೇಕ ದೇಶಗಳು ತಮ್ಮದೇ ಆದ ಮಾಧ್ಯಮ ವ್ಯವಸ್ಥೆಯನ್ನು ಹೊಂದಿದ್ದವು. ಅಭಿವೃದ್ಧಿಗಾಗಿ ರೇಡಿಯೋ, ಟಿವಿ ಮತ್ತು ಪತ್ರಿಕೆಗಳನ್ನು ಬಳಸಿಕೊಳ್ಳುವ ಯೋಜನೆಗಳನ್ನು ರೂಪಿಸಿಕೊಂಡಿದ್ದವು. ಆದರೆ ಅಂತಹ ಮಾಧ್ಯಮ ವ್ಯವಸ್ಥೆ ಜಾಗತೀಕರಣದ ದಾಳಿಯಿಂದ ಕುಸಿದುಬೀಳುತ್ತಿದೆ. ಸುಧಾರಣೆಯ ಹೆಸರಿನಲ್ಲಾಗುತ್ತಿರುವ ಖಾಸಗೀಕರಣ ದೇಶೀಯ ಮಾಧ್ಯಮ ಮಾರುಕಟ್ಟೆಯನ್ನು ವಿದೇಶಿ ಮಾಧ್ಯಮ ಸಂಸ್ಥೆಗಳ ಆಕ್ರಮಣಕ್ಕೆ ತೆರೆದಿಟ್ಟಿದೆ. ಸಾರ್ವಜನಿಕ ಪ್ರಸಾರ ಮಾಧ್ಯಮಗಳೆಲ್ಲಾ ಖಾಸಗಿಯವರ ಕೈಸೇರುತ್ತಿವೆ.

ಮಾಧ್ಯಮಗಳ ವಾಣಿಜ್ಯೀಕರಣ ಮತ್ತು ಖಾಸಗೀಕರಣ ಏಕಸ್ವಾಮ್ಯತೆಯನ್ನು ಬೆಳೆಸುವುದರಿಂದ ಪ್ರಜಾತಂತ್ರಕ್ಕೆ ಮಾರಕವಾಗುವುದು ನಿರಾಕರಿಸಲಾಗದ ಸಂಗತಿ. ಪ್ರಜಾತಂತ್ರ ವ್ಯವಸ್ಥೆಯಲ್ಲಿ ಜನರ ಅಭಿಪ್ರಾಯಗಳು ಮತ್ತು ಅವರು ತೆಗೆದುಕೊಳ್ಳುವ ತೀರ್ಮಾನಗಳು ಮಾಧ್ಯಮಗಳು ನೀಡುವ ಮಾಹಿತಿಯನ್ನು ಅವಲಂಬಿಸಿರುತ್ತವೆ. ಚಿಂತಕ ಹ್ಯಾಬರ್‌ಮಾಸ್ ಹೇಳುವಂತೆ ಮಾಧ್ಯಮಗಳು ಸಾರ್ವಜನಿಕ ವೇದಿಕೆಯಾಗಿ (ಪಬ್ಲಿಕ್ ಸ್ಫಿಯರ್) ಕಾರ್ಯ ವಹಿಸಬೇಕು. ಅಂದರೆ ನಾಗರಿಕರಿಗೆ ಅಗತ್ಯವಾದ ಮಾಹಿತಿ ನೀಡಿ ಅವರು ಮುಕ್ತ ಸಂವಾದದಲ್ಲಿ ಪಾಲ್ಗೊಂಡು ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವಲ್ಲಿ ಮಾಧ್ಯಮಗಳು ಪ್ರಮುಖ ಪಾತ್ರ ವಹಿಸಬೇಕು. ಸರ್ಕಾರದ ನಿಯಂತ್ರಣ ಮತ್ತು ಸಮಾಜದ ಪ್ರಬಲ ಶಕ್ತಿಗಳಿಂದ ಸ್ವತಂತ್ರವಾಗಿರುವ ಮಾಧ್ಯಮಗಳು ಮಾತ್ರ 'ಸಾರ್ವಜನಿಕ ವೇದಿಕೆ'ಯನ್ನು ನಾಗರಿಕರಿಗೆ ನೀಡಬಲ್ಲವು. ಸಮಾಜದ ಅತಿ ದುರ್ಬಲರನ್ನು ಪ್ರತಿನಿಧಿಸುವಂತಹ ಮಾಧ್ಯಮಗಳು ಹುಟ್ಟಿ ಬೆಳೆಯುವ ಅವಕಾಶವಿದ್ದಾಗ ಮಾತ್ರ ಪ್ರಜಾತಂತ್ರ ಉಳಿಯಲು ಸಾಧ್ಯ. ಆದರೆ ವಿಸ್ತಾರಗೊಳ್ಳುತ್ತಿರುವ ನವ ಉದಾರ ನೀತಿ ಅಂತಹ ಮಾಧ್ಯಮಗಳನ್ನು ಮೊಳೆಯಬಿಡು ವುದಿಲ್ಲ. ಕೆಲವೇ ಬಂಡವಾಳಶಾಹಿಗಳ ಹಿಡಿತದಲ್ಲುಳಿ ಯುವ ಮಾಧ್ಯಮಗಳು ನಾಗರಿಕರನ್ನು ರಾಜಕೀಯ ಶೂನ್ಯರನ್ನಾಗಿಸುತ್ತವೆ. ಒಂದು ಪ್ರತಿಷ್ಠಿತ ವರ್ಗ ರಾಜಕೀಯ ಪ್ರಕ್ರಿಯೆಯ ಮೇಲೆ ನಿಯಂತ್ರಣ ಸಾಧಿಸು ತ್ತದೆ. ಚುನಾವಣೆಗಳಲ್ಲಿ ಮತ ಚಲಾಯಿಸುವುದಕ್ಕೆ ಮಾತ್ರ ಜನಸಾಮಾನ್ಯರ ರಾಜಕೀಯ ಪಾತ್ರ ಸೀಮಿತ ವಾಗುತ್ತದೆ. ರಂಜನೀಯ ವ್ಯಕ್ತಿಗಳು, ಸಿನಿಮಾ ತಾರೆಗಳು, ಫ್ಯಾಷನ್ ಶೋಗಳು, ಸೌಂದರ್ಯ ಸ್ಪರ್ಧೆಗಳು ಮಾಧ್ಯಮ ವರದಿಗಾರಿಕೆಯ ಪ್ರಮುಖ ವಿಷಯಗಳಾಗುವುದರಿಂದ ನಾಗರಿಕ ಹಕ್ಕುಗಳ ಉಲ್ಲಂಘನೆಯಂತಹ ಘಟನೆಗಳು ನಗಣ್ಯವಾಗುವುದಲ್ಲದೆ ಅಂತಹ ಉಲ್ಲಂಘನೆಗಳು 'ಅಭಿವೃದ್ಧಿ'ಗೆ ಅನಿವಾರ್ಯ ಮಾರ್ಗಗಳಾಗಿ ಬಿಂಬಿತವಾಗುತ್ತವೆ.




ಖಾಸಗಿ ಒಡೆತನದಲ್ಲಿರುವ ಮಾಧ್ಯಮಗಳು ಜಾಹಿರಾತಿನಿಂದ ಬರುವ ಆದಾಯವನ್ನು ಅವಲಂಬಿಸಿರುವುದರಿಂದ ಜಾಹಿರಾತುದಾರರ ಬೇಡಿಕೆಗನುಗುಣವಾಗಿಯೇ ವಿಷಯ ಗಳ ಆಯ್ಕೆ ನಡೆಯುತ್ತದೆ. ಗಂಭೀರ ರಾಜಕೀಯ ಚರ್ಚೆಯು ಬದಲು ಮನರಂಜನೆ ಮುಖ್ಯವಾಗುತ್ತದೆ. ಹಣವಂತ ಗ್ರಾಹಕರನ್ನು ಜಾಹಿರಾತುದಾರರಿಗೆ ನೀಡುವುದು ಮಾಧ್ಯಮ ಮಾಲೀಕನ ಗುರಿಯಾಗುತ್ತದೆ. ನಾಗರಿಕರ ಆಶೋತ್ತರಗಳನ್ನು ಕಡೆಗಣಿಸಿ ಮಾರುಕಟ್ಟೆಯ ಅಗತ್ಯಗಳನ್ನು ಪೂರೈಸಲು ಮಾಧ್ಯಮದ ಒಡೆಯ ಮುಂದಾಗುತ್ತಾನೆ. ಆದ್ದರಿಂದಲೇ ಅನುಭೋಗಿ ಸಂಸ್ಕೃತಿ ರಂಜಿತವಾಗಿ ಚಿತ್ರಿತವಾಗಿ ಯಾರು ಹೆಚ್ಚು ಸರಕು ಗಳನ್ನು ಉಪಯೋಗಿಸುತ್ತಾನೊ ಅವನು ಉತ್ತಮ ನಾಗರಿಕನಾಗಿ ಬಿಂಬಿತವಾಗುತ್ತಾನೆ.

ಶಿಕ್ಷಣ ತಜ್ಞ ನೀಲ್ ಪೋಸ್ಟ್‌ಮನ್ 'ಸಾವಿನವರೆಗೂ ಮನರಂಜನೆ' ಎಂಬ ಪುಸ್ತಕದಲ್ಲಿ ಟೆಲಿವಿಷನ್ ಹೇಗೆ ವೀಕ್ಷಕರಿಗೆ ಕಸವನ್ನು ಉಣಬಡಿಸುತ್ತದೆ ಎಂಬುದನ್ನು ವಿವರಿಸಿದ್ದಾನೆ. ಅವನ ಪ್ರಕಾರ 'ಟೆಲಿವಿಷನ್ ವೀಕ್ಷಕರು ಅತೀ ಹೆಚ್ಚು ರಂಜಿಸಲ್ಪಟ್ಟ ಮತ್ತು ಅತೀ ಕಡಿಮೆ ಮಾಹಿತಿಯುಳ್ಳ ಜನ.' ಟೆಲಿವಿಷನ್‌ನಲ್ಲಿ ನರಕವನ್ನು ಸೃಷ್ಟಿಸುವ ಯುದ್ಧ ಕೂಡ ದೊಡ್ಡ ಮನರಂಜನೆಯಾಗುತ್ತದೆ. ಸಮೀಕ್ಷೆಯೊಂದರ ಪ್ರಕಾರ ಕೊಲ್ಲಿ ಯುದ್ಧವನ್ನು ಹೆಚ್ಚು ವೀಕ್ಷಿಸಿದಷ್ಟು ಅದರ ಬಗೆಗಿನ ಅರಿವು ಕಡಿಮೆಯಾಗಿತ್ತು. ಯುದ್ಧ ಒಂದು ವಿಡಿಯೋ ಗೇಮ್ ತರಹ ಕಂಡಿತಷ್ಟೆ. ಈ ರೀತಿಯ ವರದಿಗಾರಿಕೆ ಯಿಂದಾಗಿಯೇ ಧ್ವಂಸವಾಗುತ್ತಿದ್ದ ಮನೆಗಳು, ಜೀವಭಯದಿಂದ ಓಡುತ್ತಿದ್ದ ನಾಗರಿಕರು ಮತ್ತು ಪೈಶಾಚಿಕ ದಾಳಿಗೆ ಬಲಿಯಾಗುತ್ತಿದ್ದ ಸ್ತ್ರೀಯರು ಮತ್ತು ಮಕ್ಕಳ ಚಿತ್ರಿಕೆಗಳ ಬದಲು ಆಗಸದಲ್ಲಿ ಹಾರುತ್ತಿರುವ ಕ್ಷಿಪಣಿಗಳು, ದೂರದಲ್ಲಿ ಸಿಡಿಯುತ್ತಿದ್ದ ಬಾಂಬುಗಳು ಪಟಾಕಿಗಳ ಪ್ರದರ್ಶನದಂತೆ ಕಂಡವು. ಯುದ್ಧದ ಹಿಂದಿನ ರಾಜಕೀಯ ಮತ್ತು ಆರ್ಥಿಕ ಕಾರಣಗಳು ಮತ್ತು ಪರಿಣಾಮಗಳ ಚರ್ಚೆ ಇಲ್ಲವಾಗಿ 'ದುರ್ಜನರ' ವಿರುದ್ಧ 'ಸಜ್ಜನರು' ಸಾರಿದ ಹೋರಾಟವೆಂಬ ಯೋಜಿತ ಪ್ರಚಾರ ನಡೆಯಿತು. ಹೀಗೆ ಪ್ರೇಕ್ಷಕರನ್ನು ರಾಜಕೀಯ ಪ್ರಜ್ಞಾಹೀನ ಸ್ಥಿತಿಗೆ ಒಯ್ಯುವುದು ನವ ಉದಾರವಾದ ಪ್ರಬಲಗೊಳ್ಳಲು ಸಹಕಾರಿ.

ಕೆಲವೇ ಶಕ್ತಿಗಳ ಹಿಡಿತದಲ್ಲಿರುವ ಮಾಧ್ಯಮಗಳು ವೈವಿಧ್ಯತೆಯನ್ನು ನಾಶಪಡಿಸುತ್ತವೆ. ಕೆಲವೇ ಜನರ ಮೌಲ್ಯಗಳು, ಅಭಿರುಚಿಗಳು, ನಂಬಿಕೆಗಳು ಮತ್ತು ಜೀವನಶೈಲಿ ಸಾರ್ವತ್ರಿಕ ಮತ್ತು ಮಾನವ ಸಹಜ ಎನ್ನುವಂತೆ ನಿರೂಪಿತವಾಗುತ್ತವೆ. ಇದರಿಂದಾಗಿ ತಮ್ಮ ಅಭಿಪ್ರಾಯಗಳಿಗೆ, ನಿಲುವುಗಳಿಗೆ ಮನ್ನಣೆ ದೊರೆಯುವುದಿಲ್ಲವೆಂದು ತಿಳಿದ ಬಹುತೇಕ ಜನರು ಅವುಗಳನ್ನು ಅಭಿವ್ಯಕ್ತ ಮಾಡದೆ ಹಿಂದೆ ಸರಿಯುತ್ತಾರೆ ಎಂದು ಜರ್ಮನಿಯ ರಾಜಕೀಯ ತಜ್ಞೆ ಎಲಿಜಬೆತ್ ನೋಯೆಲ್ ನ್ಯೂಮನ್ ಹೇಳುತ್ತಾರೆ. ಪ್ರಚಲಿತ ವಿಷಯಗಳ ಒಂದೇ ಮುಖವನ್ನು ಪುನರಾವರ್ತಿತವಾಗಿ ಬಿಂಬಿಸುತ್ತಾ ಹೋದರೆ ಪ್ರೇಕ್ಷಕರು ಮೌನ ವಾಗುವಂತೆ ಒತ್ತಡ ಸೃಷ್ಟಿಯಾಗುತ್ತದೆ. ಭಿನ್ನ ಅಭಿಪ್ರಾಯಗಳು ವ್ಯಕ್ತವಾಗದೆ 'ಮೌನದ ಸುರುಳಿ' ಬೆಳೆಯುತ್ತಾ ಹೋಗುತ್ತದೆ. ಮಾಧ್ಯಮಗಳಲ್ಲಿ ಜಾಗತೀಕರಣ ಪರವಾದ ಚರ್ಚೆ ಎಷ್ಟು ಪ್ರಬಲ ವಾಗಿದೆಯೆಂದರೆ ಅದನ್ನು ಖಾಸಗಿಯಾಗಿ ವಿರೋಧಿ ಸುವವರು ಸಾರ್ವಜನಿಕವಾಗಿ ವಿರೋಧಿಸಲು ಹಿಂಜರಿಯುತ್ತಾರೆ. ಜಾಗತೀಕರಣ ದೇಶದ ಪ್ರಗತಿಗೆ ಅನಿವಾರ್ಯ ಎನ್ನುವ ವಾದಕ್ಕೆ ಅವರ ಮೌನವನ್ನೇ ಸಮ್ಮತಿ ಎಂದು ತಿಳಿಯಲಾಗಿದೆ.

ಮಾಧ್ಯಮಗಳು ವಿಸ್ತಾರಗೊಂಡಂತೆಲ್ಲ ಜನರಲ್ಲಿ ಅರಿವು ಹೆಚ್ಚಾಗಿ ಸಾರ್ವಜನಿಕ ಅಭಿಪ್ರಾಯ ರೂಪಿತಗೊಂಡು ಜನವಿರೋಧಿ ನೀತಿಗಳ ವಿರುದ್ಧ ಪ್ರತಿಭಟನೆ ಬೆಳೆಯಬೇಕಾಗಿತ್ತು. ಆದರೆ ಮಾಧ್ಯಮಗಳು ಬೆಳೆದಷ್ಟೆ ಮೌನ ಕೂಡ ಬೆಳೆಯುತ್ತಿದೆ. ಪ್ರಪಂಚದ ಹಲವು ಕಡೆ ವಸಾಹತುಶಾಹಿ ಅಂತರರಾಷ್ಟ್ರೀಯ ಹಣಕಾಸು ಮತ್ತು ವಾಣಿಜ್ಯ ಸಂಸ್ಥೆಗಳ ವಿರುದ್ಧ ನಡೆದಿರುವ ಹೋರಾಟಗಳನ್ನು ವರದಿ ಮಾಡಿರುವ ಕೆನಡಾದ ಪತ್ರಕರ್ತೆ ನೋಮಿ ಕ್ಲೀನ್ ಕಾರ್ಪೊರೇಷನ್‌ಗಳಿಗೆ ಮತ್ತು ಸರ್ಕಾರಗಳಿಗಿರುವ ಬಹುದೊಡ್ಡ ಅಸ್ತ್ರವೆಂದರೆ 'ಸಾರ್ವಜನಿಕ ಮೌನ' ಎಂದು ಹೇಳುತ್ತಾರೆ. ನಾಗರಿಕರು ಮೌನವಾಗುತ್ತ ಹೋದಂತೆ ಜನತಂತ್ರ ದಿವಾಳಿಯಾಗುತ್ತದೆ.

ಜಾಗತೀಕರಣದ ಪ್ರಕ್ರಿಯೆ ಸ್ಪರ್ಧೆಯನ್ನು ಹೆಚ್ಚು ಮಾಡಿ ಉತ್ಪನ್ನಗಳ ಮತ್ತು ಸೇವೆಗಳ ಗುಣಮಟ್ಟವನ್ನು ಸುಧಾರಿಸುತ್ತದೆ ಎಂಬ ಹುಸಿ ವಾದವಿದೆ. ಅಸಮಾನತೆಗಳು ಎಲ್ಲೆಲ್ಲಿವೆಯೋ ಅಲ್ಲಿ ನ್ಯಾಯ ಸಮ್ಮತವಾದ ಸ್ಪರ್ಧೆ ನಡೆಯಲು ಸಾಧ್ಯವಿಲ್ಲ. ಭಾರತೀಯ ಮಾಧ್ಯಮಗಳು ಬಹುರಾಷ್ಟ್ರೀಯ ಕಾರ್ಪೊರೇಟ್ ಮಾಧ್ಯಮಗಳೊಂದಿಗೆ ಸ್ಪರ್ಧೆ ನಡೆಸುವುದು ಬಹುತೇಕ ಸಾಧ್ಯವಾಗದು. ಪಾಶ್ಚಿಮಾತ್ಯರು ರೂಪಿಸಿರುವ ಮಾರುಕಟ್ಟೆ ನಿಯಮಗಳು ಹೇಗಿವೆಯೆಂದರೆ ಕೊಬ್ಬಿನಿಂತ ಆನೆಯೊಂದಿಗೆ ಆಡೊಂದು ಸ್ಪರ್ಧೆ ಗಿಳಿಯಬೇಕಾಗುತ್ತದೆ. ಇದು ಆಕ್ರಮಣವೇ ಹೊರತು ಸ್ಪರ್ಧೆಯಲ್ಲ. ಬಲಾಢ್ಯರನ್ನು

ಮಾತ್ರ ಉಳಿಸಿ ಬೆಳೆಸುವ ವ್ಯವಸ್ಥೆ ನಾಗರಿಕ ಸಮಾಜವನ್ನು ನಾಶಪಡಿಸುತ್ತದೆ.

ಕೈಗಾರಿಕೋದ್ಯಮಿಗಳ ಒಡೆತನದಲ್ಲಿರುವ ದೊಡ್ಡ ಮಾಧ್ಯಮಗಳು ಹೊಸ ಮಾಧ್ಯಮಗಳನ್ನು ಆರಂಭದಲ್ಲಿಯೇ ಹೊಸಕಿಹಾಕುತ್ತವೆ. ಪತ್ರಿಕೆಯೊಂದನ್ನು ಉತ್ಪಾದನಾ ವೆಚ್ಚಕ್ಕಿಂತ ಕಡಿಮೆ ಬೆಲೆಗೆ ಮಾರುವ ಸ್ಥಿತಿ ಇರುವುದರಿಂದ ಹೊಸದಾಗಿ ಆರಂಭವಾದ ಪತ್ರಿಕೆ ಮಾರುಕಟ್ಟೆಯಲ್ಲಿ ಸ್ಥಿರಗೊಂಡಿರುವ ಪತ್ರಿಕೆಯ ಜೊತೆ ಸ್ಪರ್ಧೆಗಿಳಿಯುವುದು ಸಾಧ್ಯವಾಗದು. ಕೆಲವು ವರ್ಷಗಳ ಕಾಲ ಕೋಟ್ಯಾಂತರ ರೂಪಾಯಿಗಳ ನಷ್ಟವನ್ನು ತಡೆದುಕೊಳ್ಳುವ ಶಕ್ತಿಯಿದ್ದವರಿಗೆ ಮಾತ್ರ ಅದು ಸಾಧ್ಯ. ಹಾಗಾಗಿಯೇ ಮಾಧ್ಯಮಗಳು ಬೃಹತ್ ಸಂಪನ್ಮೂಲಗಳಿರುವ ಬಂಡವಾಳಶಾಹಿಗಳ ಸೊತ್ತಾಗುತ್ತಿವೆ. ಎರಡು ದಶಕಗಳ ಹಿಂದೆ ಭಾರತದ ಎರಡನೇ ಪತ್ರಿಕಾ ಆಯೋಗ ಪುಟಗಳ ಸಂಖ್ಯೆಯ ಆಧಾರದ ಮೇಲೆ ಪತ್ರಿಕೆಯೊಂದರ ಬೆಲೆಯನ್ನು ನಿಗದಿಪಡಿಸಬೇಕು ಎಂಬ ಶಿಫಾರಸು ಮಾಡಿತ್ತು. ಆ ಶಿಫಾರಸನ್ನು ಜಾರಿಗೆ ತಂದಿದ್ದರೆ ೩೦-೪೦ ಪುಟಗಳ ಪತ್ರಿಕೆಯೊಂದನ್ನು ಒಂದೂವರೆ ರೂಪಾಯಿಗೆ ಮಾರಾಟ ಮಾಡಿ ಅಸಮಾನ ಸ್ಪರ್ಧೆ ನಡೆಸಲು ಸಾಧ್ಯವಾಗುತ್ತಿರಲಿಲ್ಲ. ಅಂತಹ ಸಂದರ್ಭದಲ್ಲಿ ಚಂದಾದಾರರ ಬೆಂಬಲದಿಂದಲೇ ಹೊಸ ಪತ್ರಿಕೆಗಳು ಮಾಧ್ಯಮ ಮಾರುಕಟ್ಟೆಯನ್ನು ಪ್ರವೇಶಿಸುವ ಅವಕಾಶವಿರುತ್ತಿತ್ತು. ದೊಡ್ಡ ಪತ್ರಿಕೆಗಳ ಮಾಲೀಕರೆಲ್ಲರೂ ಆ ಶಿಫಾರಸನ್ನು ವಿರೋಧಿಸಿ ಪತ್ರಿಕಾ ಸ್ವಾತಂತ್ರ್ಯ ಇದರಿಂದ ನಾಶವಾಗುತ್ತದೆಂಬ ಪ್ರಚಾರ ಆರಂಭಿಸಿದರು. ಪತ್ರಿಕಾ ಸ್ವಾತಂತ್ರ್ಯವೆಂದರೆ ಮಾಲೀಕರ ಸ್ವಾತಂತ್ರ್ಯ ಎಂಬುದೇ ಅವರ ನಿಲುವಾಗಿತ್ತು. ಇಂತಹ ಮಾಲೀಕರು ಪ್ರಜಾತಂತ್ರ ವ್ಯವಸ್ಥೆಯ ಬಹುಮುಖ್ಯ ಹಕ್ಕಾದ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಹೇಗೆ ರಕ್ಷಿಸಬಲ್ಲರೆಂಬುದನ್ನು ಇಲ್ಲಿ ಹೇಳಬೇಕಾಗಿಲ್ಲ.



ಬೃಹತ್ ಮಾಧ್ಯಮ ಕಾರ್ಪೊರೇಷನ್‌ಗಳ ನಡುವೆ ಏನಾದರೂ ಸ್ಪರ್ಧೆಯಿದೆಯೆ ಎಂದು ನೋಡಿದರೆ ಅದೂ ಇಲ್ಲ. ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಬೇಕಾದ ಎಲ್ಲ ತರಹದ ಹೊಂದಾಣಿಕೆ, ಸಹಕಾರ ಅವರಲ್ಲಿ ಸಾಮಾನ್ಯ. ಎರಡು-ಮೂರು ಮಾಧ್ಯಮ ಸಂಸ್ಥೆಗಳು ಸೇರಿ ಮತ್ತೊಂದು ಮಾಧ್ಯಮ ಸಂಸ್ಥೆಯೊಂದನ್ನು ಹುಟ್ಟು ಹಾಕುವುದು ಪರಸ್ಪರ ಲಾಭ ಗಳಿಕೆಗೆ ಹೂಡುವ ತಂತ್ರವಾಗಿದೆ. ಮಾಲೀಕತ್ವದ ಸಂಕೀರ್ಣ ಸ್ವರೂಪ ತಿಳಿಯದ ಅನೇಕರು ಎರಡು ಸಂಸ್ಥೆಗಳ ನಡುವೆ ಸ್ಪರ್ಧೆಯಿದೆಯೆಂದು ನಂಬುತ್ತಾರೆ. ಎಒಎಲ್ ಟೈಮ್ ವಾರ್ನರ್‌ನ ಟೆಡ್ ಟರ್ನರ್ ಇರಾಕ್ ಮೇಲಿನ ಅಮೆರಿಕಾ ಆಕ್ರಮಣದ ಸಂದರ್ಭದಲ್ಲಿ ನ್ಯೂಸ್ ಕಾರ್ಪೊರೇಷನ್‌ನ ರೂಪರ್ಟ್ ಮರ್ಡೋಕ್‌ನನ್ನು 'ಯುದ್ಧಕೋರ ಮಾಧ್ಯಮದೊಡೆಯ' ಎಂದು ದೂಷಿಸಿದ. ಆದರೆ ಅವರಿಬ್ಬರೂ ಹಲವು ಜಂಟಿ ಉದ್ಯಮಗಳಲ್ಲಿ ಬಂಡವಾಳ ಹೂಡಿರುವುದಲ್ಲದೆ ತಮ್ಮ ಮಾರುಕಟ್ಟೆಯ ವಿಸ್ತರಣೆಗೆ ಅಗತ್ಯವಾದ ಒಪ್ಪಂದ ಮಾಡಿಕೊಂಡಿದ್ದಾರೆ. ಮಾಧ್ಯಮಗಳಲ್ಲಿ ಕಾಣಿಸಿಕೊಳ್ಳುವ ಅವರಿಬ್ಬರ ನಡುವಿನ 'ಪೈಪೋಟಿ' ಸಾರ್ವಜನಿಕರನ್ನು ಮೂರ್ಖರನ್ನಾಗಿಸುವ ಕಪಟವಷ್ಟೆ. ಭಾರತದ ದೊಡ್ಡ ಮಾಧ್ಯಮ ಸಂಸ್ಥೆಗಳಾದ ಬೆನೆಟ್ ಅಂಡ್ ಕೋಲ್‌ಮನ್ ಮತ್ತು ಗೋಯೆಂಕಾ ಗುಂಪುಗಳು ಹಲವು ಉದ್ದಿಮೆಗಳಲ್ಲಿ ಒಟ್ಟಿಗೆ ಬಂಡವಾಳ ಹೂಡಿವೆ.

ಈಗಿರುವ ಜಾಗತಿಕ ಮಾಧ್ಯಮ ವ್ಯವಸ್ಥೆ ಮುಕ್ತ ಮಾರುಕಟ್ಟೆಯಲ್ಲಿ ನಡೆದ ಸ್ಪರ್ಧೆಯ ಫಲವಲ್ಲ, ಬದಲಾಗಿ ಮಾರುಕಟ್ಟೆಯ ನಿಯಮಗಳನ್ನು ತಿರುಚಿ ಸ್ಪರ್ಧೆಯೇ ಇಲ್ಲದಂತೆ ಮಾಡಿದುದರ ಫಲ. ಸ್ವತಂತ್ರ ಸಾರ್ವಭೌಮ ರಾಷ್ಟ್ರಗಳೆಂದು ಹೇಳಿಕೊಳ್ಳುವ ಹಲವು ದೇಶಗಳು ಮಾಧ್ಯಮ ದೊರೆಗಳಿಗೆ ಲಾಭದಾಯಕವಾಗುವಂತೆ ದೇಶೀಯ ನಿಯಮಗಳನ್ನು ತಿದ್ದುಪಡಿ ಮಾಡಿವೆ. ರೂಪರ್ಟ್ ಮರ್ಡೋಕ್ ಭಾರತವೂ ಸೇರಿದಂತೆ ಅನೇಕ ದೇಶಗಳ ಅಧ್ಯಕ್ಷರುಗಳು, ಪ್ರಧಾನಮಂತ್ರಿಗಳನ್ನು ಭೇಟಿ ಮಾಡಿ ಸಹಕಾರ ಕೋರಿದ್ದಾನೆ. ಎಂಬತ್ತರ ದಶಕದಲ್ಲಿ ಮಾರ್ಗರೇಟ್ ಥ್ಯಾಚರ್ ಜೊತೆ ವ್ಯವಹಾರ ಕುದುರಿಸಿ ಅವಳ ಪರ ಪ್ರಚಾರ ಮಾಡಿದ್ದಕ್ಕಾಗಿಯೇ ಅವನ ಮಾಧ್ಯಮಗಳು ಅಲ್ಲಿ ಬೆಳೆಯಲು ಸಾಧ್ಯವಾಯಿತು. ವಿದೇಶಿ ಕಂಪನಿಗಳು ಹೂಡುವ ಬಂಡವಾಳದ ಮೇಲೆ ಮಿತಿಯನ್ನು ಹೇರಿದರೆ ಸ್ಪರ್ಧೆ ಸಾಧ್ಯವಾಗುತ್ತದೆ ಎಂಬ ವಾದವನ್ನು ಕೆಲವರು ಮುಂದಿಡುತ್ತಾರೆ. ಅಂತಹ ವಾದಕ್ಕನುಗುಣವಾಗಿಯೆ ಶೇ. ೨೬ರಷ್ಟು ವಿದೇಶಿ ಬಂಡವಾಳವನ್ನು ದೇಶೀಯ ಮಾಧ್ಯಮ ಸಂಸ್ಥೆಗಳು ತೆಗೆದುಕೊಳ್ಳಬಹುದು ಎಂಬ ನಿಯಮ ಮಾಡಲಾಗಿದೆ. ಕಂಪನಿ ಕಾಯಿದೆಯ ಪ್ರಕಾರ ಶೇ. ೨೬ರಷ್ಟು ಶೇರುಗಳನ್ನು ಹೊಂದಿರುವವರು ವಿಟೊ ಅಧಿಕಾರ ಹೊಂದಿರುವುದರಿಂದ ಮಾಧ್ಯಮ ಸಂಸ್ಥೆಗಳ ನೀತಿಗಳನ್ನು ಅವರ ಉಪಯೋಗಕ್ಕೆ ತಕ್ಕಂತೆ ತಿರುಚಲು ಸಾಧ್ಯ. ಅಲ್ಲದೆ ಶೇ. ೪೯ರ ತನಕ ವಿದೇಶಿ ಬಂಡವಾಳ ಹೊಂದಿರುವ ಕಂಪನಿಗಳು ಮಾಧ್ಯಮ ಸಂಸ್ಥೆಗಳ ಉಳಿದ ಶೇ. ೭೪ರಷ್ಟು ಶೇರುಗಳನ್ನು ಕೊಂಡುಕೊಳ್ಳಬಹುದು. ರೂಪರ್ಟ್ ಮರ್ಡೋಕ್‌ನ ಸ್ಟಾರ್ ಟಿವಿ ತನ್ನ ಶೇರುಗಳ ವಿಕ್ರಯದಲ್ಲಿ ಸರ್ಕಾರ ಹಾಕಿದ ಷರತ್ತುಗಳನ್ನು ಉಲ್ಲಂಘಿಸಲು ಹೂಡಿದ ತಂತ್ರಗಳು ಮಾಧ್ಯಮ ವೀಕ್ಷಕರೆಲ್ಲರಿಗೂ ತಿಳಿದ ವಿಷಯವಾಗಿದೆ. ಭಾರತೀಯ ಬಹುರಾಷ್ಟ್ರೀಯ ಕಂಪನಿ ಎಂದು ಸಂಘಪರಿವಾರದ ಸ್ವದೇಶಿ ಜಾಗರಣ ಮಂಚದಿಂದ ಪ್ರಶಂಸಿಸಲ್ಪಟ್ಟಿರುವ ಐಟಿಸಿ (ಇಂಡಿಯನ್ ಟೊಬ್ಯಾಕೋ ಕಂಪನಿ)ಯ ವ್ಯವಹಾರಗಳನ್ನು ನಿರ್ದೇಶಿಸುತ್ತಿರುವುದು ಶೇ. ೨೬ರಷ್ಟು ಶೇರುಗಳನ್ನು ಹೊಂದಿರುವ ಬ್ಯಾಟ್ (ಬ್ರಿಟಿಷ್ ಅಮೆರಿಕನ್ ಟೊಬ್ಯಾಕೊ) ಕಂಪನಿ. ಐಟಿಸಿಯ ಇಂದಿನ ಅಧ್ಯಕ್ಷರನ್ನು ಆಯ್ಕೆ ಮಾಡಿದ್ದು ಹೆಚ್ಚು ಶೇರುಗಳನ್ನು ಹೊಂದಿರುವ ಭಾರತೀಯ ಹಣಕಾಸು ಸಂಸ್ಥೆಗಳಲ್ಲ, ಅಲ್ಪ ಶೇರುಳ್ಳ ಬ್ಯಾಟ್. ಕೇವಲ ಶೇ. ೧೦ ಶೇರುಗಳಿರುವವರೂ ಕಂಪನಿಯ ನಿರ್ಧಾರಗಳ ಮೇಲೆ ಪ್ರಭಾವ ಬೀರಬಹುದೆಂಬುದು ವಾಣಿಜ್ಯ ಕ್ಷೇತ್ರದಲ್ಲಿರುವವರೆಲ್ಲರಿಗೂ ತಿಳಿದ ವಿಷಯ. ದೇಶೀಯ ಮಾಧ್ಯಮಗಳಲ್ಲಿ ವಿದೇಶಿ ಹೂಡಿಕೆ ಎಷ್ಟಿರಬೇಕು ಎಂಬ ಚರ್ಚೆ ನಡೆಯುತ್ತಿರುವಾಗಲೇ ಮಾಧ್ಯಮ ಮಾರುಕಟ್ಟೆಯ ಪ್ರಮುಖ ಅಂಗಗಳಾದ ಜಾಹಿರಾತು ಮತ್ತು ಮಾರುಕಟ್ಟೆ ಸಂಶೋಧನೆ ಬಹುರಾಷ್ಟ್ರೀಯ ಕಂಪನಿಗಳ ಕೈಸೇರಿವೆ.

ಎಂಬತ್ತರ ದಶಕದಲ್ಲಿ ಬಹುತೇಕ ಭಾರತೀಯರ ಕೈಯಲ್ಲಿದ್ದ ಜಾಹಿರಾತು ಸಂಸ್ಥೆಗಳು ಈಗ ವಿದೇಶಿ ಸಂಸ್ಥೆಗಳ ಹಿಡಿತದಲ್ಲಿವೆ. ಇಂಟರ್‌ಪಬ್ಲಿಕ್, ಅಮ್ನಿಕಾಮ್ ಮತ್ತು ಡಬ್ಲ್ಯುಪಿಪಿ ಎಂಬ ಬಹುರಾಷ್ಟ್ರೀಯ ಕಾರ್ಪೊರೇಷನ್‌ಗಳಿಗೆ ಸೇರಿದ ಜಾಹಿರಾತು ಸಂಸ್ಥೆಗಳು ಭಾರತದ ಒಟ್ಟು ಜಾಹಿರಾತು ವೆಚ್ಚದ ಶೇ. ೭೦ಕ್ಕೂ ಹೆಚ್ಚು ಪಾಲನ್ನು ಹೊಂದಿವೆ. ಜಾಹಿರಾತಿಗಾಗಿ ಮಾಧ್ಯಮ ಆಯ್ಕೆಯನ್ನು ಈ ಸಂಸ್ಥೆಗಳು ನಿರ್ಧರಿಸುವುದರಿಂದ ವಿದೇಶಿ ಮಾಧ್ಯಮಗಳಿಗೆ ಸಹಜವಾಗಿಯೇ ಹಣ ಹರಿದುಬರುತ್ತದೆ.

ಮಾರುಕಟ್ಟೆ ಸಂಶೋಧನಾ ಸಂಸ್ಥೆಗಳು ವೀಕ್ಷಕರ, ಶ್ರೋತೃಗಳ ಮತ್ತು ಓದುಗರ ಸಮೀಕ್ಷೆಗಳನ್ನು ನಡೆಸುವುದಲ್ಲದೆ ಸಾರ್ವಜನಿಕ ಅಭಿಪ್ರಾಯ ಸಮೀಕ್ಷೆಗಳನ್ನು ನಡೆಸುತ್ತವೆ. ಓದುಗರು ಮತ್ತು ಮತದಾರರ ಮೇಲೆ ಈ ಸಮೀಕ್ಷೆಗಳು ಪ್ರಭಾವ ಬೀರುತ್ತವೆ. ಭಾರತದಲ್ಲೀಗ ಮಾರುಕಟ್ಟೆ ಮತ್ತು ಅಭಿಪ್ರಾಯ ಸಮೀಕ್ಷೆಗಳನ್ನು ನಡೆಸುವ ಇಂಡಿಯನ್ ಮಾರ್ಕೆಟ್ ರೀಸರ್ಚ್ ಬ್ಯೂರೊ, ಒಆರ್‌ಜಿ-ಮಾರ್ಗ್, ಪಾಥ್‌ಫೈಂಡರ್ಸ್ ಇವೆಲ್ಲವೂ ವಿದೇಶಿ ಕಂಪನಿಗಳ ವಿಭಾಗಗಳು. ಬಹುರಾಷ್ಟ್ರೀಯ ಕಂಪನಿಗಳನ್ನು ಉತ್ತೇಜಿಸುವ ಮತ್ತು ಪಾಶ್ಚಿಮಾತ್ಯ ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ವಸಾಹತುಶಾಹಿಯನ್ನು ಬೆಂಬಲಿಸುವ ರಾಜಕಾರಣಿಗಳನ್ನು ದಕ್ಷ ಮತ್ತು ದೂರದೃಷ್ಟಿಯುಳ್ಳ ನಾಯಕರೆಂದು ಬಣ್ಣಿಸುತ್ತಿವೆ. ಸಂಖ್ಯೆಗಳಲ್ಲಿ ಜಾಣತನದಿಂದ ತೋರಿಸಲಾಗುವ ಅಭಿಪ್ರಾಯಗಳು ಸತ್ಯವೆಂದು ತೋರುತ್ತವೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ

ನಾಯಕರುಗಳ ದಕ್ಷತೆಯನ್ನು ಸೋಪು ಟೂತ್‌ಪೇಸ್ಟ್‌ಗಳ ಮಾರುಕಟ್ಟೆ ಸ್ಥಾನವನ್ನು ಗುರುತಿಸುವ ವಿಧಾನಗಳಿಂದಲೇ ಅಳೆಯುವುದು ಅವೈಜ್ಞಾನಿಕ ಮತ್ತು ಅಪ್ರಸ್ತುತ.

ಈ ವರ್ಷದ ಸಂಯುಕ್ತ ರಾಷ್ಟ್ರಗಳ ಮಾನವ ಅಭಿವೃದ್ಧಿ ವರದಿಯಲ್ಲಿ ಭಾರತ ೧೨೭ನೇ ಸ್ಥಾನಕ್ಕೆ ಇಳಿದಿರುವುದು ಅಚ್ಚರಿಯ ವಿಷಯವೇನೂ ಅಲ್ಲ. ಆದರೆ ಆ ವರದಿ ಕೇರಳ, ಪಶ್ಚಿಮ ಬಂಗಾಳ ಮತ್ತು ಮಧ್ಯಪ್ರದೇಶ ರಾಜ್ಯಗಳು ಸಾಧಿಸಿರುವ ಪ್ರಗತಿಯನ್ನು ಪ್ರಶಂಸಿಸಿರುವುದು ಗಮನಾರ್ಹ. ವಾಸ್ತವ ಸ್ಥಿತಿ ಹೀಗಿದ್ದರೂ ಒಆರ್‌ಜಿ-ಮಾರ್ಗ್ ಮತ್ತು ಇಂಡಿಯಾ ಟುಡೆ ಸಮೀಕ್ಷೆಯ ಪ್ರಕಾರ 'ನಂಬರ್ ಒನ್' ಮುಖ್ಯಮಂತ್ರಿಗಳಿರುವುದು ಕರ್ನಾಟಕದಲ್ಲಿ! ಸಮೀಕ್ಷೆಗಳ ಫಲಿತಾಂಶಗಳಿಗೂ ವಾಸ್ತವತೆಗೂ ಯಾವುದೇ ಸಂಬಂಧವಿಲ್ಲವೆನ್ನುವುದು ಇದರಿಂದ ಸ್ಪಷ್ಟ. ಏನನ್ನೂ ಲೆಕ್ಕಿಸದೆ ಉದಾರೀಕರಣ ಮತ್ತು ಜಾಗತೀಕರಣವನ್ನು ತ್ವರಿತವಾಗಿ ಜಾರಿಗೆ ತರಬೇಕೆಂದು ವಾದಿಸುತ್ತಿರುವ ಇಂಡಿಯಾ ಟುಡೆಯ ಸಂಪಾದಕೀಯ ನೀತಿಗೆ ಈ ಫಲಿತಾಂಶಗಳು ಪೂರಕವಾಗಿಯೇ ಇವೆ. ಅಂದರೆ ಮಾಧ್ಯಮವೊಂದರ ಸಂಪಾದಕೀಯ ನೀತಿಗೆ ತಕ್ಕಂತೆ ಸಮೀಕ್ಷಾ ಫಲಿತಾಂಶಗಳನ್ನು ಸೃಷ್ಟಿಸಬಹುದು. ಅಮೆರಿಕೀಕರಣವೇ ಅಭಿವೃದ್ಧಿಯೆಂದು ತಿಳಿದಿರುವ ಆಂಧ್ರ ಪ್ರದೇಶದ ಮುಖ್ಯಮಂತ್ರಿಗಳು ಇಂತಹ ಸಮೀಕ್ಷೆಗಳ ಪ್ರಕಾರ ಭಾರತದ ಪ್ರಗತಿಯ ಸಂಕೇತವಾಗುತ್ತಾರೆ. ಎಲ್ಲವನ್ನು ಕಳೆದುಕೊಂಡು ಹತಾಶರಾದ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದು ಕೇವಲ ಮಾನಸಿಕ ಸಮಸ್ಯೆಗಳಿಂದಾಗಿ ಎಂದು ಹೇಳಲಾಗುತ್ತಿದೆ.

ಪ್ರಕಟನಾರ್ಹ ವಿಷಯವಾಗುತ್ತದೆ. ಇಂದಿನ ಪತ್ರಿಕೋದ್ಯಮದ ದುರಂತವೆಂದರೆ ಸಂಪಾದಕ ಅನಗತ್ಯವಾಗುತ್ತಿರುವುದು. ವಾಣಿಜ್ಯ ಶಕ್ತಿಗಳೇ ಮಾಧ್ಯಮಗಳನ್ನು ನಿಯಂತ್ರಿಸಿದರೆ ಪ್ರಜಾತಂತ್ರ ವ್ಯವಸ್ಥೆ ತನ್ನ ಎಲ್ಲ ಅರ್ಥವನ್ನು ಕಳೆದುಕೊಳ್ಳುತ್ತದೆ. ಅವುಗಳು ಜನಸಾಮಾನ್ಯರ ಸಮಸ್ಯೆಗಳನ್ನು, ಆಶೋತ್ತರಗಳನ್ನು ಪ್ರತಿನಿಧಿಸಲಾರವು.

ಪ್ರಜಾತಂತ್ರದ ನಿಜವಾದ ಸಂವಹನ ಸಾಧನ 'ಇಂಟರ್‌ನೆಟ್' ಎಂದೂ, ಮಾಧ್ಯಮ ಸಾಮ್ರಾಜ್ಯಗಳ ಏಕಸ್ವಾಮ್ಯ ಶಕ್ತಿಯನ್ನು ಅದು ಮುರಿಯಬಲ್ಲದೆಂದೂ ತಂತ್ರಜ್ಞಾನ ಪ್ರಿಯರು ಹರ್ಷೋದ್ಗಾರ ಮಾಡಿದ್ದರು. ತಂತ್ರಜ್ಞಾನದ ಬಗೆಗಿನ ಇಂತಹ ಘೋಷಣೆ ಹೊಸದೇನೂ ಅಲ್ಲ. ಅಟ್ಲಾಂಟಿಕ್ ಸಾಗರದುದ್ದಕ್ಕೂ ೧೮೫೮ರಲ್ಲಿ ಟೆಲಿಗ್ರಾಫ್ ಕೇಬಲ್ ಹಾಕಿದಾಗ ದೇಶ-ದೇಶಗಳ ನಡುವಣ ಹಗೆತನ, ಪೂರ್ವಾಗ್ರಹಗಳು ಮಾಯವಾಗುತ್ತವೆ ಎಂಬ ಉದ್ಗಾರ ಮಾಡಲಾಯಿತು. ರೇಡಿಯೋ ಆರಂಭವಾದಾಗ ಕೂಡ 'ದೇಶ-ದೇಶಗಳ ನಡುವಣ ಶಾಂತಿಯ ಸಂವಾದ' ಯುದ್ಧಗಳನ್ನು ಕೊನೆಗೊಳಿಸುತ್ತದೆಂಬ ಆಶಯ ವ್ಯಕ್ತವಾಯಿತು. ಎರಡು ಮಹಾಯುದ್ಧಗಳು ಈ ನಂಬುಗೆಯನ್ನು ಹುಸಿಯಾಗಿಸಿದವು.

ಜೀವ ತಂತ್ರಜ್ಞಾನ ಹಸಿವೆಗೆ ಮದ್ದೆಂದೂ, ಡಿಎನ್‌ಎ ವರ್ಗೀಕರಣ ಎಲ್ಲ ರೋಗಗಳಿಗೆ ಪರಿಹಾರವೆಂದೂ, ಇಂಟರ್‌ನೆಟ್ ಮುಕ್ತ ಸಂವಹನಕ್ಕೆ ಬಂದಿರುವ ವರವೆಂದೂ ಇಂದು ಪ್ರಚಾರ ನಡೆಯುತ್ತಿದೆ.

ಮಾನವನ ಎಲ್ಲ ಸಮಸ್ಯೆಗಳಿಗೆ ಮಾರುಕಟ್ಟೆ ಮತ್ತು ತಂತ್ರಜ್ಞಾನ ಪರಿಹಾರವೆಂಬ

**ಮುಕ್ತ ಮಾರುಕಟ್ಟೆ ಮತ್ತು ತಂತ್ರಜ್ಞಾನದಿಂದಾಗಿಯೇ ಸ್ವತಂತ್ರ ಮತ್ತು ಜನಪರ ಮಾಧ್ಯಮಗಳು ಬೆಳೆಯುವವೆಂಬ ನಂಬಿಕೆ ಕೇವಲ ಮರೀಚಿಕೆ. ಇಂದಿನ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸ್ಥಿತಿಯಲ್ಲಿ ಮುಕ್ತ ಮಾಧ್ಯಮಗಳು ಬೆಳೆಯಲಾರವು. ಆದ್ದರಿಂದ ಪರ್ಯಾಯ ದಾರಿಗಳನ್ನು ಕಂಡುಕೊಳ್ಳಬೇಕಾಗಿದೆ.**

ಮಾಧ್ಯಮ ಪ್ರಪಂಚದಲ್ಲಿ ಇತ್ತೀಚೆಗೆ ಕಂಡುಬರುತ್ತಿರುವ ಪ್ರವೃತ್ತಿಯೆಂದರೆ ಪತ್ರಿಕೋದ್ಯಮ, ಜಾಹಿರಾತು ಮತ್ತು ಸಾರ್ವಜನಿಕ ಸಂಪರ್ಕ ಐಕ್ಯವಾಗುತ್ತಿರುವುದು. ಬಹಳ ದಿನಗಳಿಂದ ಇದ್ದ ಜಾಹಿರಾತು ಮತ್ತು ಸಂಪಾದಕೀಯ ವಿಭಾಗಗಳ ನಡುವಿನ ರೇಖೆ ಮಾಯವಾಗುತ್ತಿದೆ. ಕೆಲವು ವರ್ಷಗಳ ಹಿಂದೆ ಖಾಸಗಿ ಕಂಪನಿಗಳ ಸಾಧನೆಯ ಬಗ್ಗೆ ವರದಿಗಳು ಸುದ್ದಿಪುಟಗಳಲ್ಲಿ ಪ್ರಕಟವಾಗುತ್ತಿರಲಿಲ್ಲ. ಜಾಹಿರಾತುಗಳಲ್ಲಿ ಮಾತ್ರ ಕಾಣಿಸಿಕೊಳ್ಳುತ್ತಿದ್ದವು. ಆದರೆ ಈಗ ಕಂಪನಿ ವ್ಯವಹಾರಗಳೆಲ್ಲಾ ಮುಖಪುಟಗಳಲ್ಲಿ ಸುದ್ದಿಗಳಾಗುತ್ತಿವೆ. ಜನಸಾಮಾನ್ಯರ ಬದುಕನ್ನು ನರಕವನ್ನಾಗಿಸಿ ಲಾಭಗಳಿಸುತ್ತಿರುವ ಮತ್ತು ವಸಾಹತುಶಾಹಿ ಶಕ್ತಿಗಳ ಸೇವೆ ಮಾಡುತ್ತಿರುವ ಕಂಪನಿಗಳ ಒಡೆಯರು ಸದಾ ಸುದ್ದಿ ಪತ್ರಿಕೆಗಳ ಪುಟಗಳಲ್ಲಿ ಪ್ರಶಂಸನೀಯವಾಗಿ ಚಿತ್ರಿತವಾಗುತ್ತಾರೆ. ವಿದೇಶಿ ಸಂಸ್ಥೆಗಳ ಸಾಫ್ಟ್‌ವೇರ್ ಅಗತ್ಯಗಳನ್ನು ಪೂರೈಸಲು ತಾಂತ್ರಿಕ ಕೆಲಸಗಾರರ ಗುತ್ತಿಗೆ ಹಿಡಿದಿರುವ ಇನ್‌ಫೋಸಿಸ್ ಸಂಸ್ಥೆಯ ನಾರಾಯಣಮೂರ್ತಿ ಮಾಧ್ಯಮಗಳಲ್ಲಿ ಪ್ರತಿದಿನ ಸುದ್ದಿಯಾಗುತ್ತಾರೆ. ಮೀಸಲಾತಿ, ಸಾಮಾಜಿಕ ನ್ಯಾಯ, ಉದ್ಯೋಗ ಭದ್ರತೆ ಮತ್ತು ಬಡವರಿಗೆ ಉನ್ನತ ಶಿಕ್ಷಣ ಅವಕಾಶ ಕಲ್ಪಿಸುವ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯನ್ನು ವಿರೋಧಿಸುವ ನಾರಾಯಣಮೂರ್ತಿ ಭಾರತದ 'ಅಭಿವೃದ್ಧಿಯ' ಸಂಕೇತವಾಗಿ ಮಾಧ್ಯಮಗಳಲ್ಲಿ ರಾರಾಜಿಸುತ್ತಾರೆ. ಸರ್ಕಾರಿ ಸಂಸ್ಥೆಗಳು ಮತ್ತು ಸಾರ್ವಜನಿಕ ಕ್ಷೇತ್ರದ ಸಂಸ್ಥೆಗಳ ಮೇಲೆ ತನಿಖಾ ವರದಿಗಳನ್ನು ನೀಡುವ ಮಾಧ್ಯಮಗಳು ಇಂದು ಎಲ್ಲಾ ಕ್ಷೇತ್ರಗಳಿಗೂ ಲಗ್ಗೆಯಿಡುತ್ತಿರುವ ಖಾಸಗಿ ಕಂಪನಿಗಳ ಭ್ರಷ್ಟತೆಯ ಬಗ್ಗೆ ಮೌನ ತಳೆಯುತ್ತವೆ.

ಹಣಕ್ಕಾಗಿ ಸುದ್ದಿಯ ಕಾಲಂಗಳನ್ನು ಮಾರುವ ಹೊಸ ನೀತಿಯನ್ನು ಆರಂಭಿಸಿರುವ ದಿ ಟೈಮ್ಸ್ ಆಫ್ ಇಂಡಿಯಾ ಆ ನೀತಿ ನೈತಿಕವಾದುದೆಂದು ಸಮರ್ಥಿಸಿಕೊಂಡಿದೆ. ಇಷ್ಟು ಕಾಲಂ ಸುದ್ದಿ ಪ್ರಕಟಿಸಿದರೆ ಇಷ್ಟು ದರ ಎಂಬ ವಿವರಗಳು ಪತ್ರಿಕೋದ್ಯಮದಲ್ಲಿ ಹಲವು ಅನೈತಿಕ ಸಂಪ್ರದಾಯಗಳನ್ನು ಸೃಷ್ಟಿಸಿರುವ ಈ ಪತ್ರಿಕೆಯ ವೆಬ್‌ಸೈಟ್‌ನಲ್ಲಿವೆ. ಖಾಸಗಿ ಸಂಸ್ಥೆಗಳ ಪ್ರಚಾರ ನಿರ್ವಹಣಕಾರರು ತಮ್ಮ 'ಪತ್ರಿಕಾ ಪ್ರಕಟಣೆ'ಗಳನ್ನು ಸಂಪಾದಕರುಗಳಿಗೆ ಕಳುಹಿಸದೆ ನೇರ ವಾಣಿಜ್ಯ ವಿಭಾಗಕ್ಕೆ ಕಳುಹಿಸುತ್ತಾರೆ. ಆ ವಿಭಾಗವು 'ಪ್ರಕಟಣೆ'ಯನ್ನು ಸುದ್ದಿಯಾಗಿ ಪ್ರಕಟಿಸಲು ದರವನ್ನು ನಿರ್ಧರಿಸಿ ನಂತರ ಸಂಪಾದಕನ ಗಮನಕ್ಕೆ ತರುತ್ತದೆಯಷ್ಟೆ. ಸುದ್ದಿಯ ಆಯ್ಕೆಯಲ್ಲಿ ಸಂಪಾದಕನಿಗಿರುವ ಸ್ವಾತಂತ್ರ್ಯವನ್ನು ಕಸಿದುಕೊಳ್ಳಲಾಗಿದೆ. ದೊಡ್ಡ ಜಾಹಿರಾತುದಾರರು ಏನನ್ನು ಬಯಸುತ್ತಾರೋ ಅದೇ

ಭ್ರಮೆಯನ್ನು ಹರಡಲಾಗುತ್ತಿದೆ. ಆರಂಭದ ಕೆಲವು ದಿನಗಳವರೆಗೆ ನಿಯಂತ್ರಣ ರಹಿತವಾಗಿದ್ದ ಇಂಟರ್‌ನೆಟ್ ಈಗ ಅತಿ ಹೆಚ್ಚಿನ ಸೆನ್ಸಾರ್‌ಗೆ ಒಳಗಾಗಿರುವ ಮಾಧ್ಯಮ. ಎಲ್ಲ ಸಂದೇಶಗಳೂ ಇಂಟರ್‌ನೆಟ್ ಸೇವೆ ನೀಡುವವರ ಮೂಲಕ ಹೋಗಬೇಕಾದ್ದರಿಂದ ಬೇರೆ ಮಾಧ್ಯಮಗಳಿಗಿಂತ ಇಂಟರ್‌ನೆಟ್ ಅನ್ನು ಸೆನ್ಸಾರ್ ಮಾಡುವುದು ಸುಲಭದ ಕೆಲಸ. ಬಹುತೇಕ ಸರ್ವರ್‌ಗಳು ಅಮೆರಿಕಾದಲ್ಲಿರುವುದರಿಂದ ಇಂಟರ್‌ನೆಟ್ ಜಾಲ ಅಮೆರಿಕಾ ಕಂಪನಿಗಳ ಹಿಡಿತದಲ್ಲಿದೆ. ಏಷಿಯಾ, ಆಫ್ರಿಕಾ ಮತ್ತು ದಕ್ಷಿಣ ಅಮೆರಿಕಾದ ರಾಷ್ಟ್ರಗಳು ಪರಸ್ಪರ ಸಂಪರ್ಕ ಹೊಂದಿರದೆ ಅಮೆರಿಕಾದ ಮೂಲಕವೇ ಸಂವಹನ ನಡೆಸಬೇಕಾಗಿದೆ. ಭಾರತದಿಂದ ನೆರೆಯ ದೇಶಗಳಿಗೆ ಹೋಗುವ ಇಂಟರ್‌ನೆಟ್ ಸಂದೇಶಗಳು ಅಮೆರಿಕಾದಲ್ಲಿರುವ ಸರ್ವರ್‌ಗಳ ಮೂಲಕವೇ ರವಾನೆಯಾಗುತ್ತವೆ. ತಂತ್ರಜ್ಞಾನ ಬೆಳೆದಂತೆಲ್ಲಾ ಪ್ರಪಂಚದುದ್ದಕ್ಕೂ ಅಮೆರಿಕಾದ ವಸಾಹತುಶಾಹಿ ವಿಸ್ತರಣೆ ಮತ್ತು ನಿಯಂತ್ರಣ ಹೆಚ್ಚಾಗುತ್ತಿದೆ. ಇಂಟರ್‌ನೆಟ್ ಎಲ್ಲರಿಗೂ ಉಚಿತವಾಗಿ ಲಭಿಸುತ್ತದೆ ಎಂಬುದು ಸತ್ಯಕ್ಕೆ ದೂರವಾದ ವಾದ. ಒಂದು ಕಂಪ್ಯೂಟರ್, ಮೋಡೆಮ್, ಟೆಲಿಫೋನ್ ಇದ್ದು ಇಂಟರ್‌ನೆಟ್ ಸೇವೆಗೆ ಚಂದಾದರ ಕೊಡುವ ಶಕ್ತಿಯಿದ್ದವರಿಗೆ ಅದು 'ಉಚಿತ.' ಖಾಸಗಿ ಕಾರ್ಪೊರೇಷನ್‌ಗಳು ಮತ್ತು ಸರ್ಕಾರಗಳು ಅದನ್ನು ನಿಯಂತ್ರಿಸುವುದರಿಂದ ಜನಸಾಮಾನ್ಯರಿಗೆ ದಕ್ಕುವ ಯಾವುದೇ ಸಾಧ್ಯತೆ ಕಾಣುತ್ತಿಲ್ಲ. ಈ ಕಾರಣಕ್ಕಾಗಿಯೇ ತೆಹೆಲ್ಕಾ ಡಾಟ್‌ಕಾಮ್‌ನ ತರುಣ್ ತೇಜಪಾಲ್ ಒಂದು ಮುದ್ರಿತ ಪತ್ರಿಕೆಯನ್ನು ಹೊರತರುವ ನಿರ್ಧಾರಕ್ಕೆ ಬಂದಿದ್ದಾರೆ. ಮುಕ್ತ ಮಾರುಕಟ್ಟೆ ಮತ್ತು ತಂತ್ರಜ್ಞಾನದಿಂದಾಗಿಯೇ ಸ್ವತಂತ್ರ ಮತ್ತು ಜನಪರ ಮಾಧ್ಯಮಗಳು ಬೆಳೆಯುವವೆಂಬ ನಂಬಿಕೆ ಕೇವಲ ಮರೀಚಿಕೆ. ಇಂದಿನ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸ್ಥಿತಿಯಲ್ಲಿ ಮುಕ್ತ ಮಾಧ್ಯಮಗಳು ಬೆಳೆಯಲಾರವು. ಆದ್ದರಿಂದ ಪರ್ಯಾಯ ದಾರಿಗಳನ್ನು ಕಂಡುಕೊಳ್ಳಬೇಕಾಗಿದೆ.

**ಡಾ॥ ಡಿ. ಎಸ್. ಪೂರ್ಣಾನಂದ**
ಸಮೂಹ ಸಂವಹನ ಮತ್ತು ಪತ್ರಿಕೋದ್ಯಮ ವಿಭಾಗ
ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳೂರು - ೫೭೪ ೧೯೯

# ಅವರೋಧವಾಸಿನಿ



**ಮು**ಸ್ಲಿಂ ಮಹಿಳೆಯರು ಸಾಮಾಜಿಕವಾಗಿ ಮತ್ತು ಧಾರ್ಮಿಕವಾಗಿ ಅನೇಕ ಕಟ್ಟುಪಾಡುಗಳ ನಡುವೆ ಬದುಕಬೇಕಾಗುತ್ತದೆ. ಅನೇಕ ವಿಧಿನಿಷೇಧಗಳು ಅವರ ಸ್ವಾತಂತ್ರ್ಯವನ್ನು ಮೊಟಕು ಮಾಡಿವೆ ಅಥವಾ ಸಂಪೂರ್ಣವಾಗಿ ಇಲ್ಲವಾಗಿಸಿವೆ. – ಈ ಮಾತುಗಳು ಕೇವಲ ಮುಸ್ಲಿಂ ಮಹಿಳೆಯರಿಗೆ ಮಾತ್ರವಲ್ಲದೆ ಹಿಂದು ಮೊದಲಾದ ಸಮಾಜಗಳಲ್ಲೂ ಸಹ ಇಂತಹ ಕಟ್ಟುಪಾಡುಗಳನ್ನು, ವಿಧಿನಿಷೇಧಗಳನ್ನೂ ಕಾಣಬಹುದು. ಆದರೆ ಇತರ ಸಮಾಜಗಳು ಬದಲಾಗುತ್ತಿರುವ ಕಾಲಮಾನಕ್ಕೆ ತಮ್ಮನ್ನು ತಾವು ತೆರೆದುಕೊಂಡಿವೆಯಾದರೂ, ಮುಸ್ಲಿಂ ಸಮಾಜ ಈ ಬದಲಾವಣೆಗಳನ್ನು ಅಷ್ಟು ಬೇಗ ಒಪ್ಪಿಕೊಳ್ಳುತ್ತಿಲ್ಲ ಅಷ್ಟೆ. ಬುರ್ಕಾ ಧರಿಸಿ ಅಡ್ಡಾಡುವ ಮುಸ್ಲಿಂ ಮಹಿಳೆಯರನ್ನು ನಾವು ಈಗಲೂ ಕಾಣುತ್ತೇವೆ.

ಮುಸ್ಲಿಂ ಮಹಿಳೆಯರ ಮೇಲೆ ಹೇರಿರುವ ವಿಧಿನಿಷೇಧಗಳಲ್ಲಿ 'ಬುರ್ಕಾ' ಒಂದು. ತನ್ನ ದೇಹದ ಯಾವುದೇ ಅಂಗವನ್ನು ತನ್ನ ಕುಟುಂಬದ ಸದಸ್ಯರಲ್ಲದೆ ಇತರರಿಗೆ ತೋರಿಸುವಂತಿಲ್ಲ. ಇಂತಹ ಅನೇಕ 'ಮಾಡು ಮಾಡದಿರು' ಎನ್ನುವ ನಿಯಮಗಳನ್ನು ದೇವರ ಹೆಸರಿನಲ್ಲಿ, ಧರ್ಮದ ಹೆಸರಿನಲ್ಲಿ ಹೆಣ್ಣು ಮಕ್ಕಳ ಮೇಲೆ ಹೇರಲಾಗಿದೆ. ಆಧುನಿಕ ಶಿಕ್ಷಣ, ವಿದೇಶಿ ಸಂಸ್ಕೃತಿಯ ಪ್ರಭಾವ, ಬದಲಾಗುತ್ತಿರುವ ಸಮಾಜ, ದೃಷ್ಟಿಕೋನಗಳು, ಮಹಿಳೆಯರಲ್ಲಿ ಹೆಚ್ಚುತ್ತಿರುವ ಜಾಗೃತಿ, ಮಹಿಳಾ ಉದ್ಯೋಗಾವಕಾಶಗಳು – ಮೊದಲಾದವು ಈ ಕಟ್ಟುಪಾಡುಗಳು ಸ್ವಲ್ಪಮಟ್ಟಿಗೆ ಶಿಥಿಲವಾಗಲು ಕಾರಣವಾಗುತ್ತಿವೆ.

ಆದರೆ, ಇಂದಿಗೆ ನೂರು-ನೂರೈವತ್ತು ವರ್ಷಗಳ ಹಿಂದೆ ಇಂತಹ ವಿಧಿನಿಷೇಧಗಳನ್ನು ಅತಿ ಕಟ್ಟುನಿಟ್ಟಾಗಿ ಪಾಲಿಸಲಾಗುತ್ತಿತ್ತು. ಹುಡುಗಿ ಪ್ರಾಪ್ತ ವಯಸ್ಕಳಾಗುತ್ತಿರುವಂತೆಯೇ – ಅಂದರೆ ಏಳೆಂಟು ವರ್ಷದವಳಾಗುತ್ತಲೇ – ಈ ವಿಧಿನಿಷೇಧಗಳಿಗೆ ಅವಳು ಅಧೀನಳಾಗಬೇಕಾಗುತ್ತಿತ್ತು – ಆಕೆ ಕುಟುಂಬದ ಸದಸ್ಯರಲ್ಲದೆ ಬೇರೆ ಯಾರೊಂದಿಗೂ ಬೆರೆಯುವಂತಿಲ್ಲ, ಜೋರಾಗಿ ಮಾತನಾಡುವಂತಿಲ್ಲ, ಜೋರಾಗಿ ನಗುವಂತಿಲ್ಲ, ಓಡುವಂತಿಲ್ಲ, ನೆಗೆಯುವಂತಿಲ್ಲ, ತಮ್ಮ ದೇಹ, ದೇಹ ಭಾಗಗಳನ್ನು (ಕೈ-ಕಾಲುಗಳನ್ನೂ ಸಹ) ಇತರರಿಗೆ ತೋರಿಸುವಂತಿಲ್ಲ, ತಮ್ಮ ಧ್ವನಿಯನ್ನು ಇತರರಿಗೆ ಕೇಳಿಸುವಂತಿಲ್ಲ – ಹೀಗೆ ಪಟ್ಟಿ ಬೆಳೆಯುತ್ತಲೇ ಸಾಗುತ್ತದೆ. ಆ ಕಾಲದ ಹೆಣ್ಣು ಮಕ್ಕಳೂ ಸಹ ಈ ನಿಯಮಗಳನ್ನು ತುಟಿ ಪಿಟಿಕ್ ಎನ್ನದೆ ಚ ಚು ತಪ್ಪದೆ ಪಾಲಿಸುತ್ತಿದ್ದರು. ಇದರಲ್ಲಿ ಎಷ್ಟು ಭಾಗವನ್ನು ಅವರು ಮನಸಾರೆ ಒಪ್ಪಿ ಪಾಲಿಸುತ್ತಿದ್ದರೋ, ಎಷ್ಟು ಭಾಗವನ್ನು ಹೆದರಿಕೆ ಅಥವಾ ಬೆದರಿಕೆಯಿಂದ ಪಾಲಿಸುತ್ತಿದ್ದರೋ ತಿಳಿಯದು.

ಪ್ರಾಪ್ತ ವಯಸ್ಕಳಾದ ಹುಡುಗಿ ತನ್ನ ಮನೆಯಲ್ಲೂ ಸಹ ಮನೆಯ ಅಂಗಳಕ್ಕೆ ಬರುವಂತಿಲ್ಲ. ತಮ್ಮದೇ ಮನೆಯ ಬೈಠಕ್ ಖಾನೆಗೂ ಅವಳಿಗೆ ಪ್ರವೇಶವಿಲ್ಲ. ಮನೆಯ ಒಳಗಿನ ಒಂದು ಕೊಠಡಿಯಲ್ಲಿಯೇ ಆಕೆಯ ವಾಸ. ಇಂತಹ ಕೊಠಡಿಗೆ 'ಅಂದರ್ ಮಹಲ್' ಎನ್ನುತ್ತಾರೆ. ಇಲ್ಲಿ ವಾಸಿಸುವವರಿಗೆ 'ಅವರೋಧವಾಸಿನಿ' ಎಂದು ಕರೆಯುತ್ತಾರೆ. ಅವರೋಧ ಎಂದರೆ ಅಡೆ-ತಡೆ, ಅಡ್ಡಿ, ಜೈಲು, ಜನಾನಾ ಎನ್ನುವ ಅರ್ಥಗಳಿವೆ.

ತಮಗೆ ಎಷ್ಟೇ ಕಷ್ಟ ಬಂದರೂ ಸಹ ಈ ಅವರೋಧವಾಸಿನಿಯರು ತಮ್ಮ ಮೇಲೆ ಹೇರಿದ ವಿಧಿನಿಷೇಧಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದರು – ಅಥವಾ ಅವರು ಆ ವಿಧಿನಿಷೇಧಗಳನ್ನು ಪಾಲಿಸುವಂತೆ ಮಾಡಲಾಗುತ್ತಿತ್ತು. ಇದರಿಂದಾಗಿ ಅವರು ಎಷ್ಟೋ ಬಾರಿ ತೊಂದರೆಗೆ, ಪ್ರಾಣಾಪಾಯಕ್ಕೆ ಸಿಲುಕಬೇಕಾಗುತ್ತಿತ್ತು. ಒಮ್ಮೊಮ್ಮೆ ಈ ಆಚರಣೆಗಳು ಅತಿರೇಕ, ಹಾಸ್ಯಾಸ್ಪದ ಎನ್ನಿಸುತ್ತಿದ್ದುದೂ ಉಂಟು. ಇಂತಹ ಕೆಲವು ನೈಜ ಘಟನೆಗಳನ್ನು ಬೇಗಂ ರೊಕೇಯ ಸಖಾವತ್ ಹುಸೇನ್ (೧೮೮೦-೧೯೩೨) ಅವರು ತಮ್ಮ ಪುಟ್ಟ ಗ್ರಂಥದಲ್ಲಿ ಸಂಗ್ರಹಿಸಿದ್ದಾರೆ. ಈ ಸಂಗ್ರಹದ ಮುಖ್ಯ ಉದ್ದೇಶ ಈ ಪದ್ಧತಿಯ ವಿರುದ್ಧ ಮುಸ್ಲಿಂ ಮಹಿಳೆಯರಲ್ಲಿ ಜಾಗೃತಿ ಉಂಟುಮಾಡುವುದೇ ಆಗಿದ್ದಿತು.

'ಅವರೋಧವಾಸಿನಿ'. (ಮೊದಲ ಮುದ್ರಣ ೧೯೩೧, ಮರುಮುದ್ರಣ ೨೦೦೧) ಎನ್ನುವ ಈ ಪುಟ್ಟ ಗ್ರಂಥದಲ್ಲಿನ ಎಲ್ಲ ಘಟನೆಗಳೂ ನಿಜವಾಗಿ ನಡೆದವುಗಳು ಎನ್ನುವುದರಲ್ಲಿ ಅನುಮಾನವೇನೂ ಇಲ್ಲ. ಈ ಘಟನೆಗಳನ್ನು ಓದುತ್ತಾ ಸಾಗಿದಂತೆ ನಗೆ ಉಕ್ಕಿ ಬರುವುದು ಸಹಜ. ಆದರೆ ಆ ಘಟನೆಗಳ ಕೇಂದ್ರ ಬಿಂದು – ಅವರೋಧವಾಸಿನಿಯನ್ನು ನೆನಪಿಸಿಕೊಂಡಾಗ ಮೈ ಜುಂ ಎನ್ನುತ್ತದೆ. ನಾವು ಒಂದು ಕ್ಷಣ ಸ್ತಂಭೀಭೂತರಾಗಿ ಬಿಡುತ್ತೇವೆ.

ಈ ಗ್ರಂಥದ ಆಯ್ದ ಮೂರು ಭಾಗಗಳನ್ನು ಬಂಗಾಳಿಯಿಂದ ಅನುವಾದಿಸಿ ಇಲ್ಲಿ ನೀಡಿದ್ದೇನೆ.

ಅ. ಪಾಟ್ನಾದ ಶ್ರೀಮಂತರೊಬ್ಬರ ಮನೆಯಲ್ಲಿ ಮದುವೆ. ಬಹಳಷ್ಟು ಜನ ಮಹಿಳೆಯರು ಮೇನೆಗಳಲ್ಲಿ ಬಂದಿದ್ದರು. ಮೇನೆ ಹೊರುತ್ತಿದ್ದವರು ಮರೆಯಾದಮೇಲೆಯೇ, ಮೇನೆಯಲ್ಲಿ ಇರುವ ಸ್ತ್ರೀ ಇಳಿದು, ದಾಸಿಯ ಕೈ ಹಿಡಿದು ಒಳಗೆ ಹೋಗುತ್ತಾಳೆ. ನಂತರ ಮೇನೆ ಹೊರುವವರು ಬಂದು ಮೇನೆಯನ್ನು ಕೊಂಡೊಯ್ಯುತ್ತಾರೆ. ಆಮೇಲೆ ಇನ್ನೊಂದು ಮೇನೆ ಬರುತ್ತದೆ. ಹೀಗೆ ಬಂದವರಲ್ಲಿ ಹಸ್ಮತ್ ಬೇಗಂ ಒಬ್ಬಳು. ಮೇನೆ ಹೊರುವವರು ಮೇನೆ ಇಳಿಸಿ ''ಮಾಮಾ, ಸವಾರಿ ಬಂತು'' ಎಂದು ಹೇಳಿ ದೂರ ಹೋದರು. ದಾಸಿ ಬರುವುದು ತಡವಾಯಿತು. ದಾಸಿ ಬಂದು ಬಾಗಿಲು ತೆರೆಯದೆ, ಹಸ್ಮತ್ ಇಳಿಯುವಂತಿಲ್ಲ. ಸ್ವಲ್ಪ ಸಮಯದ ನಂತರ ಮೇನೆ ಹೊರುವವರು ಬಂದು ಬೇಗಂ ಇಳಿದಿದ್ದಾರೆ ಎಂದುಕೊಂಡು, ಮೇನೆಯನ್ನು ಆಚೆಗೆ ತೆಗೆದುಕೊಂಡು ಹೋದರು.

ಆ ರಾತ್ರಿ ಮತ್ತೆ ಮೇನೆ ಹೊರುವಂತಿಲ್ಲ ಎಂದು ಮೇನೆ ಹೊರುವವರು ಇಡೀ ರಾತ್ರಿ ಹಾಡು ಹರಟೆಯಲ್ಲಿ ರಾತ್ರಿ ಕಳೆದರು. ಚಳಿಯ ದಿನಗಳು ಅವು.

ಈ ಕಡೆ ಮಹಿಳೆಯರು ಊಟಕ್ಕೆ ಕುಳಿತಾಗ ಹಸ್ಮತ್ ಬೇಗಂ ಇಲ್ಲ ಎನ್ನುವುದನ್ನು ಗಮನಿಸಿದರು. ಬಹುಶಃ ಆಕೆಯ ಚಿಕ್ಕ ಮಗು ಅಳುತ್ತಿದ್ದುದರಿಂದ ಆಕೆ ಬಂದಿರಲಿಕ್ಕಿಲ್ಲ ಎಂದು ಭಾವಿಸಿದರು.

ಮಾರನೆಯ ದಿನ ಮದುವೆ ಮುಗಿಸಿಕೊಂಡು ಮತ್ತೆ ಯಥಾರೀತಿ ಮೇನೆಯಲ್ಲಿ ಹೊರಟರು. ಒಂದು ಮೇನೆಯನ್ನು ತಂದು ನಿಲ್ಲಿಸಿದರು. ದಾಸಿ ಬಾಗಿಲು ತೆರೆದಳು. ಒಳಗೆ ಹಸ್ಮತ್ ಬೇಗಂ ! ಮಗುವನ್ನು ಅಪ್ಪಿ ಹಿಡಿದುಕೊಂಡು ಒಳಗೆ ಕುಳಿತಿದ್ದಾಳೆ.

ನಿನ್ನೆ ರಾತ್ರಿ ಆಕೆ ಇಳಿಯುವ ಮುನ್ನವೇ, ಮೇನೆ ಹೊರುವವರು ಆ ಮೇನೆಯನ್ನು ಖಾಲಿ ಎಂದು ಭಾವಿಸಿ ತೆಗೆದುಕೊಂಡು ಹೋಗಿದ್ದರು. ಮೇನೆಯಲ್ಲಿ ಇದ್ದ ಹಸ್ಮತ್ ಮಾತನಾಡಿ ತಾನು ಒಳಗಿರುವುದನ್ನು ಅವರಿಗೆ ತಿಳಿಸುವಂತಿಲ್ಲ, ಕುಲೀನ ಮುಸ್ಲಿಂ ಮಹಿಳೆಯ ಧ್ವನಿಯನ್ನು ಆಕೆಯ ಕುಟುಂಬದವರಲ್ಲದೆ, ಬೇರೆಯವರು ಕೇಳಿಸಿಕೊಂಡರೆ, ಧರ್ಮ ನಷ್ಟವಾಗುತ್ತದೆ ಎನ್ನುವ ಚಿಂತೆ. ಹೀಗಾಗಿ ಆ ಕೊರೆಯುವ ಚಳಿಯಲ್ಲಿ, ಇಡೀ ರಾತ್ರಿಯನ್ನು ಹಸ್ಮತ್ ಮೇನೆಯಲ್ಲಿ ಕುಳಿತೇ ಕಳೆದಿದ್ದಳು. ಮಗು ಅಳುವಾಗ ಬಾಯಿ ಮುಚ್ಚಿ ಸುಮ್ಮನಿರಿಸಿದ್ದಳು. ಮಗುವಿನ ಅಳು ಕೇಳಿ ಬೇರೆಯವರು ಮೇನೆಯ ಬಾಗಿಲು ತೆರೆದರೆ, ಬೇರೆಯವರಿಗೆ ತನ್ನ ಮುಖದರ್ಶನವಾಗಿಬಿಡುತ್ತದೆ ಎನ್ನುವ ಚಿಂತೆ!

ಕಷ್ಟ ಸಹಿಸಲು ಸಾಧ್ಯವಿಲ್ಲದೆ ಇದ್ದಲ್ಲಿ ಅವರೋಧವಾಸಿನಿಯಾಗುವ ಬಹದೂರಿತನ ಯಾಕೆ !?

ಆ. ಒಂದು ಮನೆಗೆ ಬೆಂಕಿ ಬಿದ್ದಿತ್ತು. ಮನೆಯ ಒಡತಿ ತನ್ನ ಒಡವೆಗಳನ್ನು ಒಂದು ಪೆಟ್ಟಿಗೆಯಲ್ಲಿ ಹಾಕಿಕೊಂಡು ಹೊರಗೆ ಓಡಿ ಬಂದಳು. ಬಾಗಿಲಿಗೆ ಬಂದವಳೇ ನೋಡುತ್ತಾಳೆ – ತನ್ನ ಕುಟುಂಬದವರೇ ಅಲ್ಲದೆ, ಇತರ ಅನೇಕ ಗಂಡಸರು ಬೆಂಕಿಯನ್ನು ಕೆಡಿಸುವುದರಲ್ಲಿ ಮಗ್ನರಾಗಿದ್ದಾರೆ. ಅರೆ, ಅವರ ಎದುರು 'ಅವರೋಧವಾಸಿನಿ' ತಾನು ಹೋಗಬಹುದೇ? ಮತ್ತೆ ಥಟ್ಟನೆ ಒಳಗೆ ಓಡಿ ಹೋಗಿ ಮಂಚದ ಕೆಳಗೆ ಬಚ್ಚಿಟ್ಟುಕೊಂಡಳು. ಬೆಂಕಿ ಕೆಡಿಸುತ್ತಿದ್ದವರಾರೂ ಈಕೆಯನ್ನು ಗಮನಿಸಲಿಲ್ಲ. ಅವರೆಲ್ಲರ ಕೈಮೀರಿ ಬೆಂಕಿ ಹರಡಿತು. ಇಡೀ ಮನೆಯೊಂದಿಗೆ ಆಕೆಯೂ ಸುಟ್ಟು ಬೂದಿಯಾದಳು.

ಇದು ಕುಲೀನ ಸ್ತ್ರೀಯ ಅವರೋಧ ಪಾಲನೆ !

ಇ. ಸಿಯಾಲ್ದಾ ಸ್ಟೇಷನ್‌ನ ಒಂದು ಪ್ಲಾಟ್‌ಫಾರ್ಮ್‌ನಲ್ಲಿ ಒಬ್ಬ ವ್ಯಕ್ತಿ ರೈಲು ಕಾಯುತ್ತಾ ಅಡ್ಡಾಡುತ್ತಿದ್ದನು. ಆಗಲೇ ಸಂಜೆಯಾಗುತ್ತಿತ್ತು. ಇನ್ನೊಂದೆಡೆ ಮತ್ತೊಬ್ಬ ಸುಮ್ಮನೆ ನಿಂತುಕೊಂಡಿದ್ದನು. ಅವನ ಹಿಂದೆ ಅವನ ಹಾಸಿಗೆ, ಇತ್ಯಾದಿಗಳನ್ನು ಒಟ್ಟಲಾಗಿತ್ತು. ಅಡ್ಡಾಡುತ್ತಿದ್ದವನಿಗೆ ದಣಿವಾಗಿ, ಕುಳಿತುಕೊಳ್ಳಲು ಆಸನಕ್ಕಾಗಿ ಅತ್ತ ಇತ್ತ ನೋಡಿದ. ಹತ್ತಿರದಲ್ಲಿಯೇ ಕಾಣುತ್ತಿದ್ದ ಹಾಸಿಗೆಯ ರಾಶಿಯ ಹತ್ತಿರ ಹೋಗಿ ಅದರ ಮೇಲೆ ಕುಳಿತುಕೊಳ್ಳಲು ಅನುವಾದ. ಹತ್ತಿರದಲ್ಲಿಯೇ ನಿಂತಿದ್ದವನು ಚಕ್ಕನೆ ಹೇಳಿದ ''ಅರರೆ ಮೊಶಾಯ್ (ಮಹಾಶಯ) ಏನ್ಮಾಡ್ತಾ ಇದ್ದೀರಿ. ಹೆಣ್ಣು ಮಕ್ಕಳ ಮೇಲೆ ಏಕೆ ಕೂತ್ಕೊಳ್ತಾ ಇದ್ದೀರಾ ?''

ಕುಳಿತುಕೊಳ್ಳುತ್ತಿದ್ದವನು ಸಟಮ್ಮನೆ ನಿಂತುಕೊಂಡು, ''ಕ್ಷಮಿಸಿ ಸ್ವಾಮಿ, ಇದು ಹಾಸಿಗೆ ಎಂದುಕೊಂಡಿದ್ದೆ'' ಎಂದ.

ಜಿ. ಕುಮಾರಪ್ಪ
ನಂ. ೧೪೧, ಬೆಲ್ವೆಡಿಯರ್ ಎಸ್ಟೇಟ್, ಬೆಲ್ವೆಡಿಯರ್, ಕೊಲ್ಕತ್ತಾ - ೭೦೦ ೦೨೭



# ನೊಬೆಲ್ ಪ್ರಶಸ್ತಿಯ ರೂವಾರಿ
# ಅಲ್‌ಫ್ರೆಡ್ ನೊಬೆಲ್

■

ಸಿಡಿಮದ್ದನ್ನು ತಯಾರಿಸಿದವನೆಂದೇ ಪ್ರಸಿದ್ಧನಾದ
ಅಲ್‌ಫ್ರೆಡ್ ನೊಬೆಲ್
ಕೃತಕ ರೇಶ್ಮೆಯ ಸಂಶೋಧನೆ,
ಭೌತಶಾಸ್ತ್ರ ಮತ್ತು ರಸಾಯನ ಶಾಸ್ತ್ರಗಳಲ್ಲೂ ಸೇರಿ
355 ಹೊಸ ವಸ್ತುಗಳಿಗೆ ಪೇಟೆಂಟ್ ಪಡೆದಿದ್ದವ !
ಮೂಲತಃ ಮಾನವೀಯ ಅಂತಃಕರಣದ ಈ ವ್ಯಕ್ತಿ
ತನ್ನ ಆವಿಷ್ಕಾರಗಳು ಯುದ್ಧಕ್ಕೆ ಬಳಸಲ್ಪಟ್ಟಾಗ ಮನನೊಂದ
ಪರಿಣಾಮ ಅವನ ಅಪಾರ ಐಶ್ವರ್ಯವನ್ನು
ನೊಬೆಲ್ ಪಾರಿತೋಷಕದ ಉದ್ದೇಶಕ್ಕಾಗಿ ಧಾರೆಯೆರೆದ.

■

ಜಗನ್ನಾಥ ಅ. ಸಣ್ಣೂರ

**ನೊ**ಬೆಲ್ ಪ್ರಶಸ್ತಿ!

ಜಗತ್ತಿನ ಅತ್ಯಂತ ಪ್ರತಿಷ್ಠಿತ ಗೌರವ ಪ್ರಶಸ್ತಿ.

ಮಾನವ ಕಲ್ಯಾಣಕ್ಕಾಗಿ ಸೇವೆ ಸಲ್ಲಿಸಿದವರಿಗೆ ನೀಡುವ ಈ ಬಹುಮಾನ ದೊರೆಯಿತೆಂದರೆ ಕೇವಲ ವ್ಯಕ್ತಿಗಷ್ಟೆ ಅಲ್ಲ ಆ ವ್ಯಕ್ತಿಯ ರಾಷ್ಟ್ರಕ್ಕೆ ಸಲ್ಲುವ ಗೌರವವೂ ಆಗಿರುತ್ತದೆ! ಇಂತಹ ಪ್ರಶಸ್ತಿಯ ರೂವಾರಿ ಸ್ವೀಡನ್ನಿನ ಅಲ್‌ಫ್ರೆಡ್ ಬರ್ನಾಡ್ ನೊಬೆಲ್. ಈ ಪ್ರಶಸ್ತಿಯನ್ನು ಪ್ರತಿವರ್ಷ 'ಭೌತಶಾಸ್ತ್ರ ಮತ್ತು ರಸಾಯನಶಾಸ್ತ್ರ', 'ವೈದ್ಯಕೀಯ', 'ಸಾಹಿತ್ಯ', 'ಅರ್ಥಶಾಸ್ತ್ರ' ಹಾಗೂ 'ಶಾಂತಿ' – ಹೀಗೆ ಐದು ಕ್ಷೇತ್ರಗಳಲ್ಲಿ ವಿಶೇಷ ಸೇವೆ ಸಲ್ಲಿಸಿದವರಿಗೆ ನೀಡಲಾಗುತ್ತದೆ.

ಅಲ್‌ಫ್ರೆಡ್ ನೊಬೆಲ್ ಅವರ ಸಂಗ್ರಹದ ಒಟ್ಟು ೯೦ ಲಕ್ಷ ಅಮೆರಿಕನ್ ಡಾಲರ್‌ಗಳಿಂದ ಪ್ರತಿವರ್ಷ ಬರುವ ಬಡ್ಡಿಯನ್ನೇ ಪ್ರಶಸ್ತಿಯೊಂದಿಗೆ ನೀಡುವ ಪರಿಪಾಠ ೧೯೦೧ರಿಂದ ನಡೆದುಬಂದಿದೆ. ಈ ಕೆಲಸವನ್ನು ಸ್ವೀಡನ್ ರಾಷ್ಟ್ರೀಯ ಬ್ಯಾಂಕ್ ನೊಬೆಲ್‌ರವರ ಉಯಿಲಿನ ಪ್ರಕಾರ ನಡೆಸಿಕೊಂಡುಬರುತ್ತಿದೆ. ನೊಬೆಲ್ ಹೀಗೆ ಮಹಾವ್ಯಕ್ತಿಯಾದರಲ್ಲದೇ ಸ್ವತಃ ವಿಜ್ಞಾನಿಯಾಗಿ ಮತ್ತು ವಿಶ್ವಶಾಂತಿಗಾಗಿ ಸಾಕಷ್ಟು ಪರಿಶ್ರಮಿಸಿದರು.

ಅಲ್‌ಫ್ರೆಡ್ ನೊಬೆಲ್‌ರವರು ಸ್ವೀಡನ್ ದೇಶದ ಸ್ಟಾಕ್‌ಹೋಂನಲ್ಲಿ ೧೮೩೩ ಅಕ್ಟೋಬರ್ ೨೧ರಂದು ಜನಿಸಿದರು. ತಂದೆ ಇಮ್ಯಾನ್ಯುಯಲ್ ನೊಬೆಲ್ ಜೀವನೋಪಾಯ ಅರಸುತ್ತಾ ತನ್ನ ಪರಿವಾರ ಸಮೇತ ಮಾಸ್ಕೋಕ್ಕೆ ಹೊರಟ. ಅಲ್ಲಿ ಅವನು ಯಂತ್ರೋದ್ಯಮವನ್ನು ಪ್ರಾರಂಭಿಸಿದನು. ಅತ್ಯಂತ ವೇಗವಾಗಿ ಅಭಿವೃದ್ಧಿ ಹೊಂದುತ್ತಿರುವಾಗ ಇಮ್ಯಾನ್ಯುಯಲ್ ತನ್ನ ಮಗನಾದ ಅಲ್‌ಫ್ರೆಡ್‌ನನ್ನು ಶಾಲೆಯಿಂದ ಬಿಡಿಸಿ ಖಾಯಂ ಆಗಿ ಉದ್ಯಮದಲ್ಲಿ ಪಾಲ್ಗೊಳ್ಳುವಂತೆ ಮಾಡಿದ. ಇದರಿಂದ ನೊಬೆಲ್‌ನ ವಿದ್ಯಾಭ್ಯಾಸ ನಿಂತುಹೋಗಿ ತಂದೆಯ ಮನೆಪಾಠಗಳಲ್ಲಿಯೇ ಮುಂದುವರಿಯಿತು. ತಮ್ಮ ತಂದೆಯ ಪ್ರಯೋಗಾಲಯಗಳಲ್ಲಿ ಅವರ ಮಾರ್ಗದರ್ಶನ ಮತ್ತು ತರಬೇತಿಯಲ್ಲಿ ವಿಜ್ಞಾನದೊಂದಿಗೆ ಇಂಗ್ಲಿಷ್, ಫ್ರೆಂಚ್, ಜರ್ಮನ್, ರಶ್ಯನ್, ಸ್ವೀಡಿಷ್ ಭಾಷೆಗಳನ್ನು ಕಲಿಯಲು ಸಾಧ್ಯವಾಯಿತು. ಆಗ ಇವರಿಗೆ ಕೇವಲ ೧೬ ವರ್ಷಗಳು. ಅಲ್‌ಫ್ರೆಡ್ ನೊಬೆಲ್ ಬಾಲ್ಯದಿಂದಲೂ ಅನಾರೋಗ್ಯ ಪೀಡಿತನಾಗಿದ್ದರೂ ತುಂಬಾ ಚಾಣಾಕ್ಷ. ನಂತರ ಎರಿಕ್‌ಸನ್ ಎಂಬ ರಸಾಯನ ಶಾಸ್ತ್ರಜ್ಞನಲ್ಲಿ ನಾಲ್ಕು ವರ್ಷಗಳ ಕಾಲ ರಸಾಯನ ಶಾಸ್ತ್ರ ಅಧ್ಯಯನ ಮಾಡಿದ.

ಅಲ್‌ಫ್ರೆಡ್ ನೊಬೆಲ್‌ನ ತಂದೆಗೆ ಸ್ಫೋಟಕ ವಸ್ತುಗಳನ್ನು ಸಂಶೋಧಿಸುವಲ್ಲಿ ತೀವ್ರ ಆಸಕ್ತಿ. ಅದಕ್ಕಾಗಿ ಹಗಲಿರುಳು ದುಡಿತದಲ್ಲಿ ಮಗ್ನರಾಗಿರುತ್ತಿದ್ದರು. ಅದಾಗಲೇ ೧೮೪೭ರಲ್ಲಿ 'ಅಸ್ಕಾನಿಯೋ ಸೊಬ್ರಿರೋ' ಎಂಬ ರಶಿಯನ್ ವಿಜ್ಞಾನಿ ನೈಟ್ರೋಗ್ಲಿಸರಿನ್ ಕಂಡುಹಿಡಿದಿದ್ದ. ನೈಟ್ರೋಗ್ಲಿಸರಿನ್‌ಗೆ ವಿಶೇಷ ಸ್ಫೋಟಕ ಗುಣವಿದೆ ಎಂದು ಆ ಮೊದಲೇ ಪ್ರಯೋಗಗಳಿಂದ ತಿಳಿದಿತ್ತು. ಇದನ್ನು ಗಮನಿಸಿದ ಅಲ್‌ಫ್ರೆಡ್ ನೊಬೆಲ್‌ನ ತಲೆಯಲ್ಲಿ ಸಂಶೋಧನೆಗಳ ಕನಸುಗಳು ಸುಳಿದವು ! ತಂತ್ರ ವಿದ್ಯೆಯನ್ನು ವ್ಯವಸ್ಥಿತವಾಗಿ ನಿಸರ್ಗಕ್ಕೆ ಅನ್ವಯಿಸುವುದು ಸಾಧ್ಯವಾದರೆ ಕಡಿಮೆ ವೆಚ್ಚದಲ್ಲಿ ಅತ್ಯಧಿಕ ಶಕ್ತಿಯ ಲಾಭ ಪಡೆಯಲು ಸಾಧ್ಯ ಎಂದು ನೊಬೆಲ್ ಅರಿತನು. ೧೮೬೨ರಲ್ಲಿ ಸಾಮಾನ್ಯವಾದ ಸಿಡಿಮದ್ದನ್ನು ನೈಟ್ರೋಗ್ಲಿಸರಿನ್ ಜೊತೆ ಬಳಸಿ 'ಲೈಟರ್' ತಯಾರಿಸಿದ. ಇದು ಅಲ್‌ಫ್ರೆಡ್ ನೊಬೆಲ್‌ನ ಮೊಟ್ಟ ಮೊದಲ ಸಂಶೋಧನೆ. ಆಗ ಅವನಿಗೆ ಕೇವಲ ೨೯ ವರ್ಷ.

೧೮೬೨ರಲ್ಲಿ ಹುಟ್ಟೂರಾದ ಸ್ಟಾಕ್‌ಹೋಂಗೆ ನೊಬೆಲ್‌ನ ಪರಿವಾರ ಮರಳಿತು. ತಂದೆ ಮತ್ತು ಮಗ ಇಬ್ಬರೂ ಸೇರಿ ನೈಟ್ರೋಗ್ಲಿಸರಿನ್ ಎಂಬ ರಾಸಾಯನಿಕ ವಸ್ತುವಿನಲ್ಲಿ ಹೊಸ ಸಂಶೋಧನೆಗೆ ತೊಡಗಿದರು. ಮತ್ತು ಅಲ್‌ಫ್ರೆಡ್ ನೊಬೆಲ್ ಸ್ಫೋಟಕಗಳ ಬಗ್ಗೆ ಸಂಶೋಧಿಸಲು ಮುಂದಾದನು. ದುರದೃಷ್ಟವಶಾತ್ ನೊಬೆಲ್ ಯಾವುದೋ ಸಂಶೋಧನೆಯಲ್ಲಿ ನಿರತನಾಗಿದ್ದಾಗ ಸ್ಫೋಟ ಸಂಭವಿಸಿ ಅದು ಇಡೀ ಕಾರ್ಖಾನೆಯನ್ನೇ ಸುಟ್ಟು ಹಾಕಿತಲ್ಲದೆ ಅಲ್‌ಫ್ರೆಡ್‌ನ ಒಬ್ಬ ತಮ್ಮನನ್ನೂ ಬಲಿ ತೆಗೆದುಕೊಂಡಿತು. ಈ ಅಪಘಾತದಿಂದ ಚೇತರಿಸಿಕೊಳ್ಳುವುದಕ್ಕೆ ಅಲ್‌ಫ್ರೆಡ್‌ನಿಗೆ ಸ್ವಲ್ಪ ಸಮಯ ಹಿಡಿಯಿತು. ಸ್ವೀಡನ್ ಸರ್ಕಾರ ಇದಕ್ಕೆ ಯಾವ ಪರಿಹಾರವನ್ನೂ ನೀಡಲಿಲ್ಲ. ಇದೇ ಚಿಂತೆಯಲ್ಲಿ ಇವರ ತಂದೆ ಇಮ್ಯಾನ್ಯುಯಲ್ ಪಾರ್ಶ್ವವಾಯು ಸೆಳೆತಕ್ಕೆ ಸಿಲುಕಿ ನಂತರ ತೀರಿಕೊಂಡರು.

ನಂತರ ಕೇವಲ ತನ್ನ ಉಳಿತಾಯದಿಂದ ಗಳಿಸಿದ್ದ ಸಣ್ಣ ಮೊತ್ತದ ಹಣದಿಂದ ಅಲ್‌ಫ್ರೆಡ್ ನೊಬೆಲ್ ಮತ್ತೆ ಕಾರ್ಖಾನೆಯನ್ನು ಪ್ರಾರಂಭಿಸಿದನು. ಆದರೆ ಮತ್ತೆ ಅದೇ ರಾಸಾಯನಿಕದಿಂದ ಸ್ಫೋಟವುಂಟಾಗಿ ಎಲ್ಲಾ ನಾಶವಾಯಿತು. ಆಗ ಸ್ವೀಡನ್ ಸರ್ಕಾರವು ನೈಟ್ರೋಗ್ಲಿಸರಿನ್ ಬಳಕೆಯನ್ನು ನಿಲ್ಲಿಸಲು ಆದೇಶಿಸಿತು ಮತ್ತು ನೊಬೆಲ್ ಎಲ್ಲರಿಂದ ಹುಚ್ಚು ವಿಜ್ಞಾನಿ ಎನಿಸಿಕೊಂಡನು. ಒಮ್ಮೆ ರಾಸಾಯನಿಕವೊಂದು ಅಷ್ಟು ಅಗಾಧವಾದ ಹಾನಿ ಮಾಡಿದ್ದರೂ ಮತ್ತೆ ಅದನ್ನೇ ಬಳಸಲು ತೊಡಗಿ ಮತ್ತೆ ಅನಾಹುತಕ್ಕೊಳಗಾದ ಇವನನ್ನು ಸಹಜವಾಗಿ ಎಲ್ಲರೂ ಹುಚ್ಚನೆಂದೇ ಕರೆಯುವಂತಾಗಿತ್ತು.

ಆದರೂ ಯಾವುದಕ್ಕೂ ಎದೆಗುಂದದ ಅಲ್‌ಫ್ರೆಡ್ ೧೮೬೬ರಲ್ಲಿ ಮತ್ತೆ ಸಂಶೋಧನೆಗೆ ತೊಡಗಿ ಲೈಟರಿಗಿಂತ ಹೆಚ್ಚು ಸುರಕ್ಷಿತವಾದ ಸ್ಫೋಟಕಗಳ ಆವಿಷ್ಕಾರಕ್ಕೆ

ಮುಂದಾದನು. 'ಕಿಸಿಲ್ಲರ್' ಎಂಬ ಜೇಡಿ ಮಣ್ಣಿನೊಡನೆ ನೈಟ್ರೋಗ್ಲಿಸರಿನ್ ಮಿಶ್ರಣ ಮಾಡಿದಾಗ ಸಾಮಾನ್ಯ ಉಷ್ಣತೆಯಲ್ಲಿ ಸಿಡಿಯುವುದಿಲ್ಲ ಎಂಬುದನ್ನು ಕಂಡುಕೊಂಡನು. ಈ ಮಿಶ್ರಣವನ್ನೇ ಮುಂದೆ ೧೮೬೭ರಲ್ಲಿ 'ಡೈನಾಮಿಟ್' ಆಗಿ ಪರಿವರ್ತಿಸಿದನು, ಇದಕ್ಕೆ ಹಕ್ಕುಸ್ವಾಮ್ಯ ತಕ್ಷಣವೇ ಪಡೆದುಕೊಂಡನು. ನಂತರ ರಶಿಯಾ ಹಾಗೂ ಇತರ ದೇಶಗಳು ಮುಂದೆ ಬಂದು ಖನಿಜ, ತೈಲ ಬಾವಿಗಳನ್ನು, ಗುಡ್ಡ ಬೆಟ್ಟಗಳನ್ನು ತೋಡುವ ಉದ್ಯಮದಲ್ಲಿ ಬಳಸಲು ಡೈನಾಮಿಟ್‌ಗಳನ್ನು ಅಲ್‌ಫ್ರೆಡ್‌ನಿಂದ ಹೆಚ್ಚು ಹಣ ತೆತ್ತು ಖರೀದಿಸಿದವು. ತನ್ನ ಆವಿಷ್ಕಾರಗಳಿಂದ ಜನಹಿತ ಕೆಲಸಗಳು ಸುಗಮ ಆಗುವುದೆಂಬ ಅಲ್‌ಫ್ರೆಡ್ ನೊಬೆಲ್‌ನ ಕನಸು ನನಸಾಗಿತ್ತು.

**ಹಣ ಮತ್ತು ಕೀರ್ತಿ**

ಡೈನಾಮಿಟ್‌ನ ಆವಿಷ್ಕಾರದಿಂದ ಅಲ್‌ಫ್ರೆಡ್ ನೊಬೆಲ್‌ನ ಹೆಸರು ಹಂತ ಹಂತವಾಗಿ ದೇಶ ವಿದೇಶಗಳಲ್ಲಿ ಹರಡತೊಡಗಿತು. ಹೇರಳವಾಗಿ ಹಣವೂ ಬರತೊಡಗಿತು. ಇದರಿಂದ ಉತ್ತೇಜನ ಪಡೆದ ನೊಬೆಲ್ ಮತ್ತೆ ಹೊಸ ಹೊಸ ಸಂಶೋಧನೆಗಳಲ್ಲಿ ತೊಡಗಿದನು. ೧೮೭೫ರಲ್ಲಿ ಸ್ಫೋಟಕ ಜಿಲೆಟಿನ್ ಕಡ್ಡಿಗಳನ್ನು ತಯಾರಿಸುವಲ್ಲಿ ಸಫಲನಾದ. ಈತನ ಸಂಶೋಧನೆ ಕೇವಲ ಸ್ಫೋಟಕಗಳಿಗೆ ಮಾತ್ರ ಸೀಮಿತವಾಗಿರಲಿಲ್ಲ. ಕೃತಕ ರೇಷ್ಮೆ ಮತ್ತು ರಬ್ಬರ್ ಬಗ್ಗೆ ಸಂಶೋಧನೆ ನಡೆಸಿ ಭೌತಶಾಸ್ತ್ರ ಮತ್ತು ಜೀವಶಾಸ್ತ್ರಗಳಲ್ಲಿ ತನ್ನ ಸಂಶೋಧನೆ ಮುಂದುವರಿಸಿದ. ಒಟ್ಟು ೧೮೬೭ ವಸ್ತುಗಳ ಆವಿಷ್ಕಾರಗಳಲ್ಲಿ ೩೫೫ ವಸ್ತುಗಳಿಗೆ ಪೇಟೆಂಟ್ ಪಡೆದನು.

ಅಲ್‌ಫ್ರೆಡ್ ನೊಬೆಲ್ ಒಬ್ಬ ಆದರ್ಶ ವ್ಯಕ್ತಿಯಾಗಿದ್ದ. ತನ್ನ ತಾಯಿಯನ್ನು ಪ್ರೀತಿಸಿದಷ್ಟೇ ತನ್ನ ತಾಯಿನೆಲವನ್ನೂ ಪ್ರೀತಿಸುತ್ತಿದ್ದ. ಸಮಯ ಸಿಕ್ಕಾಗಲೆಲ್ಲಾ ಬಡಬಗ್ಗರಿಗೆ, ಅನಾಥರಿಗೆ ಹಣದ ಸಹಾಯ ಮಾಡುತ್ತಿದ್ದನು. ಹುಟ್ಟಿನಿಂದಲೇ ಅನಾರೋಗ್ಯದಿಂದ ಬಳಲುತ್ತಿದ್ದರೂ ಜೀವನೋತ್ಸಾಹ ಕುಂದಿರಲಿಲ್ಲ. ತನ್ನ ಸಂಶೋಧನೆಗಳ ನಡುವೆ ಸಾಹಿತ್ಯ ಕೃಷಿ ಅವನ ನೆಚ್ಚಿನ ಹವ್ಯಾಸವಾಗಿತ್ತು. 'ಶೇಕ್ಸ್‌ಪಿಯರ್', 'ಶೆಲ್ಲಿ' ನೊಬೆಲ್‌ಗೆ ಇಷ್ಟವಾಗಿದ್ದರು. ಸಾಹಿತ್ಯವು ಮನುಕುಲದ ಸ್ವಾಸ್ಥ್ಯವನ್ನು ಕಾಪಾಡಿ ಅಭಿವೃದ್ಧಿ ಪಥದಲ್ಲಿ ನಡೆಸುವ ಶಕ್ತಿಯುಳ್ಳ ದಿವ್ಯ ಚೇತನ ಎಂದು ನಂಬಿದ್ದ. ತನ್ನ ಸಂಶೋಧನೆಯ ಏಕಸ್ವಾಮ್ಯಕ್ಕೆ ಸಂಬಂಧಿಸಿದಂತೆ ಅನ್ಯಾಯವಾದಾಗ ಬ್ರಿಟನ್‌ನ ಕಾನೂನು ವ್ಯವಸ್ಥೆಯನ್ನು ಟೀಕಿಸಿ 'ಪೇಟೆಂಟ್ ಬ್ಯಾಸಿಲಸ್' ಎಂಬ ವ್ಯಂಗ್ಯ ನಾಟಕವನ್ನು ಬರೆದನು. ನೊಬೆಲ್ ಬರೆದ ಎರಡೇ ಎರಡು ಕಾದಂಬರಿಗಳೆಂದರೆ 'ದಿ ಸಿಸ್ಟರ್ಸ್' ಮತ್ತು 'ಇನ್ ಲೇಟೆಸ್ಟ್ ಆಫ್ರಿಕಾ'.

**ವಿಶ್ವ ಶಾಂತಿಗಾಗಿ ಪ್ರಯತ್ನ**

ಮಾನವ ಕಲ್ಯಾಣದ ಉತ್ತಮ ಉದ್ದೇಶಕ್ಕಾಗಿ ಡೈನಾಮಿಟನ್ನು ನೊಬೆಲ್ ಸಂಶೋಧಿಸಿದನು. ಅದರ ಬದಲಾಗಿ ಮಾನವರು ಅದನ್ನು ಬಾಂಬ್ ತರಹ ಬಳಸಿ ಸ್ವಾರ್ಥಕ್ಕೋಸ್ಕರ ಯುದ್ಧದಂತಹ ಮಾನವ ವಿನಾಶ ಕಾರ್ಯದಲ್ಲಿ ಬಳಸುತ್ತಿದ್ದುದನ್ನು ಕಂಡು ಅವನಲ್ಲಿ ಅಪರಾಧಿ ಪ್ರಜ್ಞೆ ಕಾಡಲಾರಂಭಿಸಿತು. ತನ್ನ ಕಣ್ಣ ಮುಂದೆಯೇ ತಾನು ಆವಿಷ್ಕರಿಸಿದ ವಸ್ತುವಿನಿಂದ ಜನ ನರಳಿ ನರಳಿ ಸಾಯುತ್ತಿದ್ದುದನ್ನು ಕಂಡು ಮನದಲ್ಲೇ ತನ್ನನ್ನು ತಾನೇ ಶಪಿಸಿಕೊಂಡ. ಆದಾಗಲೇ ಕಾಲ ಮಿಂಚಿ ಹೋಗಿತ್ತು. ಇನ್ನು ಮುಂದಾದರೂ ವಿಶ್ವ ಶಾಂತಿಗಾಗಿ ಶ್ರಮಿಸಲೇಬೇಕೆಂಬ ದೃಢ ನಿರ್ಧಾರದಿಂದ ಕಾರ್ಯ ಪ್ರವೃತ್ತನಾದ.

ಜೊತೆಗೆ ಅವನ ಸಹಾಯಕ ಕಾರ್ಯದರ್ಶಿನಿಯಾದ ಮಿಸ್ 'ಬರ್ತ್‌ಕಿನ್ಸಿಕಿ' ಪ್ರೇರಣೆಯಿಂದ ವಿಶ್ವಶಾಂತಿಗಾಗಿ ನಡೆಯುತ್ತಿದ್ದ ಚಟುವಟಿಕೆಗಳಲ್ಲಿ ಭಾಗವಹಿಸುವಂತಾದ. ವಿನಾಶಕಾರಿಯಾದ ಯುದ್ಧಗಳನ್ನು ತಡೆಗಟ್ಟುವ ಬಗ್ಗೆ ಚಿಂತಿಸಿ ಜನರಲ್ಲಿ ಜಾಗೃತಿ ಮೂಡಿಸಲು ಪ್ರಯತ್ನಿಸಿದ.

ವಿನಾಶಕಾರಿ ಅಸ್ತ್ರಗಳು, ಸ್ಫೋಟಕಗಳು, ತಯಾರಿಸಿದ್ದರಿಂದಲೇ ಎಲ್ಲಾ ಅವಘಡಗಳಿಗೂ ನೀವೇ ತಪ್ಪಿತಸ್ಥರು ಎಂಬ ನೂರಾರು ಟೀಕಾ ಪತ್ರಗಳು ನೊಬೆಲ್‌ರಿಗೆ ಬರತೊಡಗಿದವು. ಇದಕ್ಕೆ ಸರಿಯಾದ




| ಆಯ್ಕೆ ಸಮಿತಿ | |
|---|---|
| ಭೌತಶಾಸ್ತ್ರ ಮತ್ತು ರಸಾಯನ ಶಾಸ್ತ್ರ | ಸ್ವೀಡಿಷ್ ಅಕಾಡೆಮಿ ಆಫ್ ಸೈನ್ಸ್ |
| ವೈದ್ಯಕೀಯ ಶಾಸ್ತ್ರ | ಸ್ಟಾಕ್‌ಹೋಂ ಕರೋಲಿನ್ ಇನ್ಸ್‌ಟಿಟ್ಯೂಟ್ |
| ಸಾಹಿತ್ಯ | ಸ್ವೀಡಿಷ್ ಅಕಾಡೆಮಿ ಆಫ್ ಲಿಟರೇಚರ್ |
| ಅರ್ಥಶಾಸ್ತ್ರ | ನಾರ್ವೆ ಸಂಸತ್ತು |
| ಶಾಂತಿ | ಸ್ವೀಡಿಷ್ ಅಕಾಡೆಮಿ ಆಫ್ ಸೈನ್ಸ್ |

ಉತ್ತರ ನೀಡಲೇಬೇಕೆಂಬ ದೃಢ ನಿರ್ಧಾರದಿಂದ ತನ್ನ ಉತ್ತರ ಪತ್ರಿಕೆಯ ಮೂಲಕ ಹೀಗೆ ತಿಳಿಸಿದ : ''ಮನುಷ್ಯ ಮನುಷ್ಯರ ನಡುವೆ ಎಲ್ಲಿಯವರೆಗೆ ದ್ವೇಷವಿರುತ್ತದೆಯೋ ಅಲ್ಲಿಯವರೆಗೆ ಜಗಳ ಯುದ್ಧ ಬಂದೇ ಬರುತ್ತದೆ. ನಿಮ್ಮ ಅಂತರಾಳದಲ್ಲಿರುವ ದ್ವೇಷ, ಕಿಚ್ಚು, ಸ್ವಾರ್ಥ ಬಿಸಾಡಿ. ಆಗ ನಾನು ಅಸ್ತ್ರ ಕೊಟ್ಟರೂ ಜಗಳವಾಡುವುದಿಲ್ಲ. ನನ್ನ ಅಸ್ತ್ರವನ್ನು ನಿಮ್ಮ ಸ್ವಾರ್ಥಕ್ಕೆ ದುರುಪಯೋಗ ಪಡಿಸಿಕೊಂಡದ್ದು ನಿಮ್ಮ ತಪ್ಪಲ್ಲವೆ ? ವಿಶ್ವಶಾಂತಿಗಾಗಿ ಬೇಕಾಗಿರುವುದು ನಿಶ್ಶಸ್ತ್ರೀಕರಣವಲ್ಲ, ದ್ವೇಷ, ಅಸೂಯೆ, ದುರಾಸೆಗಳ ನಿರ್ಮೂಲನ !'' – ಎಂತಹ ಮಾರ್ಮಿಕ ಉತ್ತರವಲ್ಲವೆ ?

**ಅಂತಿಮ ಮರಣ ಪತ್ರ**

ತನ್ನ ಸಂಶೋಧನೆಗಳಿಗೆ ಬಂದ ಒಟ್ಟು ೯೦ ಲಕ್ಷ ಅಮೆರಿಕನ್ ಡಾಲರ್ ಮೊತ್ತವನ್ನು ಸದ್ವಿನಿಯೋಗ ಮಾಡಲು ನೊಬೆಲ್ ನಿರ್ಧರಿಸಿದ. ಜೊತೆಗೆ ತನ್ನ ದೇಹಾರೋಗ್ಯ ಕ್ಷೀಣಿಸುತ್ತಿದ್ದುದನ್ನು ಗಮನಿಸಿದ ನೊಬೆಲ್ ೨೭ ನವೆಂಬರ್ ೧೮೯೫ರಂದು ತನ್ನ ಚರಿತ್ರಾರ್ಹವಾದ ಉಯಿಲನ್ನು ಬರೆದನು. ''ನನ್ನ ಆಸ್ತಿಯಿಂದ ಬರುವ ಒಟ್ಟು ಹಣದ ಬಡ್ಡಿಯಿಂದ ಪ್ರತೀ ವರ್ಷವೂ ಮಾನವ ಕಲ್ಯಾಣಕ್ಕಾಗಿ ಉಪಯುಕ್ತವಾದ ಕೆಲಸಕ್ಕೆ ಕಾರಣರಾದವರಿಗೆ ಬಹುಮಾನವಾಗಿ ನೀಡಬೇಕು. ಬಡ್ಡಿಯ ಮೊತ್ತವನ್ನು ಐದು ಸಮಭಾಗಗಳಾಗಿ ಮಾಡಿ ಪ್ರಶಸ್ತಿಯನ್ನು ನೀಡಬೇಕು. ಅಭ್ಯರ್ಥಿಗಳಿಗೆ ಬಹುಮಾನ ನೀಡುವಾಗ ಆತನ ಅರ್ಹತೆ ನೋಡಬೇಕೇ ಹೊರತು ಆತನ ದೇಶವನ್ನಲ್ಲ'' – ಎಂದು ಬರೆದು ತಿಳಿಸಿದ್ದ.

೧೮೯೬ರಲ್ಲಿ ಅವನು ಇಟಲಿ ರಾಜಧಾನಿ ರೋಮ್‌ನಲ್ಲಿದ್ದಾಗ ಮಿದುಳಿನ ರಕ್ತಸ್ರಾವ ತೀವ್ರಗೊಂಡಿತು. ಇದರಿಂದ ಆಸ್ಪತ್ರೆಗೆ ಸೇರಿದ ನೊಬೆಲ್ ತನ್ನ ೬೩ನೇ ವಯಸ್ಸಿನಲ್ಲಿ ಡಿಸೆಂಬರ್ ೧೦, ೧೮೯೬ರಂದು ಕೊನೆಯುಸಿರೆಳೆದನು. ದುರಂತವೆಂದರೆ ಅವನಿಗೆ ಸಾವು ಬಂದ ಗಳಿಗೆಯಲ್ಲಿ ತನ್ನವರೆಂದು ಹೇಳಿಕೊಳ್ಳುವ ಯಾರೂ ಅವನ ಬಳಿ ಇರಲಿಲ್ಲ! ಆದಾಗಲೇ ಹೆಂಡತಿಯಾದವಳು ಗಣಿತ ತಜ್ಞನೊಬ್ಬನನ್ನು ಮೆಚ್ಚಿ ಓಡಿಹೋಗಿದ್ದಳು. ಅವನ ಬಾಳಿನಂತೆ ಅವನ ಸಾವೂ ಎಲ್ಲರಿಂದ ದೂರವಾಯಿತು.

ಡಿಸೆಂಬರ್ ೨೯ರಂದು ಹುಟ್ಟೂರಾದ ಸ್ಟಾಕ್‌ಹೋಂನಲ್ಲಿ ಕೆಲವೆ ಜನರ ಸಮ್ಮುಖದಲ್ಲಿ ಶವಸಂಸ್ಕಾರ ಮಾಡಲಾಯಿತು. ಆತನ ಉಯಿಲು ಐದು ವರ್ಷಗಳ ನಂತರ ಕಾರ್ಯರೂಪಕ್ಕೆ ಬಂದಿತು. ೧೯೦೧ರ ಡಿಸೆಂಬರ್ ೧೦ರಂದು ವಿಶ್ವದ ಮೊದಲ ನೊಬೆಲ್ ಪ್ರಶಸ್ತಿ ವಿತರಣೆಯು ನಡೆಯಿತು. ೧೯೬೯ರಿಂದ ಅರ್ಥಶಾಸ್ತ್ರಕ್ಕೆ ಬಹುಮಾನ ಕೊಡುವ ಪರಿಪಾಠ ಪ್ರಾರಂಭವಾಯಿತು.

ವಿನಾಶಕಾರಿ ಸ್ಫೋಟಕವನ್ನು ಸಂಶೋಧಿಸಿದರೂ ಅದನ್ನು ಬಳಸದೇ ವಿಶ್ವಶಾಂತಿಯನ್ನು ಪುರಸ್ಕರಿಸಿದ ಮಹಾನ್ ಮಾನವತಾವಾದಿಯಾದ ನೊಬೆಲ್‌ರ ಕನಸನ್ನು ನಾವಿಂದು ಸಾಕಾರ ಮಾಡುವ ಕರ್ತವ್ಯ ನಮ್ಮ ಮುಂದಿದೆ. ತಾನು ಗಳಿಸಿದ ಸಂಪತ್ತಿನಲ್ಲಿ ಮಾನವ ಕಲ್ಯಾಣಕ್ಕಾಗಿ ಸೇವೆ ಸಲ್ಲಿಸಿದವರಿಗೆ ನೀಡುವ ಸಲುವಾಗಿ ನೊಬೆಲ್ ಪ್ರಶಸ್ತಿ ಹುಟ್ಟು ಹಾಕಿದ್ದು ಅವರ ವಿಶ್ವಶಾಂತಿ ಕಾಳಜಿಗೆ ಒಂದು ನಿದರ್ಶನವಾಗಿದೆ.


**ಜಗನ್ನಾಥ ಅ. ಸಣ್ಣೂರ**
ನಂ. ಎಫ್ - ೧೭/೪, ವಾಸವದತ್ತಾ ಸಿಮೆಂಟ್ ಕಾಲೋನಿ
ಸೇಡಮ್ - ೫೮೫ ೨೨೨, ಗುಲ್ಬರ್ಗಾ

ದಕ್ಷಿಣ ಕನ್ನಡದ ಕರಾವಳಿ ಪ್ರದೇಶದ ಅತ್ಯಂತ ಜನಪ್ರಿಯ ಕಲಾ ಪ್ರಕಾರಗಳಲ್ಲೊಂದಾದ ಯಕ್ಷಗಾನ ಕಲೆಯು ಆ ಪ್ರದೇಶದ ಸಾಂಸ್ಕೃತಿಕ ಪರಂಪರೆಯೊಂದಿಗೆ ಮಿಳಿತಗೊಂಡಿದೆ. ಪ್ರತಿಯೊಂದು ಯಕ್ಷಗಾನ ಕಥಾನಕವನ್ನು 'ಪ್ರಸಂಗ'ವೆಂದು ಕರೆಯುತ್ತಾರೆ. ಬಹಳಷ್ಟು ಪ್ರಸಂಗಗಳು ನಮ್ಮ ದೇಶದ ಸುಪ್ರಸಿದ್ಧ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತ ಹಾಗೂ ಆದರಣೀಯ ಪುರಾಣ ಗ್ರಂಥಗಳ ರೋಚಕ ಮತ್ತು ಸ್ವಾರಸ್ಯಕರ ಅಧ್ಯಾಯಗಳ ಆಧಾರದ ಮೇಲೆ ರಚಿತಗೊಂಡಿವೆ. ಕೆಲವು ಪ್ರಸಂಗಗಳು ಪ್ರಾದೇಶಿಕ ಜಾನಪದ ಕಥೆಗಳಿಂದಲೂ ಸ್ಫೂರ್ತಿ ಪಡೆದಿವೆ. ಈ ಕಲಾ ಪ್ರಕಾರವು ಹಾಡುಗಾರಿಕೆ, ಸಂಭಾಷಣೆ ಮತ್ತು ನೃತ್ಯಗಳ ವೈಶಿಷ್ಟ್ಯಪೂರ್ಣ ಸಮ್ಮಿಶ್ರಣವಾಗಿದೆ. ಪ್ರಸಂಗದ ಪ್ರಾರಂಭ ಮತ್ತು ನಿರೂಪಣೆಯನ್ನು ಭಾಗವತರು ತಮ್ಮ ಆಕರ್ಷಕ ಶೈಲಿಯ ಹಾಡುಗಾರಿಕೆಯಿಂದ ನಿರ್ವಹಿಸುತ್ತಾರೆ. ಹಿಮ್ಮೇಳ ಕಲಾವಿದರು ಚಂಡೆ, ಮದ್ದಳೆ ಮತ್ತು ತಾಳಗಳೊಂದಿಗೆ ನಿರೂಪಣೆಯನ್ನು ಶ್ರೀಮಂತಗೊಳಿಸುತ್ತಾರೆ. ಆಕರ್ಷಕ ಶಿರಸ್ತ್ರಾಣ, ಭುಜಕೀರ್ತಿ, ರಂಗುರಂಗಿನ ಉಡುಪು ಮತ್ತು ಬಗೆಬಗೆಯ ಆಭರಣಗಳನ್ನು ಧರಿಸಿದ ಕಲಾವಿದರು ವಿವಿಧ ಪಾತ್ರಗಳನ್ನು ರಂಗಸ್ಥಳದ ಮೇಲೆ ಸಾಕಾರಗೊಳಿಸುತ್ತಾರೆ. ಕಲಾವಿದರು ಹಾವಭಾವ ಮತ್ತು ಹಿನ್ನೆಲೆ ಸಂಗೀತಕ್ಕೆ ತಕ್ಕ ಅಭಿನಯ, ಕುಣಿತದ ಹೆಜ್ಜೆಗಳಿಂದ ಪ್ರೇಕ್ಷಕರನ್ನು ರಂಜಿಸುತ್ತಾರೆ. ಪ್ರತಿಯೊಬ್ಬ ಕಲಾವಿದನು ತನ್ನೊಳಗೆ ಅಂತರ್ಗತವಾಗಿರುವ ಅಭಿನಯ ಪ್ರತಿಭೆಯನ್ನು ಅಭಿವ್ಯಕ್ತಗೊಳಿಸಿ ತನ್ನ ಪಾತ್ರದ ಆಶಯವು ಪ್ರೇಕ್ಷಕರನ್ನು ತಲುಪುವಂತೆ

# ಕರಾವಳಿ ಕಲೆ ಯಕ್ಷಗಾನದ ಪ್ರಸ್ತುತತೆ



ಮಾಡುತ್ತಾನೆ. ಕಲಾವಿದರು ಪಾತ್ರ ನಿರ್ವಹಣೆಯ ಜೊತೆಗೆ ಪ್ರೇಕ್ಷಕರೊಂದಿಗೆ ಭಾವನಾತ್ಮಕ ಸಂಪರ್ಕವನ್ನು ಸಾಧಿಸುತ್ತಾರೆ.

ಅತ್ಯಂತ ನೈಪುಣ್ಯದಿಂದ ಸಿದ್ಧಪಡಿಸಿದ, ಪಾತ್ರಕ್ಕೆ ತಕ್ಕಂತಹ ವಸ್ತ್ರಾಭರಣಗಳು ಯಕ್ಷಗಾನ ಪ್ರದರ್ಶನದಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಕಲಾವಿದರು ಪಾತ್ರಗಳಿಗೆ ಅನುಗುಣವಾಗಿ ವಿಧವಿಧವಾದ ಉಡುಪು ಮತ್ತು ಆಭರಣಗಳನ್ನು ಧರಿಸುತ್ತಾರೆ. ''ಸುರ'' ಮತ್ತು ''ಅಸುರ'' ಪಾತ್ರಗಳನ್ನು ವಹಿಸುವ ಕಲಾವಿದರು ಪಾತ್ರಗಳ ಸ್ವಭಾವವನ್ನು ಪ್ರತಿಬಿಂಬಿಸುವ ವೇಷ ಭೂಷಣಗಳನ್ನು ತೊಡುತ್ತಾರೆ. ವಸ್ತ್ರಾಭರಣ ಮತ್ತು ಆಕರ್ಷಕ ಮುಖವರ್ಣಿಕೆ ಯಕ್ಷಗಾನ ಪ್ರದರ್ಶನಕ್ಕೆ ವಿಶೇಷ ಕಳೆಯನ್ನು ನೀಡುತ್ತವೆ. ಯಕ್ಷಗಾನ ಕಲಾವಿದರಿಗೆ ಬಾಲ್ಯದಿಂದಲೇ ದೇವಸ್ಥಾನಗಳ ಆವರಣಗಳಲ್ಲಿ ಯಕ್ಷಗಾನ ಕಲೆಯ ವಿವಿಧ ವಿಭಾಗಗಳಲ್ಲಿ ವಿಶೇಷ ಹಾಗೂ ಕಠಿಣ ತರಬೇತಿಯನ್ನು ನೀಡಲಾಗುತ್ತದೆ. ಯಕ್ಷಗಾನ ಕಲಾವಿದ ಅಭಿನಯ ಸಾಮರ್ಥ್ಯದೊಂದಿಗೆ ಇತರ ವಿಭಾಗಗಳ ಪರಿಜ್ಞಾನವನ್ನು ಸಹ ಹೊಂದಿರುತ್ತಾನೆ.

ಯಕ್ಷಗಾನದಲ್ಲಿ ಪ್ರಮುಖವಾಗಿ 'ತೆಂಕುತಿಟ್ಟು' ಹಾಗೂ 'ಬಡಗುತಿಟ್ಟು' ಎಂಬೆರಡು ಪ್ರಭೇದಗಳಿವೆ. ಈ ಎರಡು ಪ್ರಭೇದಗಳ ನಡುವೆ ನಿರೂಪಣಾ ಶೈಲಿ, ಹಿಮ್ಮೇಳ ವಾದ್ಯಗಳು ಮತ್ತು ಭಾಗವತಿಕೆಯ ಶೈಲಿಗಳಲ್ಲಿ ಹಲವು ವ್ಯತ್ಯಾಸಗಳಿವೆ.

ವೃತ್ತಿನಿರತ ಮೇಳಗಳು ಕರಾವಳಿ ಪ್ರದೇಶದ ಉದ್ದಗಲಕ್ಕೂ ಪ್ರದರ್ಶನಗಳನ್ನು ನೀಡುತ್ತಾ ಸಂಚರಿಸುತ್ತವೆ. ಮಳೆಗಾಲದ ಮೂರು ತಿಂಗಳ ಅವಧಿಯಲ್ಲಿ ಮಾತ್ರ ಈ ಮೇಳಗಳಿಗೆ ಬಿಡುವು. ಹಲವು ದಶಕಗಳ ಸತತ ಪ್ರದರ್ಶನದ ಫಲವಾಗಿ ಈ ಮೇಳಗಳು ಜನಮನವನ್ನು ಸೂರೆಗೊಂಡಿವೆ. ವೃತ್ತಿ ಮೇಳಗಳಲ್ಲಿ ಪ್ರಮುಖವಾದ ಮೇಳಗಳೆಂದರೆ ಮಂದರ್ತಿ, ಪೆರ್ಡೂರು, ಸಾಲಿಗ್ರಾಮ ಮತ್ತು ಶ್ರೀ ಧರ್ಮಸ್ಥಳ ಮಂಜುನಾಥ ಕೃಪಾ ಪೋಷಿತ ಮೇಳಗಳು. ಯಕ್ಷಗಾನ ರಸಿಕ ಸಮೂಹ ಈ ಮೇಳಗಳನ್ನು ನಿರಂತರವಾಗಿ ಪೋಷಿಸಿ, ಪ್ರೋತ್ಸಾಹಿಸಿ ಬೆಳೆಸಿದೆ. ಹಲವು ದಶಕಗಳಿಂದ ಈ ಮೇಳಗಳು ವೈವಿಧ್ಯಮಯ ಹಾಗೂ ರಂಜನೀಯ ಪ್ರಸಂಗಗಳಿಂದ ಜನಪ್ರಿಯತೆಯನ್ನು ಗಳಿಸಿವೆ.

ಯಕ್ಷಗಾನ ಕಲಾ ಪ್ರಕಾರವು ಕರಾವಳಿ ಪ್ರದೇಶಗಳಿಗೆ ಮಾತ್ರ





'ಚಿತ್ತ ಚಂಚಲೆ' ಎಂಬ ಯಕ್ಷಗಾನ ಪ್ರಸಂಗದ ಒಂದು ದೃಶ್ಯ

ಸೀಮಿತಗೊಂಡಿರುವುದು ವಾಸ್ತವ ಸಂಗತಿ. ಇತ್ತೀಚಿನ ಹಲವು ವರ್ಷಗಳಿಂದ ನಗರದ ಕೆಲವು ಹವ್ಯಾಸಿ ಯಕ್ಷಗಾನ ತಂಡಗಳು ಮತ್ತು ಸಾಂಸ್ಕೃತಿಕ ಸಂಸ್ಥೆಗಳು ಯಕ್ಷಗಾನ ಕಲೆಯನ್ನು ಬಯಲುಸೀಮೆಯ ಇತರ ಪ್ರದೇಶಗಳಿಗೂ ಪರಿಚಯಿಸುತ್ತಿವೆ. ಕೆಲವು ಯಕ್ಷಗಾನ ತಂಡಗಳು ಯಕ್ಷಗಾನವನ್ನು ಜನಪ್ರಿಯಗೊಳಿಸುವ ಸಂಕಲ್ಪದೊಂದಿಗೆ ರಾಜ್ಯಾದ್ಯಂತ ಸಂಕ್ಷಿಪ್ತ ಪ್ರಸಂಗಗಳನ್ನು ಪ್ರದರ್ಶಿಸುತ್ತಿವೆ.

ಅಂತಹ ಸಂಸ್ಥೆಗಳಲ್ಲಿ, ಬೆಂಗಳೂರಿನ ''ಯಕ್ಷದೇಗುಲ'' ಒಂದು ಪ್ರಮುಖ ಯಕ್ಷಗಾನ ತಂಡ. ಈ ತಂಡವು ಯಕ್ಷಗಾನವನ್ನು ಜನಪ್ರಿಯಗೊಳಿಸುವ ಯೋಜನೆಯನ್ನು ರೂಪಿಸಿ ಹಲವಾರು ಸಾಂಪ್ರದಾಯಿಕ ಪ್ರಸಂಗಗಳ ಜೊತೆಯಲ್ಲೇ ಸಾಮಾಜಿಕ ಜನಜಾಗೃತಿಯನ್ನು ಮೂಡಿಸುವ ಪ್ರಸಂಗಗಳ ಪ್ರದರ್ಶನವನ್ನೂ ನೀಡಿದೆ. ಅನಕ್ಷರತೆ, ಅಸ್ಪೃಶ್ಯತೆ, ಪರಿಸರ ಮಾಲಿನ್ಯ, ಏಡ್ಸ್ ಮತ್ತು ಇತರ ಸಾಂಕ್ರಾಮಿಕ ರೋಗಗಳನ್ನು ಕುರಿತ ಪ್ರಸಂಗ ಪ್ರದರ್ಶನಗಳು ಜನಪ್ರಿಯತೆ ಗಳಿಸಿವೆ. ಇತ್ತೀಚೆಗಷ್ಟೆ ರೂಪುಗೊಂಡ ಮಕ್ಕಳ ತಂಡ ಯಕ್ಷಗಾನ ಪ್ರಸಂಗಗಳ ಅದ್ಭುತ ಪ್ರದರ್ಶನಗಳಿಂದ ಜನಮನ್ನಣೆಯನ್ನು ಗಳಿಸುತ್ತಿವೆ.

ಅಸಂಖ್ಯಾತ ಜಾನಪದ ಕಲಾ ಪ್ರಕಾರಗಳು ಸರ್ಕಾರ ಮತ್ತು ಸಮುದಾಯದ ನಿರ್ಲಕ್ಷ್ಯದಿಂದ ಕ್ಷೀಣಿಸಿ ನಶಿಸಿಹೋಗಿವೆ. ಯಾವುದೇ ಕಲಾ ಪ್ರಕಾರ ಸಮಕಾಲೀನ ಸಾಮಾಜಿಕ ಪ್ರಸುತ್ತತೆಯನ್ನು ಪರಿಗಣಿಸದಿದ್ದರೆ ಉಳಿಯಲು ಮತ್ತು ಬೆಳೆಯಲು ಸಾಧ್ಯವಿಲ್ಲ. ಯಕ್ಷಗಾನ ಕಲೆಯು ಇದಕ್ಕೆ ಹೊರತಾದುದಲ್ಲ.

ವೃತ್ತಿ ಮತ್ತು ಹವ್ಯಾಸಿ ತಂಡಗಳು ಪ್ರೇಕ್ಷಕ ವರ್ಗದ ಮನೋಭಾವದಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಮನಗಂಡು ಸೂಕ್ತ ಮಾರ್ಪಾಡುಗಳನ್ನು ಮಾಡಿಕೊಳ್ಳಬೇಕಾಗಿದೆ. ಸಂಪ್ರದಾಯನಿಷ್ಠ ಮೇಳಗಳು ಮತ್ತು ಕಲಾವಿದರು ಯಕ್ಷಗಾನ ಕಲೆಯ ತಾತ್ವಿಕ ನೆಲೆಗಟ್ಟು ಮತ್ತು ಚೌಕಟ್ಟುಗಳ ಬದಲಾವಣೆಗಳನ್ನು ತೀವ್ರವಾಗಿ ವಿರೋಧಿಸುತ್ತಾರೆ. ಯಕ್ಷಗಾನ ಕಲೆಯ ಕೆಲವು ನಿಷ್ಠಾವಂತ ಪ್ರೇಕ್ಷಕರಂತೂ ಬದಲಾವಣೆಯ ಸಾಧ್ಯತೆಗಳನ್ನು ಚರ್ಚಿಸಲು ಸಹಿತ ಸಿದ್ಧರಿಲ್ಲ.

ನಮ್ಮ ನಾಡಿನ ಪ್ರಾಚೀನ ಕಲೆಗಳಲ್ಲೊಂದಾದ ಯಕ್ಷಗಾನ ಕಲೆಯು ಯಾವುದೇ ಸಂದೇಶವನ್ನು ಜನತೆಗೆ ತಲುಪಿಸಬಲ್ಲ ಪ್ರಭಾವಶಾಲಿ ಕಲಾ ಮಾಧ್ಯಮವೆಂಬುದರಲ್ಲಿ ಸಂಶಯವಿಲ್ಲ. ಇಂತಹ ಕಲೆಯು ಅಸ್ತಮಾನದ ಹಾದಿಯನ್ನು ತುಳಿಯಲು ಬಿಡಬಾರದು. ಯಕ್ಷದೇಗುಲದಂತಹ ಸಂಸ್ಥೆಗಳು ಯಕ್ಷಗಾನ ಕಲೆಯ ಹರವು ಮತ್ತು ವಿಸ್ತಾರಗಳ ಸಾಧ್ಯತೆಯನ್ನು ಅನುಭವದ ಮೂಲಕ ಮನಗಂಡಿವೆ.

ಕರಾವಳಿ ಪ್ರದೇಶದ ಜನತೆ ಈ ಕಲೆಯೊಂದಿಗೆ ಭಾವನಾತ್ಮಕ ಸಂಬಂಧವನ್ನು ಬೆಳೆಸಿಕೊಂಡಿದೆ. ಈ ಕಲೆಯ ಅಭ್ಯುದಯವನ್ನು ಬಯಸುವವರು ಯಕ್ಷಗಾನವು ಸಾಂಪ್ರದಾಯಿಕ, ಪೌರಾಣಿಕ ಪ್ರಸಂಗಗಳಿಗೆ ಮಾತ್ರ ಸಮರ್ಪಿತವೆಂಬ ಧೋರಣೆಯನ್ನು ತ್ಯಜಿಸಬೇಕು. ಯಕ್ಷಗಾನ ಕಲೆಯು ತನ್ನ ಅಭ್ಯುತ್ಥಾನದ ದೃಷ್ಟಿಯಿಂದ ಸಾಮಾಜಿಕ ಪರಿವರ್ತನೆಯ ರೂಪುರೇಷೆಗಳನ್ನು ಕಲಾ ಪ್ರಕಾರದ ಚೌಕಟ್ಟಿನೊಳಗೆ ಅಳವಡಿಸಿಕೊಳ್ಳುವುದೇ ಶ್ರೇಯಸ್ಕರ.

ಶಂಕರನಾರಾಯಣ
೫೪/೧೧೪, ಕೆನರಾ ಬ್ಯಾಂಕ್ ಕಾಲೋನಿ, ಚಿಕ್ಕಲಸಂದ
ಸುಬ್ರಮಣ್ಯಪುರ ಅಂಚೆ, ಬೆಂಗಳೂರು - ೫೬೦ ೦೬೧

# ಒಳ್ಳೆಯ ಓದು



## ಬಸವ ನೈವೇದ್ಯ

ಶ್ರೀ ಬಸವಲಿಂಗ ಪಟ್ಟದ್ದೇವರು

**ಪುಟ : ೧೬೦** **ಬೆಲೆ : ರೂ. ೨೫**

ಬಸವ ಧರ್ಮ ಪ್ರಸಾರ ಸಂಸ್ಥೆ, ಹಿರೇಮಠ ಸಂಸ್ಥಾನ, ಭಾಲ್ಕಿ - ೫೮೫ ೩೨೮, ಬೀದರ ಜಿಲ್ಲೆ

ವಚನ ಸಾಹಿತ್ಯ ಎರವಲು ಸಾಹಿತ್ಯವಲ್ಲ; ಕನ್ನಡದ ನೆಲದಲ್ಲೇ ಸಾಮಾನ್ಯರಿಗಾಗಿ ಜನರ ಮಧ್ಯೆ ಹುಟ್ಟಿ ಬೆಳೆದ ಸಾಹಿತ್ಯ. ತಮ್ಮ ನಡೆ ನುಡಿಗಳಿಂದ ಬಸವಾದಿ ಪ್ರಮಥರು ಅಸಮಾನತೆ - ಮೂಢ ಕಂದಾಚಾರಗಳ ವಿರುದ್ಧ ಸಮರ ಸಾರಿ ಕೆಲವೊಂದು ಪ್ರಗತಿಪರ ವಿಚಾರಗಳನ್ನು ಜನರ ಮುಂದಿರಿಸಿ ವಚನ ಸಾಹಿತ್ಯದ ಮೂಲಕ ಪ್ರಚುರಪಡಿಸಿದರು. ವಚನ ಸಾಹಿತ್ಯದಲ್ಲಿ ಜೀವಂತವಾಗಿರುವ ಉತ್ತಮ ಧ್ಯೇಯಾದರ್ಶಗಳ ಪಾಲನೆ ಹಾಗೂ ಬಸವ ತತ್ವದ ಆಚರಣೆ ಈ ಲೇಖನಗಳ ಉದ್ದೇಶವಾಗಿದ್ದು ಇಲ್ಲಿ ಕೆಲವೊಂದು ವೈಚಾರಿಕ ನೆಲೆಯುಳ್ಳ ವಚನಗಳನ್ನು ಅರ್ಥೈಸಲಾಗಿದೆ.



## ಸ್ತ್ರೀ ಕಥನ

ಡಾ|| ಶೈಲಜಾ ಹಿರೇಮಠ

**ಪುಟ : ೧೪೪** **ಬೆಲೆ : ರೂ. ೭೫**

**ಭುವನ ಪ್ರಕಾಶನ**, ಎಂ. ಪಿ. ಪ್ರಕಾಶ್‌ನಗರ, ಹೊಸಪೇಟೆ - ೫೮೩ ೨೦೧

ಸ್ತ್ರೀ ಸಂಬಂಧಿ ವ್ಯಾಖ್ಯಾನಗಳು ಆದಿಮ ಸಂಸ್ಕೃತಿಯಿಂದಲೂ ಕೇಳಿಬರುತ್ತಿದ್ದು ಒಂದೊಂದು ಯುಗದಲ್ಲೂ ಆಕೆಯನ್ನು ಒಂದೊಂದು ಬಿಂದುವಿನಲ್ಲಿ ಗುರುತಿಸಲಾಗಿದೆ. ಕೆಲವೊಮ್ಮೆ ಅತೀ ಎತ್ತರಕ್ಕೇರಿಸಿ ಇನ್ನೊಮ್ಮೆ ಪ್ರಪಾತಕ್ಕೆ ತಳ್ಳಲಾಗಿದೆ. ಇಂದು ಆಕೆಯನ್ನು ಈ ಎರಡು ಅತಿಗಳ ನಡುವೆ ಗುರುತಿಸಬೇಕಾದ ಸ್ತ್ರೀವಾದಿ ನೆಲೆಯಿಂದ ಅರ್ಥೈಸಿ ಗೌರವಿಸಬೇಕಾದ ಹೊಸ ಪರಂಪರೆಯೊಂದು ಉದಿಸಬೇಕಾಗಿದೆ. ತಮ್ಮ ಆಳವಾದ ಅಧ್ಯಯನದ ಮೂಲಕ ಗ್ರಹಿಸಿದ ಸ್ತ್ರೀವಾದಿ ಚಿಂತನೆಗಳನ್ನು, ಆಕೆಯ ನೋವು ನಲಿವುಗಳನ್ನು, ಲೇಖಕಿ ಇಲ್ಲಿ ದಾಖಲಿಸಿದ್ದಾರೆ.

## ಲೈಂಗಿಕ ಆರೋಗ್ಯ



ಡಾ|| ಪದ್ಮಿನಿ ಪ್ರಸಾದ್

**ಪುಟ : ೧೬೮** **ಬೆಲೆ : ರೂ. ೬೦**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಡಾ|| ಪದ್ಮಿನಿ ಪ್ರಸಾದ್ ಹಿರಿಯ ಪ್ರಸೂತಿ ಮತ್ತು ಸ್ತ್ರೀರೋಗ ತಜ್ಞೆ ಮಾತ್ರವೇ ಅಲ್ಲದೆ ಲೈಂಗಿಕ ಮತ್ತು ವೈವಾಹಿಕ ಸಲಹಾ ತಜ್ಞರೂ ಆಗಿದ್ದಾರೆ. ನಮ್ಮ ಶಾಲಾ ಕಾಲೇಜುಗಳಲ್ಲಿ ಲೈಂಗಿಕ ಶಿಕ್ಷಣದ ಅವಶ್ಯಕತೆ ಇದೆಯೇ ಎಂಬುದು ಇನ್ನೂ ಚರ್ಚೆಯ ಹಂತದಲ್ಲೇ ಇದೆ. ಪತ್ರಿಕೆಗಳ ಹಾಗೂ ದೂರದರ್ಶನದ ವಿವಿಧ ವಾಹಿನಿಗಳ ಮೂಲಕ ಇವರು ಜನರಲ್ಲಿ ಲೈಂಗಿಕ ಆರೋಗ್ಯದ ಬಗ್ಗೆ ಅರಿವು ಮೂಡಿಸುತ್ತಿದ್ದಾರೆ. ಯುವಜನರು ಅತ್ಯಂತ ಮುಜುಗರ ಸಂಕೋಚಗಳಿಂದ ನೋಡುತ್ತಿರುವ ಒಂದು ವೈದ್ಯಕೀಯ ಅಧ್ಯಾಯವೇ ಆಗಿರುವ ಈ ಬಗ್ಗೆ ಲೇಖನಗಳಿವೆ.



## ಬುದ್ಧ ಹೇಳಿದ ಕಥೆ (ಮಕ್ಕಳ ನಾಟಕಗಳು)

ಎಸ್. ಮಾಲತಿ

**ಪುಟ : ೭೨** **ಬೆಲೆ : ರೂ. ೨೫**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಮಕ್ಕಳಿಗಾಗಿ ನೀತಿಪಾಠ ಕಲಿಸುವ, ಸಕಲಪ್ರಾಣಿಗಳಲ್ಲೂ ದಯೆ ಇರಿಸಬೇಕಾದ ಅಗತ್ಯವನ್ನು ತಿಳಿಸುವ, ಮಕ್ಕಳಿಗಾಗಿ ಬರೆದ ಮೂರು ಕಿರುನಾಟಕಗಳು. ರಂಗದ ಮೇಲೆ ಈಗಾಗಲೇ ಪ್ರದರ್ಶನಗೊಂಡಿವೆ. ಅನ್ಯಾಯದ ವಿರುದ್ಧ ಎಲ್ಲರೂ ಒಗ್ಗಟ್ಟಾಗಿ ಪ್ರತಿಭಟಿಸುವ ಅಗತ್ಯವನ್ನು ಕೊನೆಯ ನಾಟಕ ಧ್ವನಿಸುತ್ತದೆ. ಪ್ರಾಣಿ ಪಕ್ಷಿಗಳನ್ನು ಸುತ್ತಲಿನ ಗಿಡಮರಗಳನ್ನು ಮನುಷ್ಯ ಪ್ರೀತಿಯಿಂದ ನೋಡಿಕೊಳ್ಳಬೇಕಲ್ಲದೆ ಅವುಗಳಿಗೆ ಹಾನಿ ಮಾಡಬಾರದೆಂಬ ಸಂದೇಶ ಇಲ್ಲಿನ ನಾಟಕಗಳಲ್ಲಿ ಮುಖ್ಯವಾಗಿ ಗೋಚರಿಸುತ್ತದೆ.



## ಪ್ರೀತಿಯ ಕಣ್ಣು (ಕಾದಂಬರಿ)

ಶಾಂತಾರಾಮ ಸೋಮಯಾಜಿ

**ಪುಟ : ೨೦೪** **ಬೆಲೆ : ರೂ. ೧೦೦**

**ಇಂಚರ ಪ್ರಕಾಶನ**, ನಂ. ೧೬೭, ೧೦ನೇ ಮುಖ್ಯರಸ್ತೆ, ೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೮

ಒಂದು ಮಧ್ಯಮ ವರ್ಗದ ಸಾಂಸಾರಿಕ ಚಿತ್ರಣವನ್ನು ನೀಡುವ, ಸರಳವಾಗಿ ಅರ್ಥವಾಗುವ ಸಾಮಾಜಿಕ ಕಾದಂಬರಿ. ಎಲ್ಲ ಸಂಸಾರಗಳಲ್ಲಿರುವಂಥದೇ ನೋವು ನಲಿವು ಇಲ್ಲಿರುವುದಾದರೂ ವಿಶೇಷವಾದ ಪ್ರೀತಿ-ವಿಶ್ವಾಸವೊಂದು ತನ್ನ ಗಟ್ಟಿತನವನ್ನು ಕೊನೆಯತನಕ ಉಳಿಸಿಕೊಂಡು ಬಿರುಕುಗಳನ್ನು ಮುಚ್ಚುವ ಪ್ರಯತ್ನ ನಡೆಸಿದೆ. ಬದುಕಿನ ನೋವು ನಲಿವುಗಳನ್ನು ನಿರ್ಲಿಪ್ತವಾಗಿ ಸ್ವೀಕರಿಸಬೇಕಾದ ಅಗತ್ಯವೊಂದನ್ನು ಕಾದಂಬರಿಯ ಮೂಲಕ ಲೇಖಕರು ನಿರೂಪಿಸಿದ್ದಾರೆ. ನೂರೊಂದು ಸಮಸ್ಯೆಗಳ ಮಧ್ಯೆ ಬದುಕಿನ ಹುಡುಕಾಟ.

## ಸಿದ್ಧರಾಮನ ಸೊನ್ನಲಿಗೆ (ಸಾಂಸ್ಕೃತಿಕ ಅಧ್ಯಯನ)



ಡಾ|| ಜಿ. ಎನ್. ಉಪಾಧ್ಯ

**ಪುಟ : ೧೪೦** **ಬೆಲೆ : ರೂ. ೯೦**

**ಕನ್ನಡ ವಿಭಾಗ**, ಮುಂಬಯಿ ವಿಶ್ವವಿದ್ಯಾಲಯ, ವಿದ್ಯಾನಗರಿ, ಸಾಂತಾಕ್ರೂಜ್ (ಪೂರ್ವ), ಮುಂಬಯಿ – ೪೦೦ ೦೯೮

ಸಿದ್ಧರಾಮನ ಸೊನ್ನಲಿಗೆ ಗ್ರಂಥವೊಂದು ಮಹತ್ವದ ಸಂಶೋಧನ ಕೃತಿಯಾಗಿದೆ. ಚಿಕ್ಕಹಳ್ಳಿಯಾಗಿದ್ದ ಸೊನ್ನಲಿಗೆಯನ್ನು ದೇವಾಲಯ ನಿರ್ಮಾಣ ಹಾಗೂ ಸಾಮಾಜಿಕ ಧಾರ್ಮಿಕ ಕಾರ್ಯಗಳ ಮೂಲಕ ಅತ್ಯಂತ ಶ್ರಮಪಟ್ಟು ಹೆಸರುವಾಸಿಯಾಗುವಂತೆ ಮಾಡಿದವನು ಸಿದ್ಧರಾಮ ಶಿವಯೋಗಿ. ಈ ಕೃತಿಯು ಈ ಊರಿನ ಏಳುಬೀಳಿನ ಕೃತಿಯೂ ಆಗಿದೆ. ಸೊನ್ನಲಿಗೆಗೆ ಸಂಬಂಧಿಸಿದ ಹಲವಾರು ಶಾಸನಗಳೂ ಲಭ್ಯವಿದ್ದು ಈ ಪುಸ್ತಕದಲ್ಲಿ ಅವುಗಳ ಬಗ್ಗೆ ಧಾರಾಳವಾಗಿ ಮಾಹಿತಿ ಕೊಡಲಾಗಿದೆ. ಶಾಸನಗಳೇ ಇಲ್ಲಿನ ಕಥೆಗಳನ್ನು ಹೇಳುತ್ತಿವೆ ಎನ್ನಬಹುದು.

## ದೀಪದ ಕೆಳಗೆ



ಅಮೃತ ಸೋಮೇಶ್ವರ

**ಪುಟ : ೭೮** **ಬೆಲೆ : ರೂ. ೩೦**

**ಪ್ರಕೃತಿ ಪ್ರಕಾಶನ** , ಕೋಟೆಕಾರು, ಮಂಗಳೂರು, ದ.ಕ.

ಅಂಚೆ : ಕೋಟೆಕಾರು - ೫೭೫ ೦೨೨

ಇವು ಸಮಯೋಚಿತವಾಗಿ ಬರೆಯಲಾದ ಅಮೃತ ಸೋಮೇಶ್ವರ ಅವರ ವೈಚಾರಿಕ ನೆಲೆಯ ಕಿರುಬರಹಗಳು. ಅನೇಕ ವಿಷಯಗಳ ಮೇಲೆ ಸಂದರ್ಭಾನುಸಾರ ವಿವಿಧ ಪತ್ರಿಕೆಗಳಿಗೆ ಬರೆದ ಉತ್ತಮ ಅಭಿರುಚಿಯ ಚಿಕ್ಕ ಚೊಕ್ಕ ಮಾತುಗಳು. ಇಂದಿನ ಜನತೆಗೆ ಅತೀ ಅವಶ್ಯವಾದವುಗಳೆಂದು ಹೇಳಲಡ್ಡಿಯಿಲ್ಲ, ಜನತೆಗೆ ವಿಚಾರ ಪ್ರಚೋದನೆ ಉಂಟುಮಾಡುವಂಥ ಬಹಳಷ್ಟು ಅಂಶಗಳು ಈ ಲೇಖನಗಳಲ್ಲಿವೆ. ಮತೀಯ - ರಾಜಕೀಯ - ಧಾರ್ಮಿಕ ಈ ಮೂರೂ ನೆಲೆಗಳಲ್ಲಿ ಇಲ್ಲಿನ ಬರಹಗಳು ಜನಸಾಮಾನ್ಯರನ್ನು ಎಚ್ಚರಿಸುತ್ತವೆ.



## ಇವರದ್ದು ಇನ್ನೊಂದು ಕತೆ (ಕತೆಗಳು)

ನಾ. ಡಿಸೋಜ

**ಪುಟ : ೧೦೪** **ಬೆಲೆ : ರೂ. ೩೫**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ನಾ. ಡಿಸೋಜರ ಕಥೆಗಳು ಎಲ್ಲ ಕಾಲದಲ್ಲೂ ಎಲ್ಲ ಜನರಿಂದಲೂ ಪ್ರಶಂಸೆಗೊಳಗಾಗಲು ಕಾರಣ ಅವರ ಕಥೆಗಳಲ್ಲಿ ಮೂಡಿಬರುವ ಬಡವರಿಗಾಗಿ ಮಿಡಿಯುವ ಮಾನವೀಯತೆ ಮತ್ತು ಹೃದಯವಂತಿಕೆ ಎಂದು ಧಾರಾಳವಾಗಿ ಹೇಳಬಹುದು. ಕ್ರೈಸ್ತ ಸಮಾಜದ ಚೌಕಟ್ಟಿನಲ್ಲಿ ಬರೆಯಲಾದ ಕಥೆಗಳಾದರೂ ಅವು ಎಲ್ಲ ಸಮಾಜದ ಒಳಹೊರಗನ್ನು ಪ್ರತಿನಿಧಿಸುತ್ತವೆ. ಅವರ ಕಥೆಗಳ ಒಟ್ಟು ಆಶಯ ಈ ಸಮಾಜದ ಎಲ್ಲ ಅನಿಷ್ಟಗಳನ್ನು ತೊಡೆದುಹಾಕುವತ್ತ ಹೆಜ್ಜೆಯಿರಿಸಿ ಮನುಷ್ಯ ತಾನು ಸುಧಾರಣೆಗೊಳ್ಳಬೇಕೆಂಬುದೇ ಆಗಿರುತ್ತದೆ.

**– ಇಂದಿರಾ ಕುಮಾರಿ**

# ಇನ್ನೂ ಇದೆ, ಲಿಯೋನಿಡ್ ಉಲ್ಕಾವೃಷ್ಟಿ

ಮಳೆಗಾಲದಲ್ಲಿ ಆಕಾಶವನ್ನು ವೀಕ್ಷಿಸಲು ಪ್ರಯತ್ನಿಸಿ ನಿರಾಶರಾದವರಿಗೆ ಮತ್ತು ಈಗಷ್ಟೇ ನಭಾವಲೋಕನದ ಬಗ್ಗೆ ಆಸಕ್ತಿ ತಳೆದವರಿಗೆ ಈ ತಿಂಗಳು ಒಳ್ಳೆಯ ಅವಕಾಶಗಳು ಒದಗಿಬಂದಿವೆ. ಶುಭ್ರ ಆಕಾಶ ದೊರಕುವ ಸಾಧ್ಯತೆ ಹೆಚ್ಚು. ಸಂಜೆ ಸೂರ್ಯಾಸ್ತವಾದೊಡನೆ ಕತ್ತೆತ್ತಿ ನೋಡಿದಿರಾದರೆ ತಟ್ಟನೆ ಆಕರ್ಷಿಸುವ ಕಿತ್ತಲೆ ಬಣ್ಣದ ಚುಕ್ಕೆಯೇ ಮಂಗಳ. ಇದರಿಂದ ಸ್ವಲ್ಪ ಉತ್ತರಕ್ಕೆ ಅಂದರೆ ನೆತ್ತಿಯಲ್ಲೇ ಕಾಣುವ ಚೌಕವನ್ನು ಗಮನಿಸಿ. ಇದೇ ಪೆಗಸಸ್ (ಹಾರುವ ಕುದುರೆ); ನಕುಲ ಎಂಬುದು ಇದಕ್ಕೆ ನಮ್ಮವರಿಟ್ಟ ಹೆಸರು. ಕ್ಷೀಣವಾದ ಮೀನರಾಶಿಯ ಎರಡು ಮೀನುಗಳು ಈ ಚೌಕದ ಎರಡು ಪಕ್ಕಗಳಲ್ಲಿವೆ. ಮಂಗಳದ ನೇರಕ್ಕೆ ದಕ್ಷಿಣದಲ್ಲಿ ಕಾಣುವ ದಕ್ಷಿಣ ಮೀನವನ್ನು ಕಳೆದ ತಿಂಗಳು ಪರಿಚಯ ಮಾಡಿಕೊಂಡಿದ್ದಿರಿ. ಈಗ ಪಶ್ಚಿಮಕ್ಕೆ ಕಣ್ಣು ಹೊರಳಿಸಿ. ನಕ್ಷತ್ರಗಳೇ ಇಲ್ಲವೇ ಎನ್ನಿಸಬಹುದು. ನಿಧಾನವಾಗಿ ವಾಯವ್ಯಕ್ಕೆ ದೃಷ್ಟಿ ಹೊರಳಿಸಿ. ಪ್ರಖರ ನಕ್ಷತ್ರಗಳ ಹಾಸು ಅಲ್ಲಿ ಕಾಣುವುದು. ಮೂರು ಪ್ರಖರ ನಕ್ಷತ್ರಗಳ ತ್ರಿಕೋಣವಿದೆ – ಅದೇ ''ಬೇಸಿಗೆ ತ್ರಿಕೋಣ'' ಎಂದು ಪ್ಯಾಟ್ರಿಕ್ ಮೂರ್ ಎಂಬ ವಿಖ್ಯಾತ ನಕ್ಷತ್ರ ವೀಕ್ಷಕರು ಪರಿಚಯಿಸುವ ತ್ರಿಕೋಣ. ಅಕ್ವಿಲಾ (ಗರುಡ), ಲೈರಾ (ವೀಣಾ) ಮತ್ತು ಸಿಗ್ನಸ್ (ರಾಜಹಂಸ) ಈ ಮೂರೂ ನಕ್ಷತ್ರ ಪುಂಜಗಳ ಪ್ರಖರ ನಕ್ಷತ್ರಗಳವು. ಈ ತ್ರಿಕೋಣದ ಮಧ್ಯಭಾಗವನ್ನು ಗಮನಿಸಿ. ದುರ್ಬೀನು ಇದ್ದರೆ ವಿಶೇಷವಾಗಿ ಗಮನಿಸಿ. ಅಲ್ಲಿ ನಕ್ಷತ್ರಗಳ ಸಂಖ್ಯೆ ಹೆಚ್ಚು ಎಂಬ ಅಂಶ ತಿಳಿಯುತ್ತದೆ. ವಾಸ್ತವವಾಗಿ ಇದು ಆಕಾಶ ಗಂಗೆಯ ಒಂದು ಭಾಗ. ಅಕ್ವಿಲಾದ ಶ್ರವಣ ಮತ್ತು ಲೈರಾದ ಅಭಿಜಿತ್ ಈ ನಕ್ಷತ್ರಗಳು ಆಕಾಶ ಗಂಗೆಯ ಎರಡು ದಡಗಳಲ್ಲಿದ್ದಂತೆ ಕಂಡುಬರುತ್ತವೆ. ಇದಕ್ಕೊಂದು ಕಥೆಯೂ ಇದೆ. ಸುಲಭವಾಗಿ ಊಹಿಸಬಹುದಾದಂತೆ ಇವರಿಬ್ಬರೂ ಚಿರ ವಿರಹಿಗಳು. ಆತ ಸಾಧಾರಣ ನರ; ಆಕೆ ದೇವಕನ್ಯೆ. ಇಬ್ಬರ ನಡುವೆ ಹರಿಯುವ ಎಂದೂ ಬತ್ತದ ದೇವನದಿಯನ್ನು ಅವರು ದಾಟುವಂತಿಲ್ಲ, ಬೆರೆಯುವಂತಿಲ್ಲ, ಇದು ಕಥೆ. ನದಿಯ ಹರಿವನ್ನು ಗಮನಿಸಿ. ಉತ್ತರಕ್ಕೆ ಸಾಗುವ ಇದು ಕಾಸಿಯೋಪಿಯಾ (ಕುಂತಿ) ನಕ್ಷತ್ರ ಪುಂಜದ ಮೂಲಕ ಹಾದು, ಪರ್ಸಿಯುಸ್ (ಅರ್ಜುನ) ಮತ್ತು ಪೂರ್ವದಲ್ಲಿ ಆರಿಗ (ವಿಜಯಸಾರಥಿ)ವನ್ನೂ ಹಾಯುತ್ತದೆ. ಆರಿಗದ ಪಕ್ಕ ಇಂಗ್ಲಿಷ್ V ಆಕಾರದ ವೃಷಭ ಪೂರ್ವದಂಚಿನಲ್ಲಿ ಕಾಣುವುದು. ಕೃತ್ತಿಕಾ ಹೆಸರಿನ ನಕ್ಷತ್ರ ಸಮೂಹವೂ ವೃಷಭರಾಶಿಗೇ ಸೇರಿದುದು. ಹುಣ್ಣಿಮೆಯ ಚಂದ್ರ ಈ ನಕ್ಷತ್ರ ಸಮೂಹದ ಪಕ್ಕಕ್ಕೇ ಕಾಣುವುದು. ಆದ್ದರಿಂದ ಈ ತಿಂಗಳ ಹೆಸರೇ ಕಾರ್ತೀಕ.

ನೆತ್ತಿಗೆ ಸ್ವಲ್ಪ ದಕ್ಷಿಣಕ್ಕಿರುವ ಮಂಗಳ ಗ್ರಹ ಕಳೆದೆರಡು ಮೂರು ತಿಂಗಳಿಂದ ರಾಜ ವೈಭವದಿಂದ ಮೆರೆಯುತ್ತಿತ್ತು. ಈಗಲೂ ಅದರ ಹೊಳಪು ಕುಂದಿಲ್ಲ, ದೂರದರ್ಶಕವಿರುವವರಿಗೆ ಮಾತ್ರ ಅದರ ಗಾತ್ರ ಕಡಿಮೆಯಾಗಿರುವುದು ಕಾಣುವುದಷ್ಟೇ. ನವೆಂಬರ್ ಎರಡರಂದು ಮಂಗಳದ ಪಕ್ಕದಲ್ಲೇ ಚಂದ್ರ ವಿರಾಜಮಾನನಾಗುವ ಸಂದರ್ಭವನ್ನು ಛಾಯಾಗ್ರಾಹಕರು ಬಳಸಿಕೊಳ್ಳಬಹುದು. ಈ ಮಂಗಳಕ್ಕೆ ಒಬ್ಬ ಪ್ರತಿಸ್ಪರ್ಧಿ ಕಳೆದ ತಿಂಗಳೇ ಪ್ರತ್ಯಕ್ಷನಾಗಿದ್ದನಲ್ಲವೇ. ಪಶ್ಚಿಮದ ಅಂಚಿನಲ್ಲಿ ಕಾಣುವ ಶುಕ್ರ ಈ ಪ್ರತಿಸ್ಪರ್ಧಿ. ವಾಸ್ತವವಾಗಿ ಶುಕ್ರದ ಪ್ರಕಾಶ ಮಂಗಳಕ್ಕಿಂತ ಹೆಚ್ಚು. ಆದರೆ ಅದು ದಿಗಂತಕ್ಕೆ ತೀರಾ ಸಮೀಪವಾಗಿರುವುದರಿಂದ ಮಂಕಾಗಿ ಮಂಗಳದಷ್ಟೇ ಹೊಳಪಿದ್ದಂತೆ ಕಾಣುತ್ತದೆ. ತಿಂಗಳ ಕೊನೆಯ ಹೊತ್ತಿಗೆ ಶುಕ್ರ ದಿಗಂತದಿಂದ ಸ್ವಲ್ಪ ಮೇಲೇರುತ್ತದೆ. ಮಂಗಳಕ್ಕಿಂತ ಪ್ರಕಾಶಮಾನವಾಗಿ ಕಾಣುತ್ತದೆ. ಇಪ್ಪತ್ತೈದರಂದು ಪಶ್ಚಿಮದಂಚಿನಲ್ಲಿ ಬಾಲಚಂದ್ರನನ್ನು ಗಮನಿಸಿ. ಅದರ ಪಕ್ಕ ಕೋರೈಸುವ ಶುಕ್ರ; ಸ್ವಲ್ಪ ಕೆಳಗೆ ದಿಗಂತದಂಚಿನಲ್ಲಿ ಬುಧ ಗ್ರಹವನ್ನೂ ಗುರುತಿಸಬಲ್ಲಿರಿ.

ರಾತ್ರಿ ಒಂಬತ್ತರ ಹೊತ್ತಿಗೆ ಉದಯಿಸುವ ಗ್ರಹ ಶನಿ. ಮಿಥುನರಾಶಿಯ ಆಯತಾಕಾರದ ಮಧ್ಯದಲ್ಲಿ ಅದರ ಸ್ಥಾನ. ಸಾಕಷ್ಟು ಪ್ರಕಾಶಮಾನವಾದ ಇದನ್ನು ಗುರುತಿಸುವುದು ಕಷ್ಟವೇನಿಲ್ಲ. ಯಾವುದು ಗ್ರಹ ಯಾವುದು ನಕ್ಷತ್ರ ಎಂದು ಮನದಟ್ಟು ಮಾಡಿಕೊಳ್ಳಲು ಇದು ಒಳ್ಳೆಯ ಅವಕಾಶ.

ಬೆಳಗಿನ ಸುಮಾರು ಎರಡು ಗಂಟೆಗೆ ಉದಯಿಸುವ ಗ್ರಹ ಗುರು. ಇದು ಸಿಂಹರಾಶಿಯ ಅಂಚಿನಲ್ಲಿದೆ. ಸಿಂಹರಾಶಿಯನ್ನು ಗುರುತಿಸಲು ಈ ಪ್ರಕಾಶಮಾನ ಗ್ರಹವನ್ನೇ ಆಧಾರವಾಗಿಟ್ಟುಕೊಳ್ಳಬಹುದು. ಬೆಳಗಿನ ೫ ಗಂಟೆಯಲ್ಲಿ ಪೂರ್ವ ದಿಗಂತದಿಂದ ಸುಮಾರು ೪೫ ಡಿಗ್ರಿ ಎತ್ತರದಲ್ಲಿ ಅಂದರೆ ದಿಗಂತಕ್ಕೂ ನೆತ್ತಿಗೂ ನಡುವೆ ಇದು ಕಾಣುತ್ತದೆ. ಈ ರಾಶಿಗೂ ನವೆಂಬರ್‌ಗೂ ನಂಟು ತಂದಿಟ್ಟಿರುವುದು ಲಿಯೋನಿಡ್ಸ್ ಉಲ್ಕಾವೃಷ್ಟಿ. (ಲಿಯೋ ಎಂದರೆ ಸಿಂಹರಾಶಿ.) ಪ್ರತಿ ನವೆಂಬರ್ ೧೭-೧೮ಕ್ಕೆ ಉಲ್ಕೆಗಳ ಸುರಿಮಳೆಯಾಗುವುದು. ಕಳೆದ ಆರೇಳು ವರ್ಷಗಳಿಂದ ಈ ಸುರಿಮಳೆ ಸುದ್ದಿಯಲ್ಲಿದೆ. ಈ ವರ್ಷ ಸುರಿಮಳೆ ಇಲ್ಲ; ಆದರೆ ಎಂದಿನಂತೆ ವೃಷ್ಟಿ ಇದೆ ಎಂದು ಲೆಕ್ಕಾಚಾರ ತಿಳಿಸುತ್ತದೆ. ಲಿಯೋನಿಡ್ಸ್ ಹೆಸರೇಕೆ? ಈ ವೃಷ್ಟಿಯ ಉಲ್ಕೆಗಳೆಲ್ಲವೂ ಸಿಂಹರಾಶಿಯಿಂದ ಹೊರಟಂತೆ ಕಾಣುತ್ತವೆ. ಆದ್ದರಿಂದ ಈ ಹೆಸರಿದೆ. ಧೂಮಕೇತುವೊಂದು ಬಿಟ್ಟುಹೋದ ದೂಳು ಸೃಷ್ಟಿಸಿರುವ ಬೆಂಕಿಮಳೆ ಇದು. ಬರಿಗಣ್ಣಿಗೆ ಕಾಣದ ದೂಳಿನ ಕಣಗಳು ಕಿಡಿಯಂತೆ ಉರಿದು ಭಸ್ಮವಾಗುವುದನ್ನು ನೋಡಲು ಬರಿಗಣ್ಣೇ ಬೇಕು. ದೂರದರ್ಶಕ ಇಲ್ಲಿ ಅಪ್ರಯೋಜಕ. ಅನೇಕ ವರ್ಷಗಳ (ಬರಿಗಣ್ಣಿನ) ತಾಳ್ಮೆಯ ವೀಕ್ಷಣೆಗಳು ಒದಗಿಸಿರುವ ಮಾಹಿತಿ ವೈಶಿಷ್ಟ್ಯಪೂರ್ಣವಾಗಿದೆ. ಕಿಡಿಗಳನ್ನು ಕಂಡು ಅವು ಹೊರಟಿರಬಹುದಾದ ಬಿಂದುವನ್ನು ಗುರುತಿಸುವುದು ಚಮತ್ಕಾರ ಎನ್ನಿಸುವುದಾದರೆ, ಇಂತಹ ಬಿಂದುಗಳು (ಅಂದರೆ ದೂಳಿನ ಗುಂಪುಗಳು) ಅನೇಕವಿವೆ ಎಂದು ಗುರುತಿಸಿದ್ದು ಅದ್ಭುತವೇ ಎನ್ನಬಹುದು. ಧೂಮಕೇತು ಪ್ರತಿಬಾರಿ ಬಂದಾಗಲೂ ಬಿಟ್ಟುಹೋದ ದೂಳಿನ ಗುಂಪುಗಳನ್ನು ಈಗ ಪ್ರತ್ಯೇಕವಾಗಿ ಗುರುತಿಸುವುದು ಸಾಧ್ಯವಾಗಿದೆ. ಇಂತಹ ಎರಡು ಗುಂಪುಗಳಿಗೆ ಅತಿ ಸಮೀಪವಾಗಿ ಈ ಬಾರಿ ಭೂಮಿ ಹಾದುಹೋಗಲಿರುವುದರಿಂದ ಉಲ್ಕಾವೃಷ್ಟಿಯಲ್ಲಿ ಎರಡು ಬಾರಿ (ಒಂದೇ ದಿನದಲ್ಲಿ) ಗರಿಷ್ಠ ಉಂಟಾಗಲಿವೆ ಎಂದು ಲೆಕ್ಕ ತಿಳಿಸುತ್ತದೆ. ಇವುಗಳ ವೀಕ್ಷಣೆ ನಮಗೆ ಅನುಕೂಲಕರವಾಗಿಲ್ಲ. ಆದರೂ ೧೬, ೧೭, ೧೮, ೧೯ ಈ

ಡಾ|| ಬಿ. ಎಸ್. ಶೈಲಜಾ

ತಾರೀಖುಗಳಂದು ಬೆಳಗಿನ ಜಾವ ಲಿಯೋ ಅಂದರೆ ಸಿಂಹರಾಶಿಯತ್ತ ದೃಷ್ಟಿ ಹರಿಸಿದಲ್ಲಿ ಗಂಟೆಗೆ ಇಪ್ಪತ್ತು-ಇಪ್ಪತ್ತೈದು ಉಲ್ಕೆಗಳು ಕಾಣುವ ಸಾಧ್ಯತೆ ಇದೆ. ಅಮೆರಿಕ ಮತ್ತು ಆಸ್ಟ್ರೇಲಿಯಾದವರು ಇನ್ನೂ ಹೆಚ್ಚಿನ ಉಲ್ಕೆಗಳನ್ನು ಕಾಣಬಹುದು. ಸಿಂಹರಾಶಿಯನ್ನು ಗುರುತಿಸಬೇಕಾದದ್ದು ಈ ಕಾರಣದಿಂದ ಮಹತ್ವ ಪಡೆಯುತ್ತದೆ. ೧೮ರಂದು ಗುರುಗ್ರಹದ ಪಕ್ಕವೇ ಚಂದ್ರ ಕಾಣುವುದು. ಇದರಿಂದ ಕ್ಷೀಣವಾದ ಉಲ್ಕೆಗಳನ್ನು ಕಾಣುವುದು ಕಷ್ಟವಾಗುವುದಾದರೂ, ಗುರುಗ್ರಹವನ್ನು ಗುರುತಿಸುವುದು ಸುಲಭವಾಗುವುದು.

ಈ ತಿಂಗಳಲ್ಲಿ ಚಂದ್ರಗ್ರಹಣವಿದೆ. ಒಂಬತ್ತರ ಬೆಳಿಗ್ಗೆ (ಸುಮಾರು ಐದೂವರೆ ಗಂಟೆಗೆ) ಚಂದ್ರನನ್ನು ಗಮನಿಸಿ. ಪಶ್ಚಿಮದ ಅಂಚಿನಲ್ಲಿರುವ ಚಂದ್ರ ಆಗಲೇ ಭೂಮಿಯ ನೆರಳನ್ನು ಪ್ರವೇಶಿಸಿರುತ್ತದೆ. ಪೂರ್ಣಗ್ರಹಣ ಆರಂಭವಾಗುವಾಗ ಚಂದ್ರ ಕಂತಿರುತ್ತದೆ. ಚಂದ್ರಾಸ್ತಮಾನವನ್ನು ಛಾಯಾಗ್ರಹಣ ಮಾಡಲು ಒಳ್ಳೆಯ ಅವಕಾಶ.

ಹದಿನೈದು ದಿನಗಳ ನಂತರ ಸೂರ್ಯಗ್ರಹಣವೂ ಇದೆ. ಆಸ್ಟ್ರೇಲಿಯಾ ದಕ್ಷಿಣ ಅಮೆರಿಕಗಳಿಗೆ ಪಾರ್ಶ್ವ ಗ್ರಹಣ ನೋಡಲು ಸಿಗುತ್ತದೆ. ೨೩-೨೪ರ ನಡುರಾತ್ರಿಯಲ್ಲಿ ಪೂರ್ಣ ಗ್ರಹಣದ ನೆರಳು ಅಂಟಾರ್ಟಿಕಾ ಮೇಲೆ ಬೀಳುತ್ತದೆ.

ಮೀನುಗಾರರು ಅನುಭವದಿಂದ ಅಮಾವಾಸ್ಯೆಯಲ್ಲಿ ಭರತದ ಎತ್ತರ ಹೆಚ್ಚು ಎಂದು ಕಂಡುಕೊಂಡಿದ್ದಾರೆ. ಈ ಬಾರಿ ಅಮಾವಾಸ್ಯೆ ೨೪ರ ಬೆಳಗಿನ ಜಾವ ೪:೨೯ಕ್ಕೆ. ಇದಾದ ಒಂದು ನಿಮಿಷಕ್ಕೆ ಚಂದ್ರ-ಭೂಮಿ ನಡುವಿನ ದೂರ ಕನಿಷ್ಠವಾಗುತ್ತದೆ. ಈ ಕಾರಣದಿಂದ ಅಂದಿನ ಭರತದ ಅಲೆಗಳು ಹಿಂದಿನ ಎಲ್ಲ ಅಮಾವಾಸ್ಯೆಗಳ ಭರತಗಳಿಗಿಂತ ಹೆಚ್ಚು ಎತ್ತರ ಪಡೆಯುತ್ತವೆ.

**ಖಗೋಳ ದಿನಚರಿ**

- ೨ ಮಂಗಳ-ಚಂದ್ರ ನಡುವೆ ಕನಿಷ್ಠ ಕೋನ
- ೯ ಚಂದ್ರಗ್ರಹಣ – ಕೃತ್ತಿಕಾ ನಕ್ಷತ್ರದ ಪಕ್ಕ ಚಂದ್ರನ ಸ್ಥಾನ
- ೧೦ ಚಂದ್ರ-ಭೂಮಿ ದೂರ ಗರಿಷ್ಠ (೪೦೬, ೩೦೧ ಕಿ.ಮೀ.)
- ೧೩ ಶನಿ-ಚಂದ್ರ ನಡುವೆ ಕನಿಷ್ಠ ಕೋನ
- ೧೭ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಯಲ್ಲಿ)
- ೧೭-೧೯ ಲಿಯೋನಿಡ್ ಉಲ್ಕಾವೃಷ್ಟಿ
- ೧೮ ಗುರು-ಚಂದ್ರ ನಡುವೆ ಕನಿಷ್ಠ ಕೋನ
- ೨೪ ಸೂರ್ಯಗ್ರಹಣ
  ಚಂದ್ರ-ಭೂಮಿ ದೂರ ಕನಿಷ್ಠ (೩೫೬, ೫೧೨ ಕಿ.ಮೀ.)
- ೨೫ ಶುಕ್ರ-ಚಂದ್ರ ನಡುವೆ ಕನಿಷ್ಠ ಕೋನ
- ೩೦ ಚಾಂದ್ರಮಾಸದ ಪ್ರಥಮ ಪಾದ

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್,
ಬೆಂಗಳೂರು - ೫೬೦ ೦೦೧

## ಸಾಮೂಹಿಕ ಸಾಮಾಜಿಕ ಶಿಕ್ಷಣ

**ಕಾ**ರ್ಮಿಕರಿಗೂ ಕೃಷಿಕರಿಗೂ ಕನಿಷ್ಠಮಟ್ಟದ ಆಹಾರ ಒದಗಿಸುವ ಪ್ರಶ್ನೆ ನಮ್ಮನ್ನು ಕಾಡಿಸುತ್ತಿರುವಾಗ ಕೆಲವೇ ಜನರಿಗೆ ಪರಮಾನ್ನ ತಯಾರಿಸುವುದರ ಬಗೆಗೆ ನಾವು ಕಾಳಜಿ ವಹಿಸಬೇಕೇ ? ವಿಷಯ ಸ್ಪಷ್ಟವಾಗಿಯೇ ಇದೆ : ಪ್ರತಿ ಸಂದರ್ಭದಲ್ಲೂ ನಮ್ಮ ಕಣ್ಣಮುಂದೆ ರೈತರ ಕಾರ್ಮಿಕರ ಚಿತ್ರ ನೆಲೆಯೂರಿರಬೇಕು. ನಮ್ಮ ಎಣಿಕೆಗಳೆಲ್ಲ ನಮ್ಮ ನಿರ್ವಹಣೆಗಳೆಲ್ಲಾ ಅವರಿಗಾಗಿ. ಈ ಕಾಳಜಿ ಕಲೆ ಮತ್ತು ಸಂಸ್ಕೃತಿಯ ವಲಯಕ್ಕೂ ಅನ್ವಯಿಸುತ್ತದೆ... ಕಲೆ ಜನತೆಗೂ, ಜನತೆ ಕಲೆಗೂ ಸಮೀಪವಾಗಬೇಕಾದರೆ ಜನತೆಯ ಸಾಮಾನ್ಯ ಶಿಕ್ಷಣ ಮತ್ತು ಸಂಸ್ಕೃತಿಯ ಮಟ್ಟವನ್ನು ಮೇಲೆತ್ತಬೇಕು... ನಮ್ಮ ವಿರೋಧಿಗಳು ಹೇಳುವಂತೆ ನಾವು ಕೆಲವರ ತಲೆಗಳನ್ನು ಕಡಿದೆವು ಮಾತ್ರವಲ್ಲ, ನಾವು ಹಲವಾರು ತಲೆಗಳಲ್ಲಿ ಒಂದಿಷ್ಟು ಅರಿವಿನ ಬೆಳಕನ್ನು ತುಂಬಿದ್ದೇವೆ... ನಮ್ಮ ಕ್ರಾಂತಿ, ಕಾರ್ಮಿಕರಲ್ಲೂ ರೈತರಲ್ಲೂ ಶಿಕ್ಷಣಕ್ಕಾಗಿ, ಜ್ಞಾನಕ್ಕಾಗಿ, ಸಂಸ್ಕೃತಿಯ ಅನುಭವಕ್ಕಾಗಿ ಉದ್ದೀಪನಗೊಳಿಸಿರುವ ದಾಹದಾಳಕ್ಕೆ ಹೋಲಿಸಿದರೆ ನಾವು ಈಗ ಮಾಡುತ್ತಿರುವುದು ಏನೇನೂ ಸಾಲದು. ಈ ದಾಹ ಬರೇ ಮಹಾನಗರವಾಸಿಗಳಿಗೇ ಸೀಮಿತವಾಗದೆ ಹಳ್ಳಿ ಹಳ್ಳಿಗೂ ಕುಗ್ರಾಮಕ್ಕೂ ಹಬ್ಬಿದೆ... ನಮ್ಮ ಸಾಕ್ಷರತಾ ಚಳುವಳಿ ಸಹಸ್ರ ಬಾಹುವಾಗಿ ಬೆಳೆಯುತ್ತಿದೆ... ಅಗ್ಗವೆನಿಸುವ ಒಂದಿಷ್ಟು ಶಿಕ್ಷಣವೂ, ಸಾಂಸ್ಕೃತಿಕ ಅನುಭವವೂ ದಕ್ಕದ ಈ ಹಿಂದುಳಿದ ಕೋಟ್ಯಂತರ ಜನಸಮೂಹ ಈ ನಮ್ಮ ಚಳುವಳಿಯನ್ನು ಹೇಗೆ ಗ್ರಹಿಸಿಯಾರು ? ಇಂದು ಹಲವು ಸಹಸ್ರ ಮಂದಿ, ನಾಳೆ ಮತ್ತಷ್ಟು ಸಹಸ್ರ ಮಂದಿ ನಮ್ಮ ಮಹಾನಗರಗಳಲ್ಲಿ ರಂಗಮಂದಿರಗಳಲ್ಲಿ ಕಿಕ್ಕಿರಿದು ಕಲಾನುಭವ ಪಡೆಯುವಂತಾದೀತು. ಆದರೆ ಅದೇ ಕಾಲದಲ್ಲಿ ಲಕ್ಷಲಕ್ಷ ಜನರು ತಮ್ಮ ಹೆಸರನ್ನು ಬರೆಯುವುದು ಹೇಗೆಂದು ಕಲಿಯಲು ಹೆಣಗಾಡುತ್ತಿರುತ್ತಾರೆ. ಭೂಮಿ ಚಪ್ಪಟೆಯಲ್ಲ, ದುಂಡಗಿದೆ ಎಂದೂ, ಜಗತ್ತನ್ನು ಮಾಟಗಾರ್ತಿಯರೋ, ಮಂತ್ರವಾದಿಯೋ ಅಥವಾ ಯಾವುದೋ ದೈವಿಕ ಪಿತೃವೋ ಆಳುತ್ತಿಲ್ಲ, ಅದನ್ನು ನಡೆಸುತ್ತಿರುವುದು ಪ್ರಾಕೃತಿಕ ನಿಯಮಗಳೆಂದು ತಿಳಿಯಲು ಸಮರ್ಥವಾಗುವಷ್ಟು ಅಲ್ಪಮಟ್ಟದ ಸಂಸ್ಕೃತಿಯನ್ನು ಪಡೆದುಕೊಳ್ಳಲು ಶ್ರಮಿಸುತ್ತಿರುತ್ತಾರೆ...

ಕಾಮ್ರೇಡ್ ಲೆನಿನ್ ! ನಿನ್ನ ಜನತೆಯ ಅನಕ್ಷರತೆ ಅಂಥ ಅನನುಕೂಲವಾದುದೇನೂ ಅಲ್ಲ ಬಿಡು ! ಸದ್ಯ, ಅವರ ಅಜ್ಞಾನವೆಂದರೆ ಬೂರ್ಷ್ವಾ ಚಿಂತನೆ. ಸಂಸ್ಕೃತಿಯ ಬಗೆಗೂ ಅಜ್ಞಾನವೇ ! ನೀನೀಗ ಈ ಮುಗ್ಧರಿಗೆ ನಿನ್ನ ಕ್ರಾಂತಿ ಪಾಠ ಕಲಿಸುವುದು ಸುಲಭವೇ ಆಯ್ತು... ಕ್ಲಾರಾ ! ನೀನು ಹೇಳುವ ಮಾತು ಒಂದು ಸ್ತರದಲ್ಲಿ ಸರಿ ಇರಬಹುದು... ಹಳೆಯ ಪ್ರಭುತ್ವವನ್ನು ನಾಶಪಡಿಸುವ ಸಂದರ್ಭದಲ್ಲಿ ಜನತೆಯ ಅನಕ್ಷರತೆ ಅಡ್ಡಿಯಾಗದಿರಬಹುದು... ಆದರೆ ನಾಶಪಡಿಸುವುದಷ್ಟೆ ನಮ್ಮ ಗುರಿಯಲ್ಲವಲ್ಲ? ಅದರ ಸ್ಥಾನದಲ್ಲಿ ಅದಕ್ಕಿಂತ ಉತ್ತಮವಾದುದನ್ನು ಸೃಷ್ಟಿಸಬೇಕೆಂದಲ್ಲವೇ ನಾಶಪಡಿಸಿದ್ದು? ಈ ಪುನಃಸೃಷ್ಟಿಯ ಸೃಜನಶೀಲ ಕೆಲಸದಲ್ಲಿ ಅನಕ್ಷರತೆಯಿಂದ ಏನೇನೂ ಪ್ರಯೋಜನವಿಲ್ಲ. ಮಾರ್ಕ್ಸ್‌ನನ್ನು ನಾವು ಸರಿಯಾಗಿ ಗ್ರಹಿಸಿದ್ದರೆ, ಈ ಪುನಃಸೃಷ್ಟಿಯ ಕೆಲಸ ಆಗಬೇಕಾದದ್ದು ಈ ರೈತ ಮತ್ತು ಕಾರ್ಮಿಕರಿಂದಲೇ. ಅವರು ತಮ್ಮ ನಿಜವಾದ ಸ್ವಾತಂತ್ರ್ಯವನ್ನು ಗಳಿಸುವ ಮಾರ್ಗವೇ ಇದು. ಹಿಂದಿನ ಬೂರ್ಷ್ವಾ ದಬ್ಬಾಳಿಕೆಯಲ್ಲಿ ಬೆಳೆದ ಇಂದಿನ ಈ ಯುವಪೀಳಿಗೆ ಯಾವ ಶಿಕ್ಷಣವನ್ನೂ, ಸಾಂಸ್ಕೃತಿಕ ಅನುಭವಗಳನ್ನೂ ಪಡೆಯದೆಯೇ ಬೆಳೆದವರು. ಇವರಲ್ಲಿ ಈಗ ಶಿಕ್ಷಣದ ದಾಹ, ಸಂಸ್ಕೃತಿಯ ತಿಳಿವಳಿಕೆಗೆ ಹಾಹಾಕಾರ ಸಿಡಿದೆದ್ದಿದೆ... ನಾವು ಅವರಿಗೆ ಆ ಅವಕಾಶ ಒದಗಿಸಲು ಸರ್ವವಿಧದ ಪ್ರಯತ್ನಗಳಲ್ಲೂ ತೊಡಗಿದ್ದೇವೆ... ಆದರೂ ಪುನರ್ನಿರ್ಮಾಣದ ಕೆಲಸಕ್ಕೆ ಅಗತ್ಯವಿದ್ದಷ್ಟು ಸೃಜನಶೀಲ ಹೊಸ ಪೀಳಿಗೆಯ ಕಾರ್ಯಕರ್ತರು ನಿರ್ಮಾಣವಾಗದೆ, ಸಾಲದಾಗದೆ, ಕೊರತೆಯುಂಟಾಗಿದೆ... ವಿಧಿ ಇಲ್ಲದೆ ಹಳೆಯ ಪ್ರಭುತ್ವದಲ್ಲಿ ಪಳಗಿದ ಅಧಿಕಾರಿಗಳ ಮೊರೆಹೋಗಬೇಕಾಗಿದೆ. ಪರಿಣಾಮವಾಗಿ ಅಧಿಕಾರಶಾಹಿ ನಮ್ಮಲ್ಲೂ ತಲೆ ಎತ್ತಿದೆ. ನಾನು ಯಾವುದೇ ಒಬ್ಬ ಅಧಿಕಾರಿಯ ಬಗ್ಗೆ ಹೇಳುತ್ತಿಲ್ಲ. ಒಟ್ಟಾರೆ ಅಧಿಕಾರಶಾಹಿಯನ್ನು ನಾನು ದ್ವೇಷಿಸುತ್ತೇನೆ. ಅಲ್ಲೊಬ್ಬ ಇಲ್ಲೊಬ್ಬ ಜಾಣ ಅಧಿಕಾರಿ ಇರಬಹುದು. ನನ್ನ ದ್ವೇಷ ಇಡೀ ವ್ಯವಸ್ಥೆಗೆ ಸಂಬಂಧಪಟ್ಟದ್ದು. ಅಡಿಯಿಂದ ಮುಡಿಯವರೆಗೆ ವ್ಯವಸ್ಥೆಯ ಮೇಲೆ ಅದರ ಭ್ರಷ್ಟ ಪ್ರಭಾವ ವ್ಯಾಪಕವಾದುದು. ಲಕ್ವಾ ಹೊಡೆಸುವಂಥದು. ಶಿಕ್ಷಣ ಜನತೆಯನ್ನೆಲ್ಲಾ ಒಳಗೊಳ್ಳುವಂತೆ ವ್ಯಾಪಕವಾದಾಗ, ಅವರಿಗೆ ಅಗತ್ಯ ತರಪೇತಿ ದೊರೆತಾಗ ಮಾತ್ರ ಅಧಿಕಾರಶಾಹಿಯನ್ನು ರೂಢಮೂಲವಾಗಿ ಕಿತ್ತೊಗೆಯಬಹುದು.



ನಮ್ಮ ಬ್ಯಾಲೆ, ರಂಗಮಂದಿರ, ಆಪೆರಾ, ಅತ್ಯಾಧುನಿಕ ಕಲಾ ಮತ್ತು ವಾಸ್ತುಶಿಲ್ಪ ಪ್ರದರ್ಶನಗಳು ಇವನ್ನೆಲ್ಲಾ ನೋಡಿದ ಯೂರೋಪಿನ ನೀವು 'ಬೋಲ್ಷೆವಿಕರು ಪರವಾಗಿಲ್ಲ, ನಾವು ತಿಳಿದಷ್ಟು ಭಯಂಕರ ಅನಾಗರಿಕರಲ್ಲ' ಎಂದು ಮೆಚ್ಚಿ ನುಡಿಯಬಹುದು. ಇವುಗಳ ವಿಶಿಷ್ಟ ಸ್ವರೂಪವನ್ನು ಅಗತ್ಯವನ್ನು ನಾನು ಅಲ್ಲಗಳೆಯುವುದಿಲ್ಲ. ಆದರೂ ರಸ್ತೆ ಸಂಪರ್ಕದಿಂದ ಕಡಿದ ಯಾವುದೇ ಮೂಲೆಗುಂಪಿನ ಕುಗ್ರಾಮಗಳಲ್ಲಿ ಒಂದೆರಡು ಪ್ರಾಥಮಿಕ ಶಾಲೆಗಳನ್ನು ಪ್ರಾರಂಭಿಸಿದಾಗ ನನಗೆ ಆಗುವ ಆನಂದ ಯಾವುದೋ ಭವ್ಯ ಕಲಾಪ್ರದರ್ಶನದಿಂದ ಆಗುವುದಕ್ಕಿಂತ ಹೆಚ್ಚಾದುದು. ಕಾರಣ, ಶಿಕ್ಷಣದ ಮೂಲಕ ಜನಸಮೂಹದ ಸಾಧಾರಣ ಸಾಂಸ್ಕೃತಿಕ ಮಟ್ಟದಲ್ಲಿ ಹೆಚ್ಚಳವಾದಾಗ ಮಾತ್ರ ಸಾಹಿತ್ಯಕ್ಕೆ, ಕಲೆಗೆ, ವಿಜ್ಞಾನಕ್ಕೆ, ತಂತ್ರಜ್ಞಾನದ ವಿಕಾಸಕ್ಕೆ ಬೇಕಾದ ಬತ್ತದ ಸೆಲೆಗೆ, ನಿರಂತರ ಸೃಜನ ಶಕ್ತಿಯ ಚಿಲುಮೆಗೆ, ಅನಿರ್ಬಂಧಿತ ತೊರೆಯ ಪ್ರವಾಹಕ್ಕೆ ಬುನಾದಿ ಹಾಕಿದಂತಾಗುತ್ತದೆ.

*– ವ್ಲಾದಿಮಿರ್ ಇಲ್ಯಿಚ್ ಲೆನಿನ್ (ಕ್ಲಾರಾ ಜೆಟ್‌ಕಿನ್ ವರದಿ)*

# ಅಕ್ಷರ ದಾಸೋಹ
## ಸರ್ಕಾರಕ್ಕೆ ಬಿಸಿ ತುಪ್ಪ

ನಾ. ದಿವಾಕರ

**ಭಾ**ರತದ ನಮ್ಮ ಸಂವಿಧಾನದಲ್ಲಿ ಎದ್ದುಕಾಣುವಂತಹ ಅಪ್ರತಿಮ ಅಂಶವೆಂದರೆ ಸಾಮಾಜಿಕ ನ್ಯಾಯ, ಸಮಾನತೆ ಹಾಗೂ ಶಿಕ್ಷಣಕ್ಕೆ ನೀಡಿರುವ ಮಹತ್ವ ಎಂದು ಹೇಳಬಹುದು. ಹದಿನಾಲ್ಕು ವರ್ಷದವರೆಗಿನ ಮಕ್ಕಳಿಗೆ ಉಚಿತವಾದ ಶಿಕ್ಷಣ ವೆಚ್ಚ ನೀಡುವುದು ಪ್ರಭುತ್ವದ ಮಹತ್ತರವಾದ ಜವಾಬ್ದಾರಿಯೆಂದು ಸಂವಿಧಾನದಲ್ಲಿ ಹೇಳಲಾಗಿದೆ. ಆದರೆ ಸ್ವಾತಂತ್ರ್ಯ ಗಳಿಸಿ ೫೬ ವರ್ಷಗಳಾದರೂ ಈ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಲಾಗದಿರುವುದು ಈ ದೇಶದ ದೊಡ್ಡ ದುರಂತ. ಸಂವಿಧಾನದ ಕರ್ತೃಗಳು ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣಕ್ಕೂ ಮುನ್ನ ಸಾಮಾಜಿಕ ನ್ಯಾಯದ ಬಗ್ಗೆ ಪ್ರಸ್ತಾಪಿಸಿರುವುದು ಈ ದೇಶದಲ್ಲಿ ಅಂದಿನಿಂದಲೂ ಕಾಡುತ್ತಿರುವ, ದಾರಿದ್ರ್ಯ-ಬಡತನವನ್ನು ದೃಷ್ಟಿಯಲ್ಲಿರಿಸಿಕೊಂಡೇ. ಇಂದಿಗೂ ಶೇ. ೫೦ಕ್ಕಿಂತಲೂ ಅಧಿಕ ಜನಸಂಖ್ಯೆಯು ಬಡತನ ರೇಖೆಯ ಕೆಳಗಿರುವುದು ನಮ್ಮ ಬೂರ್ಷ್ವಾ ಸರ್ಕಾರಗಳ ಮಾನವೀಯ ಸಂವೇದನೆಯ ಕುರುಹಾಗಿದೆ. ಬಡತನ ನಿವಾರಣೆಯ ಹೆಸರಿನಲ್ಲಿ, ಸಾಕ್ಷರತಾ ಆಂದೋಲನದ ನೆಪದಲ್ಲಿ ಕೋಟ್ಯಂತರ ಹಣವನ್ನು ಖರ್ಚು ಮಾಡಿದರೂ, ದೇಶದಲ್ಲಿ ಪ್ರಗತಿ ಆಗಿರುವುದು ಅಷ್ಟರಲ್ಲಿಯೇ ಇದೆ. ಈಗಲೂ ಸಹ ಶೇ. ೪೦ರಷ್ಟು ಶಾಲಾ ಮಕ್ಕಳು ಮೂರು-ನಾಲ್ಕನೇ ತರಗತಿಯಲ್ಲಿಯೇ ಶಾಲೆಯಿಂದ ಹೊರಬೀಳುತ್ತಾರೆ. ಒಂದೆಡೆ ಈ ಮಕ್ಕಳು ಹಸಿವಿನ ಬಳಲಿಕೆಯಿಂದ ಬಾಲಕಾರ್ಮಿಕರಾಗಿ ಮುಂದುವರಿದರೆ, ಇನ್ನೊಂದೆಡೆ ಖಾಸಗೀಕರಣ ಪ್ರಕ್ರಿಯೆಯ ಭರಾಟೆಯಲ್ಲಿ ಸರ್ಕಾರಿ ಶಾಲೆಗಳು ತಮ್ಮ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಿವೆ. ಶಿಕ್ಷಣ ಕ್ಷೇತ್ರದಲ್ಲಿ ಕ್ರಾಂತಿಕಾರಿ ಸುಧಾರಣೆಗಳನ್ನು ತಂದು, ಸರ್ಕಾರಿ ಶಾಲೆಗಳ ಗುಣಮಟ್ಟ ಹೆಚ್ಚಿಸಿ, ಶಿಕ್ಷಣವು ಎಲ್ಲ ವರ್ಗಗಳ ಜನರ ಕೈಗೆಟುಕುವ ಹಾಗೆ ಮಾಡುವುದು ಇಂದಿನ ಸರ್ಕಾರಗಳ ಮುಖ್ಯ ಕರ್ತವ್ಯವಾಗಬೇಕಾಗಿದೆ. ಬಡಮಕ್ಕಳನ್ನು, ಊಳಿಗಮಾನ್ಯ ವ್ಯವಸ್ಥೆಗೆ ಸಿಲುಕಿದ ಹಸುಳೆಗಳನ್ನು, ಶಿಕ್ಷಣದತ್ತ ಕೊಂಡೊಯ್ಯುವಂತಹ ಯೋಜನೆಗಳನ್ನು ಸರ್ಕಾರಗಳು ಕೈಗೊಳ್ಳಬೇಕಾಗಿದೆ. ಆದರೆ ಜಾಗತೀಕರಣದ ಸುಳಿಯಲ್ಲಿ ಸಿಲುಕಿರುವ ಸರ್ಕಾರಗಳು, ರಾಜಕೀಯ ಪಕ್ಷಗಳು ಈ ನಿಟ್ಟಿನಲ್ಲಿ ಯಾವುದೇ ಕ್ರಾಂತಿಕಾರಿ ಬದಲಾವಣೆಗಳನ್ನು ತರಲು ಸಿದ್ಧರಿಲ್ಲ. ಬದಲಾಗಿ ಶಾಲಾ ಮಕ್ಕಳಿಗೆ ಉಚಿತ ಊಟ ನೀಡುವ ಕಾರ್ಯಕ್ರಮವನ್ನೇ ಮಹಾಕ್ರಾಂತಿ ಎಂಬಂತೆ ವರ್ತಿಸುತ್ತಿವೆ. ಕರ್ನಾಟಕ ಸರ್ಕಾರದ ಅಕ್ಷರ ದಾಸೋಹ ಬಿಸಿ ಊಟ ಕಾರ್ಯಕ್ರಮವನ್ನು ಈ ದೃಷ್ಟಿಯಿಂದ ವಿಶ್ಲೇಷಿಸಬೇಕಾಗಿದೆ. ಆರಂಭದ ದಿನದಿಂದಲೇ ವಿವಾದಾಸ್ಪದವಾಗಿರುವ ಕೃಷ್ಣ ಸರ್ಕಾರದ ಅಕ್ಷರ ದಾಸೋಹ ಕಾರ್ಯಕ್ರಮವು ಒಂದು ಸ್ವಾಗತಾರ್ಹ ಕ್ರಮವಾದರೂ, ಸರ್ಕಾರದ ಈ ಯೋಜನೆಯ ಹಿಂದಿರುವ ಉದ್ದೇಶವನ್ನು ವಸ್ತುನಿಷ್ಠವಾಗಿ ನೋಡಲೇಬೇಕಾಗುತ್ತದೆ.

ಬಹುತೇಕ ಬಡಮಕ್ಕಳು ಎರಡು ಹೊತ್ತಿನ ಕೂಳಿಲ್ಲದೆ, ಶಾಲೆಗೆ ಬರುವುದನ್ನು ನಿಲ್ಲಿಸುತ್ತಾರೆಂಬ ಅಂಶ ಒಪ್ಪಲೇಬೇಕಾದ ಕಟು ಸತ್ಯ. ಹಾಗಾಗಿ ಶಾಲೆಯಲ್ಲಿ ಒಂದು ಹೊತ್ತಾದರೂ ಉಚಿತವಾಗಿ ಊಟ ನೀಡುವುದಾದರೆ ಲಕ್ಷಾಂತರ ಮಕ್ಕಳು ಶಾಲೆಗೆ ಬರಲಾರಂಭಿಸುತ್ತಾರೆ. ಪ್ರಸ್ತುತ ಅಕ್ಷರ ದಾಸೋಹ ಕಾರ್ಯಕ್ರಮದಲ್ಲೂ ಈ ಅಂಶವನ್ನು ಸ್ಪಷ್ಟವಾಗಿ ಗುರುತಿಸಬಹುದು. ಅಕ್ಷರ ದಾಸೋಹ ಅನುಷ್ಠಾನಗೊಂಡಮೇಲೆ ಶಾಲೆಗಳಲ್ಲಿ ಹಾಜರಾತಿ ಹೆಚ್ಚಾಗಿದೆ ಎಂದು ಶಿಕ್ಷಣ ಮಂತ್ರಿಗಳು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಆದರೆ ಆಳುವ ವರ್ಗಗಳಿಗೆ ಈ ವಿಚಾರ ನಾಚಿಕೆಗೇಡಿನ ಅಂಶವಾಗಿರಬೇಕು. ಉಚಿತ ಊಟ ನೀಡುತ್ತಾರೆಂದು ಹೆಚ್ಚು ಮಕ್ಕಳು ಶಾಲೆಗೆ ಬರಲಾರಂಭಿಸಿದಲ್ಲಿ ಅಷ್ಟು ಮಕ್ಕಳಿಗೆ ಅವಶ್ಯವಾದ ಕೂಳು ನೀಡಲು ಸರ್ಕಾರ ವಿಫಲವಾಗಿದೆ ಎಂದರ್ಥವಲ್ಲವೇ ? ಸಮಾಜವಾದ - ಸಮತಾವಾದ - ಸಾಮಾಜಿಕ ನ್ಯಾಯ - ಪ್ರಜಾತಂತ್ರ – ಎಂಬ ಪದ ಪುಂಜಗಳನ್ನು ಧಾರಾಳವಾಗಿ ಉಪಯೋಗಿಸುವ ಆಳುವ ವರ್ಗಗಳು ತಾವು ಪ್ರಮಾಣಿಸುವ ಸಂವಿಧಾನವನ್ನೇ ಉಲ್ಲಂಘಿಸುತ್ತಿರುವುದು ಈ ಎರಡು ವಿದ್ಯಮಾನಗಳಲ್ಲಿ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಸಾರ್ವತ್ರಿಕ ಶಿಕ್ಷಣ, ಬಡತನ ನಿರ್ಮೂಲನೆ, ಎರಡೂ ಕ್ಷೇತ್ರಗಳಲ್ಲಿ ಸರ್ಕಾರ ವಿಫಲವಾಗಿರುವುದು, ನಮ್ಮ ರಾಜಕಾರಣಿಗಳ ಬೇಜವಾಬ್ದಾರಿತನಕ್ಕೆ ಉತ್ತಮ ನಿದರ್ಶನ. ಈ ದೃಷ್ಟಿಯಿಂದ ನೋಡಿದರೆ ಕರ್ನಾಟಕ ಸರ್ಕಾರದ ಅಕ್ಷರ ದಾಸೋಹ ಕಾರ್ಯಕ್ರಮವನ್ನು ಮೂರು ಮಜಲುಗಳಲ್ಲಿ ವಿಶ್ಲೇಷಿಸಬಹುದು.

ಮೊದಲನೆಯದಾಗಿ ಅಕ್ಷರ ದಾಸೋಹ ಕಾರ್ಯಕ್ರಮದ ಹಿಂದಿರುವ ಕೃಷ್ಣ ಸರ್ಕಾರದ ಉದ್ದೇಶಗಳನ್ನು ಒರೆಹಚ್ಚಿ ನೋಡಬೇಕಾಗುತ್ತದೆ. ತನ್ನ ನಾಲ್ಕು ವರ್ಷದ ಆಳ್ವಿಕೆಯಲ್ಲಿ ಕೃಷ್ಣ ಸರ್ಕಾರದ ಸಾಧನೆ ಹೇಳಿಕೊಳ್ಳುವಂತಹುದಲ್ಲ. ಯಾವುದೇ ಕ್ಷೇತ್ರದಲ್ಲೂ ಸರ್ಕಾರದ ಸಾಧನೆ ಉತ್ತಮವಾಗಿಲ್ಲ. ಮಾಹಿತಿ ತಂತ್ರಜ್ಞಾನದಲ್ಲಿ ಆಂಧ್ರದ ಸರ್ಕಾರದೊಡನೆ ಪೈಪೋಟಿ ನಡೆಸುವ ಆತುರದಲ್ಲಿ, ಬೆಂಗಳೂರನ್ನು ಸಿಂಗಪುರ ಮಾಡುವ ತರಾತುರಿಯಲ್ಲಿ ಕಾಂಗ್ರೆಸ್ ಸರ್ಕಾರವು ಎಲ್ಲಾ ಜನೋಪಯೋಗಿ ಜನಪರ ಕಾರ್ಯಕ್ರಮಗಳಿಗೂ ತಿಲಾಂಜಲಿ ನೀಡಿದೆ. ಬರಗಾಲ, ನೀರಿನ ವಿಚಾರ, ನುಸಿರೋಗ, ಬೆಳೆ ನಷ್ಟ, ರೈತರ ಆತ್ಮಹತ್ಯೆ, ರೋಗಗ್ರಸ್ತ ಕೈಗಾರಿಕೆಗಳು, ಹೀಗೆ ಹತ್ತು ಹಲವಾರು ಸಮಸ್ಯೆಗಳು ಜನಸಾಮಾನ್ಯರನ್ನು ಕಾಡುತ್ತಿದ್ದರೂ ಕೃಷ್ಣ ಸರ್ಕಾರ ಬಹುರಾಷ್ಟ್ರೀಯ ಕಂಪನಿಗಳಿಗೆ ಪರಾಕ್ ಹೇಳುತ್ತಾ ಮಾಹಿತಿ ತಂತ್ರಜ್ಞಾನದಲ್ಲಿಯೇ ತಲ್ಲೀನವಾಗಿದ್ದು ಈಗ ಮುಂಬರುವ ಚುನಾವಣಾ ಕಾವು ತಾಗಿದ ಕೂಡಲೇ ಪುನಃ ಜನಪರ ಯೋಜನೆಗಳ ನಾಟಕ ಆರಂಭಿಸಿದೆ. ಒಂದೆಡೆ ೨೦೦೪ರ ಚುನಾವಣೆ, ಇನ್ನೊಂದೆಡೆ ವಿಜಯ

**ನಮ್ಮ ಸಂವಿಧಾನದಲ್ಲಿ ಎದ್ದು ಕಾಣುವಂತಹ ಅಪ್ರತಿಮ ಅಂಶವೆಂದರೆ ಸಾಮಾಜಿಕ ನ್ಯಾಯ, ಸಮಾನತೆ ಹಾಗೂ ಶಿಕ್ಷಣಕ್ಕೆ ನೀಡಿರುವ ಮಹತ್ವ ಎಂದು ಹೇಳಬಹುದು. ಹದಿನಾಲ್ಕು ವರ್ಷದವರೆಗಿನ ಮಕ್ಕಳಿಗೆ ಉಚಿತವಾದ ಶಿಕ್ಷಣ ವೆಚ್ಚ ನೀಡುವುದು ಪ್ರಭುತ್ವದ ಮಹತ್ತರವಾದ ಜವಾಬ್ದಾರಿಯೆಂದು ಸಂವಿಧಾನದಲ್ಲಿ ಹೇಳಲಾಗಿದೆ. ಶಿಕ್ಷಣ ಕ್ಷೇತ್ರದಲ್ಲಿ ಕ್ರಾಂತಿಕಾರಿ ಸುಧಾರಣೆಗಳನ್ನು ತಂದು, ಸರ್ಕಾರಿ ಶಾಲೆಗಳ ಗುಣಮಟ್ಟ ಹೆಚ್ಚಿಸಿ, ಶಿಕ್ಷಣವು ಎಲ್ಲ ವರ್ಗಗಳ ಜನರ ಕೈಗೆಟುಕುವ ಹಾಗೆ ಮಾಡುವುದು ಇಂದಿನ ಸರ್ಕಾರಗಳ ಮುಖ್ಯ ಕರ್ತವ್ಯವಾಗಬೇಕಾಗಿದೆ. ಬಡಮಕ್ಕಳನ್ನು, ಊಳಿಗಮಾನ್ಯ ವ್ಯವಸ್ಥೆಗೆ ಸಿಲುಕಿದ ಹಸುಳೆಗಳನ್ನು, ಶಿಕ್ಷಣದತ್ತ ಕೊಂಡೊಯ್ಯುವಂತಹ ಯೋಜನೆಗಳನ್ನು ಸರ್ಕಾರಗಳು ಕೈಗೊಳ್ಳಬೇಕಾಗಿದೆ. ಆದರೆ ಜಾಗತೀಕರಣದ ಸುಳಿಯಲ್ಲಿ ಸಿಲುಕಿರುವ ಸರ್ಕಾರಗಳು, ರಾಜಕೀಯ ಪಕ್ಷಗಳು ಈ ನಿಟ್ಟಿನಲ್ಲಿ ಯಾವುದೇ ಕ್ರಾಂತಿಕಾರಿ ಬದಲಾವಣೆಗಳನ್ನು ತರಲು ಸಿದ್ಧರಿಲ್ಲ. ಬದಲಾಗಿ ಶಾಲಾ ಮಕ್ಕಳಿಗೆ ಉಚಿತ ಊಟ ನೀಡುವ ಕಾರ್ಯಕ್ರಮವನ್ನೇ ಮಹಾಕ್ರಾಂತಿ ಎಂಬಂತೆ ವರ್ತಿಸುತ್ತಿವೆ.**



ಸಂಕೇಶ್ವರರ ಕನ್ನಡನಾಡು ಉದಯ, ಕೃಷ್ಣರ ಆಪ್ತರಾದ ಮಲ್ಯರಿಂದ ವಿಶ್ವಾಸದ್ರೋಹ, ನಾಗಪ್ಪ ಪ್ರಕರಣದಿಂದ ಸರ್ಕಾರಕ್ಕೆ ದೂರವಾದ ಲಿಂಗಾಯತ ಮಠಗಳು, ಭಾಜಪ ಅಧ್ಯಕ್ಷರಾಗಿ ಅನಂತಕುಮಾರ್ ನೇಮಕ, ಈ ಎಲ್ಲಾ ಅಂಶಗಳು ಕೃಷ್ಣ ಸರ್ಕಾರದ ನಿದ್ದೆಗೆಡಿಸಿರಬೇಕು. ಇಂತಹ ಪರಿಸ್ಥಿತಿಯಲ್ಲಿ ಯಾವುದಾದರೊಂದು ಜನಪರವಾದ ಕಾರ್ಯಕ್ರಮ ಕೈಗೊಳ್ಳದಿದ್ದರೆ ಮುಂದಿನ ಚುನಾವಣೆಯಲ್ಲಿ ಜನರನ್ನೆದುರಿಸಲೂ ಕಾಂಗ್ರೆಸ್ ಪಕ್ಷಕ್ಕೆ ಕಷ್ಟವಾಗುತ್ತಿತ್ತು. ಈ ರಾಜಕೀಯ ದೃಷ್ಟಿಯಿಂದಲೇ ಕರ್ನಾಟಕ ಸರ್ಕಾರ ಬಿಸಿಯೂಟ ಕಾರ್ಯಕ್ರಮ ಹಮ್ಮಿಕೊಂಡಿರುವುದು ಸ್ಪಷ್ಟವಾಗುತ್ತದೆ. ಬಡಮಕ್ಕಳ ದೃಷ್ಟಿಯಿಂದ ಸರ್ಕಾರದ ಈ ಕ್ರಮ ಸ್ವಾಗತಾರ್ಹವೆನಿಸಿದರೂ, ನಾಲ್ಕು ವರ್ಷಗಳ ಆಡಳಿತಾವಧಿಯಲ್ಲಿ ಯಾವುದೇ ಜನಪರ ಕಾರ್ಯಕ್ರಮಗಳನ್ನು ಕೈಗೊಳ್ಳದ ಸರ್ಕಾರ ತನ್ನ ಅಕ್ಷರ ದಾಸೋಹವನ್ನೇ ಒಂದು ಮಹಾನ್ ಕ್ರಾಂತಿಕಾರಿ ಕ್ರಮ ಎಂದು ಬೀಗುತ್ತಿರುವುದು ಹಾಸ್ಯಾಸ್ಪದ, ಅಷ್ಟೇ ವಿಷಾದನೀಯ. ವಿರೋಧ ಪಕ್ಷಗಳು ತಮ್ಮ ರಾಜಕೀಯ ಸೀಮಾರೇಖೆಗಳನ್ನು ದಾಟಿ ಸರ್ಕಾರದ ಈ ಕ್ರಮವನ್ನು ಸ್ವಾಗತಿಸಬಹುದಿತ್ತು. ಆದರೆ ಚುನಾವಣಾ ದೃಷ್ಟಿಯಿಂದಲೇ ಎಲ್ಲಾ ವಿದ್ಯಮಾನಗಳನ್ನು ವಿಶ್ಲೇಷಿಸುವ ರಾಜಕೀಯ ಪಕ್ಷಗಳು ಅಷ್ಟು ವಿಶಾಲ ಮನೋಭಾವ ಹೊಂದಿರುವುದು ಅಸಾಧ್ಯವೇ ಸರಿ.

ಎರಡನೆಯದಾಗಿ, ಸರ್ಕಾರದ ಅಕ್ಷರ ದಾಸೋಹ ಕಾರ್ಯಕ್ರಮವು ಶಿಕ್ಷಣ ಕ್ಷೇತ್ರದಲ್ಲಿ ಉಂಟುಮಾಡಿರುವ ಗೊಂದಲ ಅಷ್ಟಿಷ್ಟಲ್ಲ. ಕಾರ್ಯಕ್ರಮ ಅನುಷ್ಠಾನಗೊಂಡ ಪ್ರಥಮ ದಿನವೇ ನೂರಾರು ಮಕ್ಕಳು ಅಸ್ವಸ್ಥರಾಗಿದ್ದು ಸರ್ಕಾರದ ಬೇಜವಾಬ್ದಾರಿತನಕ್ಕೆ ನಿದರ್ಶನವೆಂದು ಹೇಳಬಹುದು. ಅಲ್ಲದೆ ಯಾವುದೇ ಪೂರ್ವಭಾವಿ ಸಿದ್ಧತೆ ಇಲ್ಲದೆ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಿದ್ದು ಸ್ಪಷ್ಟವಾಗಿ ಗೋಚರಿಸಿತ್ತು. ಸರ್ಕಾರದ ಕಾರಣ, ನೆಪಗಳೇನೇ ಇದ್ದರೂ ಮಕ್ಕಳು ಕಷ್ಟ ಅನುಭವಿಸಿದ್ದಂತೂ ವಿಷಾದಕರ. ಸಮುದಾಯದ ಹಿತಾಸಕ್ತಿಯ ದೃಷ್ಟಿಯಿಂದ, ಜನಪರ ಕಾಳಜಿಯಿಂದ, ಕೈಗೊಳ್ಳಲಾದ ಈ ಕಾರ್ಯಕ್ರಮದಲ್ಲಿ ಸಮುದಾಯಕ್ಕೂ ಒಂದು ಪಾತ್ರ ನೀಡುವುದು ಅವಶ್ಯವಾಗಿತ್ತು. ತರಾತುರಿಯಲ್ಲಿ ಅನುಷ್ಠಾನಗೊಳಿಸುವ ಬದಲಾಗಿ ಗ್ರಾಮ ಪಂಚಾಯಿತಿಗಳ ಮೂಲಕ, ಪ್ರತಿ ಗ್ರಾಮ ಪಟ್ಟಣಗಳಲ್ಲೂ ಶಿಕ್ಷಕರು, ಊರ ಹಿರಿಯರು, ನಾಯಕರುಗಳನ್ನೊಳಗೊಂಡ ಅಕ್ಷರ ದಾಸೋಹ ಸಮಿತಿಗಳನ್ನು ರಚಿಸಿ ಪ್ರತಿ ಗ್ರಾಮದಲ್ಲೂ ನಿರುದ್ಯೋಗ ಯುವಕ ಯುವತಿಯರಿಗೆ ಈ ಕಾರ್ಯಕ್ರಮ ನಡೆಸುವ ಯೋಜನೆ ರೂಪಿಸಿದ್ದಲ್ಲಿ ನೂರಾರು ಮಕ್ಕಳು ಅಸ್ವಸ್ಥರಾಗುತ್ತಿರಲಿಲ್ಲ. ಶಾಲಾ ಶಿಕ್ಷಕರಿಗೇ ಈ ಜವಾಬ್ದಾರಿ ನೀಡುವ ಬದಲು, ಗ್ರಾಮದ ನಿರುದ್ಯೋಗಿಗಳಿಗೆ ನೀಡಬಹುದಿತ್ತು. ಇಂದಿಗೂ ಸಹ ಶಿಕ್ಷಕ-ಶಿಕ್ಷಕಿಯರು ಪಾಠ ಮಾಡುವುದಕ್ಕಿಂತಲೂ ಹೆಚ್ಚಾಗಿ ಅಡುಗೆ ಮಾಡುವುದರಲ್ಲಿಯೇ ಹೆಚ್ಚು ಕಾಲ ಹರಣ ಮಾಡುತ್ತಿರುವುದು ಕಂಡುಬರುತ್ತಿದೆ. ಶಿಕ್ಷಕರಿಗೂ ಇದು ನುಂಗಲಾರದ ತುತ್ತಾಗಿದೆ. ಮಕ್ಕಳಿಗೆ ಪಾಠ ಪ್ರವಚನ ನಡೆಯದಿದ್ದರೂ ಬಿಸಿ ಊಟ ಕಡ್ಡಾಯವಾಗಿ ನಡೆಯಬೇಕಾಗಿದೆ. ಏಕೆಂದರೆ ಅದು ಸರ್ಕಾರದ ಪ್ರತಿಷ್ಠೆಯ ಪ್ರಶ್ನೆ.

ಈ ದೃಷ್ಟಿಯಿಂದ ನೋಡಿದಾಗ ಕೃಷ್ಣ ಸರ್ಕಾರದ ಬೊಗಳೆ ಸ್ಪಷ್ಟವಾಗುತ್ತದೆ. ಶಿಕ್ಷಣ ಇಲಾಖೆಯ ದಾಖಲೆಗಳನ್ನೇ ನೋಡಿದರೆ ಅನೇಕ ಸರ್ಕಾರಿ ಶಾಲೆಗಳಲ್ಲಿ ಕಪ್ಪುಹಲಗೆಗಳಿಲ್ಲ, ಹಲವೆಡೆ ಶಾಲಾ ಕೊಠಡಿಗಳೇ ಇಲ್ಲ, ಇನ್ನೂ ಕೆಲವೆಡೆ ಶಿಕ್ಷಕರೇ ಇರುವುದಿಲ್ಲ. ಈ ಪರಿಸ್ಥಿತಿಯನ್ನು ಸುಧಾರಿಸುವ ನಿಟ್ಟಿನಲ್ಲಿ ಸರ್ಕಾರ ಯಾವುದೇ ಕ್ರಮ ಕೈಗೊಂಡಿಲ್ಲ. ಸರ್ಕಾರಿ ಶಾಲೆಗಳಲ್ಲಿ ಶಿಕ್ಷಣದ ಗುಣಮಟ್ಟ ಹೆಚ್ಚಿಸುವ ಬಗ್ಗೆ ಸರ್ಕಾರ ಕಾಳಜಿ ವಹಿಸಿಲ್ಲ. ಪಠ್ಯಪುಸ್ತಕಗಳ ವಿತರಣೆಯಲ್ಲಿ ಪ್ರತಿವರ್ಷ ಉಂಟಾಗುತ್ತಿರುವ ಅವ್ಯವಸ್ಥೆಯನ್ನು ಸುಧಾರಿಸಲು ಯಾವುದೇ ಕ್ರಮ ಕೈಗೊಂಡಿಲ್ಲ. ಎಲ್ಲಾ ಶಾಲೆಗಳಲ್ಲಿ ಗ್ರಾಮ ಪಂಚಾಯಿತಿಯನ್ನು ಒಳಗೊಂಡಂತೆ ಶಾಲಾ ಅಭಿವೃದ್ಧಿ ನಿರ್ವಹಣಾ ಸಮಿತಿಯನ್ನು ರಚಿಸಿದ್ದರೂ ಶಾಲಾ ಮಕ್ಕಳ ಹಾಜರಾತಿ ಹೆಚ್ಚಿಸುವ ಯಾವುದೇ ಕ್ರಮವನ್ನು ಸರ್ಕಾರ ಕೈಗೊಂಡಿಲ್ಲ. ವಾರ್ಷಿಕ ಬಜೆಟ್‌ನಲ್ಲಿಯೂ ಸಹ ಕೃಷ್ಣ ಸರ್ಕಾರ ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಿಲ್ಲ. ಈ ಎಲ್ಲಾ ಕ್ರಮಗಳನ್ನು ಕೈಗೊಳ್ಳುವ ಬದಲು ಕೃಷ್ಣ ಸರ್ಕಾರವು ಅಕ್ಷರ ದಾಸೋಹದಿಂದಲೇ ಶಿಕ್ಷಣ ಕ್ರಾಂತಿ ಸಾಧಿಸಲು ಹೊರಟಿರುವುದು ವಿಷಾದನೀಯ. ಇದರಿಂದ ಭವಿಷ್ಯದಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಅಷ್ಟೇನೂ ಪ್ರಯೋಜನವಾಗಲಾರದು. ಅಕ್ಷರ ದಾಸೋಹ ಸ್ವಾಗತಾರ್ಹ ಕ್ರಮವಾದರೂ, ಶಿಕ್ಷಣ ಕ್ಷೇತ್ರದ ಅಭಿವೃದ್ಧಿಗೆ ಅನ್ಯ ಮಾರ್ಗಗಳನ್ನು ಅನುಸರಿಸಿ, ಈ ಕಾರ್ಯಕ್ರಮ ಹಮ್ಮಿಕೊಂಡಿದ್ದಲ್ಲಿ ಕಾಂಗ್ರೆಸ್ ಪಕ್ಷದ, ಕೃಷ್ಣ ಸರ್ಕಾರದ ವರ್ಚಸ್ಸು ಇನ್ನೂ ಹೆಚ್ಚಾಗುತ್ತಿತ್ತು. ಈ ದೃಷ್ಟಿಕೋನದಿಂದ ಕೃಷ್ಣ ಸರ್ಕಾರದ ಕ್ರಮವನ್ನು ಖಂಡಿಸಬಹುದೇ ಹೊರತು ಕೇವಲ ವಿರೋಧ ವ್ಯಕ್ತಪಡಿಸಲೆಂದೇ ಖಂಡಿಸುವುದು ತಪ್ಪಾಗುತ್ತದೆ.

ಮೂರನೆಯದಾಗಿ, ಅಕ್ಷರ ದಾಸೋಹ ಕಾರ್ಯಕ್ರಮದ ಪ್ರಾರಂಭದಲ್ಲಿ ಕೆಲವು ಮಕ್ಕಳು ಅಸ್ವಸ್ಥರಾದರೂ ಈ ವಿಚಾರದಲ್ಲಿ ನಮ್ಮ ಅಸ್ವಸ್ಥ ಸಮಾಜದ ಜಾತೀಯತೆಯ ಕರಾಳ ಮುಖ ಪರಿಚಯವಾಗಿರುವುದೂ ಒಂದು ಗಮನಾರ್ಹ ಅಂಶ. ಅಸ್ವಸ್ಥರಾದ ಮಕ್ಕಳು ಕೆಲದಿನಗಳಲ್ಲೇ ಚೇತರಿಸಿಕೊಂಡರು. ಆದರೆ ಜಾತೀಯತೆಯ ರೋಗದಿಂದ ಇನ್ನೂ ಮುಕ್ತರಾಗದ ಹಿಂದೂ ಸಮಾಜ ಚೇತರಿಸಿಕೊಳ್ಳಲು ಇನ್ನೂ ದಶಕಗಳೇ ಬೇಕಾಗುವುದು ಎನಿಸುತ್ತದೆ. ದಲಿತರು ಮಾಡಿದ ಅಡುಗೆಯನ್ನು ಉಣ್ಣಲು ನಿರಾಕರಿಸಿದ ಮೇಲ್ಜಾತಿಯವರ ನಿಲುವು ಖಂಡನಾರ್ಹ. ಆದರೂ ಸರ್ಕಾರ ಅಂಥವರ ವಿರುದ್ಧ ಯಾವುದೇ ಕ್ರಮ ಕೈಗೊಳ್ಳದಿರುವುದು ವಿಷಾದಕರ ಅಂಶ. ಮೇಲ್ನೋಟಕ್ಕೆ ಜಾತ್ಯತೀತತೆಯನ್ನು ಮೆರೆಯುವ ಸಮಾಜವನ್ನು ಜಾತೀಯತೆಯ, ಅಸ್ಪೃಶ್ಯತೆಯ, ಈ ರೋಗ ಕ್ಯಾನ್ಸರ್ ರೋಗದಂತೆ ಒಳಗಿನಿಂದಲೇ ತಿನ್ನುತ್ತಿರುವುದು ವಿಷಾದಕರ ಸಂಗತಿ. ಎಲ್ಲಾ ಕ್ಷೇತ್ರಗಳಲ್ಲೂ ಅಪಾರ ಸಾಧನೆಗಳಿಸಿರುವ ಭಾರತೀಯ ಸಮಾಜದಲ್ಲಿ ಈ ಅನಿಷ್ಟ ಪದ್ಧತಿ, ಈ ಪದ್ಧತಿಯನ್ನು ಇಂದಿಗೂ ಜೀವಂತವಾಗಿರಿಸುವ ಪಾತಕಿ ಮನೋಭಾವ ನಮ್ಮ ಜನರಲ್ಲಿ ಇಂದಿಗೂ ಇರುವುದು ಖೇದದ ಸಂಗತಿಯಲ್ಲವೇ? ಈ ಮನೋಭಾವವನ್ನು ಹೋಗಲಾಡಿಸಲು ಯಾವುದೇ ಕಾನೂನು, ಸರ್ಕಾರಗಳಿಂದ ಸಾಧ್ಯವಿಲ್ಲವಾದರೂ ಇಂತಹ ಸಂವಿಧಾನ ವಿರೋಧಿ ಕೃತ್ಯ ಎಸಗುವವರನ್ನು ಶಿಕ್ಷಿಸುವುದು ಸರ್ಕಾರದ ಕರ್ತವ್ಯವಾಗುತ್ತದೆ. ಈ ನಿಟ್ಟಿನಲ್ಲಿ ಕೃಷ್ಣ ಸರ್ಕಾರ ವಿಫಲವಾಗಿದೆ. ಹಿಂದೂ ಏಕತೆಯ ಬಗ್ಗೆ, ಭಾರತೀಯತೆಯ ಬಗ್ಗೆ ಬೊಬ್ಬೆ ಹೊಡೆಯುವ ಸಂಘಪರಿವಾರದವರು ಈ ಬೆಳವಣಿಗೆಗಳ ಬಗ್ಗೆ ಯಾವುದೇ ಪ್ರತಿಕ್ರಿಯೆ ವ್ಯಕ್ತಪಡಿಸದೇ ಇರುವುದು ಅವರ ಬ್ರಾಹ್ಮಣಶಾಹಿಯ ಸ್ವರೂಪಕ್ಕೆ ಕನ್ನಡಿ ಹಿಡಿದಂತಿದೆ. ಸಂಘಪರಿವಾರದ ಹಿಂದೂ ಸಮಾಜದಲ್ಲಿ, ಹಿಂದೂ ಸಾಮ್ರಾಜ್ಯದಲ್ಲಿ, ದಲಿತರ ಸ್ಥಾನ ಏನೆಂಬುದನ್ನು ಈ ಪ್ರಕರಣಗಳು ಸೂಕ್ಷ್ಮವಾಗಿ ಪ್ರತಿಬಿಂಬಿಸಿವೆ. ಹಿಂದೂ ಏಕತೆಯ ಹೆಸರಿನಲ್ಲಿ ಸಂಘಪರಿವಾರದ ಬಲೆಯಲ್ಲಿ ಸಿಲುಕಿರುವ ದಲಿತರು ಈಗಲಾದರೂ ಹಿಂದೂ ಸಮಾಜದ ನೈಜ ಸ್ವರೂಪವನ್ನು ಅರಿಯುವುದು ಒಳಿತು. ಏನೇ ಆಗಲಿ ಆಂಗ್ಲ ಭಾಷೆಯಲ್ಲಿ ಒಂದು ಗಾದೆ ಹೇಳುವಂತೆ ''ಸ್ನಾನದ ನೀರಿನೊಡನೆ ಮಗುವನ್ನು ಬಿಸಾಡುವುದು ಮೂರ್ಖತನವಾಗುತ್ತದೆ.'' ಈ ಎಲ್ಲಾ ನ್ಯೂನತೆಗಳ ನಡುವೆಯೂ ಅಕ್ಷರ ದಾಸೋಹ ಕಾರ್ಯಕ್ರಮ ಸ್ವಾಗತಾರ್ಹವೆಂಬ ಅಂಶವನ್ನು ಒಪ್ಪಲೇಬೇಕಾಗಿರುತ್ತದೆ. ಈ ಕಾರ್ಯಕ್ರಮ ಶಿಕ್ಷಣ ಕ್ಷೇತ್ರದಲ್ಲಿ ಕ್ರಾಂತಿಕಾರಿ ಬದಲಾವಣೆಗಳನ್ನು ತರದಿದ್ದರೂ ಒಪ್ಪೊತ್ತಿನ ಕೂಳಿಲ್ಲದ ಬಡಜನತೆಗೆ ಶಿಕ್ಷಣ ಕಲಿಯಲು ಈ ಕಾರ್ಯಕ್ರಮ ಸಹಾಯಕವಾಗಬಹುದು. ಈ ದೃಷ್ಟಿಯಿಂದ ಅಕ್ಷರ ದಾಸೋಹ ಸ್ವಾಗತಾರ್ಹ ಕ್ರಮವೆ. ಆದರೆ ಕೇವಲ ರಾಜಕೀಯ ದೃಷ್ಟಿಯಿಂದ, ಚುನಾವಣಾ ದೃಷ್ಟಿಯಿಂದ ಈ ಕಾರ್ಯಕ್ರಮ ಹಮ್ಮಿಕೊಂಡಿರುವ ಕೃಷ್ಣ ಸರ್ಕಾರದಿಂದ ಶಿಕ್ಷಣ ಕ್ಷೇತ್ರವು ಹೆಚ್ಚೇನನ್ನೂ ಬಯಸಲಾಗುವುದಿಲ್ಲ. ಭವಿಷ್ಯದಲ್ಲಿ ಈ ಬಿಸಿ ಊಟ ಸರ್ಕಾರಕ್ಕೆ ಬಿಸಿ ತುಪ್ಪವಾದರೂ ಹೆಚ್ಚೇನಿಲ್ಲ.

ನಾ. ದಿವಾಕರ
ಕೆನರಾ ಬ್ಯಾಂಕ್, ಬೆಳ್ಳೂರು ಅಂಚೆ
ಮೈಸೂರು-ತುಮಕೂರು ರಸ್ತೆ, ಮಂಡ್ಯ ಜಿಲ್ಲೆ - ೫೭೧ ೪೧೮

## ಮ್ಯಾಚ್ ಫಿಕ್ಸಿಂಗ್

ಈ ರಾಜಕೀಯ ಪಕ್ಷಗಳು
ತೆರೆಮರೆಯಲ್ಲಿ
ಮಾಡಿಕೊಂಡಿರುತ್ತವೆ
ಮ್ಯಾಚ್ ಫಿಕ್ಸಿಂಗ್ !

ತೋರಿಕೆಗಾಗಿ
ಮಾಡುತ್ತವೆ
ಆಗಾಗ
ಪ್ರಾಕ್ಸಿ
ಫೈಟಿಂಗ್ !!

ಶಶಿಕಾಂತ ಯಡಹಳ್ಳಿ
ಬೆಂಗಳೂರು

ತೀರಾ ಸರಳವಾದ ಕೂಡುವ ಕಳೆಯುವ ಲೆಕ್ಕಗಳನ್ನು ಮಾಡಲು ಕೂಡ ತಮ್ಮಿಂದಾಗುವುದಿಲ್ಲ ಎನ್ನುವ, ಭೌತವಿಜ್ಞಾನ ಅಥವಾ ರಸಾಯನಶಾಸ್ತ್ರದ ಅತ್ಯಂತ ಸರಳವಾದ ವಿಷಯಗಳನ್ನು ಕೂಡ ಅರ್ಥಮಾಡಿಕೊಳ್ಳಲಾಗದ, ಸಾಹಿತಿಗಳು ಮತ್ತು ಸಾಹಿತ್ಯದ ವಿದ್ಯಾರ್ಥಿಗಳು ತೀರಾ ಸಾಮಾನ್ಯ. ಆದರೆ ವಿಜ್ಞಾನಿಗಳಾಗಿರುವವರಲ್ಲಿ ಹೆಚ್ಚಿನವರಲ್ಲಿ ಸಾಹಿತ್ಯಾಸಕ್ತಿಯಿರುವುದನ್ನು ನಾವು ಕಾಣಬಹುದು. ಹಾಗೆಯೇ ಸಾಹಿತಿಗಳ ಪೈಕಿ ಎಷ್ಟೋ ಮಂದಿ ವಿಜ್ಞಾನ ಓದಿದವರಿದ್ದಾರೆ. ಹಾಗಿರುವಾಗ, ಕೇವಲ ಸಾಹಿತ್ಯವನ್ನು ಅಕಾಡೆಮಿಕ್ ಆಗಿ ಅಧ್ಯಯನ ಮಾಡಿದವರು ಸಾಹಿತ್ಯವು ವಿಜ್ಞಾನ ಸಾಹಿತ್ಯದಿಂದ ಗಾವುದು ದೂರ ಅಥವಾ ಸಾಹಿತ್ಯ ಎನ್ನುವುದು ಒಂದು ಸೃಜನಶೀಲ ಕ್ರಿಯೆಯಾಗಿರುವುದರಿಂದ ವಿಜ್ಞಾನಕ್ಕಿಂತ ಶ್ರೇಷ್ಠ ಎಂದು ಭಾವಿಸುವುದು ಎಷ್ಟು ಸಮಂಜಸ? ಒಂದು ದೃಷ್ಟಿಯಿಂದ ವಿಜ್ಞಾನವೂ ಕೂಡ ಒಂದು ಸೃಜನಶೀಲ ಕ್ರಿಯೆಯೇ ಅಲ್ಲವೆ? ಸಾಹಿತ್ಯಿಕ ಸೃಷ್ಟಿಶೀಲ ಮನಸ್ಸಿಗೆ ಮತ್ತು ವೈಜ್ಞಾನಿಕ ಸೃಷ್ಟಿಶೀಲ ಮನಸ್ಸಿಗೆ ಒಂದು ಅವಿನಾಸಂಬಂಧ ಇಲ್ಲವೆ? ನ್ಯೂಟನ್ನನಿಂದ ಐನ್‌ಸ್ಟೈನ್ ತನಕ ಶ್ರೇಷ್ಠ ವಿಜ್ಞಾನಿಗಳು ಬರೆದ ಗ್ರಂಥಗಳನ್ನು ಓದಿದರೆ, ಅವುಗಳಲ್ಲಿ ಬಹಳ ಗ್ರಂಥಗಳು ಸಾಹಿತ್ಯ ಕೃತಿಗಳಂತಿರುವುದನ್ನು ಕಾಣಬಹುದು. ಭೌತವಿಜ್ಞಾನದ ಬಹಳ ಸಿದ್ಧಾಂತಗಳು ಎಷ್ಟು ಸುಂದರವಾಗಿರುತ್ತವೆಯೆಂದರೆ ಅವು ಉತ್ತಮವಾದ ಕವನಗಳಂತಿರುತ್ತವೆ. ಐನ್‌ಸ್ಟೈನನ ಸಾಪೇಕ್ಷ ಸಿದ್ಧಾಂತವನ್ನು ಕವನದ ರೀತಿಯಲ್ಲಿ ಬರೆದುಕೊಳ್ಳಲು ಸಾಧ್ಯವಿದೆ. ನ್ಯೂಟನ್ನನ ಗುರುತ್ವಾಕರ್ಷಣಾ ಸಿದ್ಧಾಂತಗಳನ್ನು ಕವನವಾಗಿಸಿ ನೋಡಿದರೆ, ನ್ಯೂಟನ್ ಕವಿಯೇ ಎನಿಸಬಹುದು. ಹಾಗೆಯೇ ಡಾರ್ವಿನ್ನನ ''ಆರಿಜಿನ್ ಆಫ್ ಸ್ಪೀಸೀಸ್'' ಒಂದು ಕಾದಂಬರಿಯಂತೆ ಇದೆ. ಇತ್ತೀಚೆಗಿನ ದಿನಗಳಲ್ಲಿ ಬಂದ ವಿಜ್ಞಾನದ ಕೃತಿಗಳಲ್ಲಿ ಸ್ಟೀಫನ್ ಹಾಕಿನ್ಸ್‌ನ ''ಎ ಬ್ರೀಫ್ ಹಿಸ್ಟರಿ ಆಫ್ ಟೈಮ್'' ಅನ್ನು ಉದಾಹರಿಸಬಹುದು. ವಿಜ್ಞಾನ ವಿದ್ಯಾರ್ಥಿಗಳು , ವಿಜ್ಞಾನೇತರ ವಿದ್ಯಾರ್ಥಿಗಳು ವೆಂದು ಕರೆಯಲು ಸ್ವಲ್ಪ ಅನುಮಾನಿಸುವ ಸಂಭವ ಇದೆ. ವಿಜ್ಞಾನವೆಂದರೆ ಇಷ್ಟೇನೆ? ವಿಜ್ಞಾನ ಎಂಬ ಪದದ ಅರ್ಥವ್ಯಾಪ್ತಿ ಇಷ್ಟೇನೆ? ಇತರ ಅಧ್ಯಯನ ವಿಷಯ ಗಳಾವುವೂ ವಿಜ್ಞಾನ ಅಲ್ಲವೆ? ವಿಜ್ಞಾನ ಅರ್ಥಶಾಸ್ತ್ರದಲ್ಲಿಲ್ಲವೆ? ಇತಿಹಾಸದಲ್ಲಿಲ್ಲವೆ? ವಿಜ್ಞಾನ ಕಲೆಯಲ್ಲಿಲ್ಲವೆ? ಸಾಹಿತ್ಯದಲ್ಲಿಲ್ಲವೆ? ಸಂಗೀತದಲ್ಲಿಲ್ಲವೆ? ಶಿಲ್ಪದಲ್ಲಿಲ್ಲವೆ? ವಿಜ್ಞಾನ ಕೇವಲ ಒಂದು ಸಂಶೋಧನಾ ವಿಷಯವಲ್ಲ, ಅದು ನಮ್ಮ ಬದುಕಿಗೆ, ನಮ್ಮ ಸಮಾಜಕ್ಕೆ ಅನಿವಾರ್ಯವಾದ ಒಂದು ಕ್ರಿಯೆ. ಅದು ಚಿಂತನೆಯಾಗಿರುವ ಹೊತ್ತಿನಲ್ಲಿಯೇ ಕ್ರಿಯೆಯೂ ಆಗಿರುವಂಥ ಒಂದು ಚಟುವಟಿಕೆ ಎಂಬುದನ್ನು ನಮ್ಮ ಶಾಲೆ ಕಾಲೇಜುಗಳಲ್ಲಿ ಅಧ್ಯಯನ ಮಾಡುವವರಿಗೆ ಮತ್ತು ಕಲಿಸುವವರಿಗೆ ತಿಳಿದಿದೆಯೆ? ವಿಜ್ಞಾನವು ಪಠ್ಯ ಪುಸ್ತಕದಿಂದ ಹೊರಗೆ ಬಂದಿದೆಯೆ? ಬಂದಿದ್ದರೆ, ಬದುಕಿಗೆ ಸಂಬಂಧಿಸಿದ ನೂರೊಂದು ಸಂಗತಿಗಳನ್ನು ವೈಜ್ಞಾನಿಕವಾದ ಚಿಂತನೆಗೆ ಗುರಿ ಮಾಡಬೇಕು. ವಿಚಾರರಹಿತವಾಗಿ ಯಾರೂ ಯಾವುದೇ ಸಿದ್ಧಾಂತವನ್ನೂ ಸ್ವೀಕರಿಸಬಾರದು. ಪ್ರತಿಯೊಂದು ನಂಬಿಕೆಯನ್ನೂ ಪ್ರಶ್ನಿಸುವ, ವಿಶ್ಲೇಷಿಸುವ ಧೈರ್ಯ ವಿಜ್ಞಾನದ ಮೂಲಕ ನಮಗೆ ಬರಬೇಕು. ಇದಕ್ಕೆ ಬೇಕಾದ್ದು ಫಿಸಿಕ್ಸ್, ಅಥವಾ ಕೆಮಿಸ್ಟ್ರಿ ಅಲ್ಲ. ಇದಕ್ಕೆ ಬೇಕಾದ್ದು ನಾವು ಕಲಿಯುವುದೆಲ್ಲವನ್ನೂ ವೈಜ್ಞಾನಿಕ ದೃಷ್ಟಿಯಿಂದ ಕಲಿಯುವ ವೈಜ್ಞಾನಿಕ ಮನೋಧರ್ಮ. ಹತ್ತು ಮಂದಿಯ ಅಥವಾ ನೂರು ಮಂದಿಯ ಒಂದು ಸಮುದಾಯದಲ್ಲಿ ಒಬ್ಬ ಹುಡುಗ ವಿಜ್ಞಾನಿ ಅಥವಾ ವಿಜ್ಞಾನ ಪದವೀಧರನಾಗುವ ಮೂಲಕ ಇಡೀ ಸಮುದಾಯದ ಮನಸ್ಸು ವೈಜ್ಞಾನಿಕವಾಗುವುದಿಲ್ಲ. ಒಬ್ಬ ವಿಜ್ಞಾನಿ ನಿಜವಾಗಿಯೂ ವಿಜ್ಞಾನಿಯಾಗಿ ಉಳಿಯ ಬೇಕಾದರೆ, ಸಮುದಾಯ ವೈಜ್ಞಾನಿಕವಾಗಿ ಚಿಂತಿಸುವುದನ್ನು ಕಲಿಯಬೇಕು. ಈ ಪ್ರಕ್ರಿಯೆ ಮಗುವಿಗೆ ಮೂರು ವರ್ಷ ವಯಸ್ಸಾಗುವಾಗಲೇ ಆರಂಭಿಸಬೇಕು! ಹಾಗೆ ಮಾಡದಿರು ವುದರಿಂದಲೇ ನಮ್ಮಲ್ಲಿ ವಿಘ್ನ ನಿವಾರಣೆಗಾಗಿ ಹತ್ತು ಹಲವು ಬಗೆಯ ಪೂಜೆಗಳನ್ನು

# ಸಾಹಿತ್ಯವೆಂದರೆ ಕೇವಲ ಬರೆಹವೆ ಅಥವಾ ವೈಜ್ಞಾನಿಕ ವಿಚಾರಧಾರೆಯೆ?

**ಸಾಹಿತ್ಯ ವಿಜ್ಞಾನವಲ್ಲ. ಆದರೆ ಸಾಹಿತ್ಯದಲ್ಲಿ ವಿಜ್ಞಾನ ಇಲ್ಲವೆ? ಸಾಹಿತ್ಯ ಸೃಷ್ಟಿಯಲ್ಲಿ ವೈಜ್ಞಾನಿಕ ಎನ್ನಬಹುದಾದ ಚಿಂತನೆಗಳು ಮತ್ತು ಪ್ರಯೋಗಗಳು ನಡೆದಿಲ್ಲವೆ? ಸಾಹಿತ್ಯದ ಬೆಳವಣಿಗೆಯ ರೀತಿಯಲ್ಲಿ ವೈಜ್ಞಾನಿಕತೆ ಇಲ್ಲವೆ? ಬಹಳ ಕಾಲದಿಂದ ನಾವು ಕಾವ್ಯ, ನಾಟಕ, ಕಾದಂಬರಿ ಮತ್ತು ಸಣ್ಣ ಕತೆ ಎಂಬ ದಾರಿಗಳಲ್ಲಿ ನಡೆದು ಬಂದಿದ್ದೇವೆ.**

ಕಠಿಣ ವಿಜ್ಞಾನವೆಂದುಕೊಳ್ಳುವಂಥ ಭೌತವಿಜ್ಞಾನವನ್ನು ಕೂಡ ಹೇಗೆ ಮನೋಜ್ಞವಾಗಿ ಎಲ್ಲರನ್ನೂ ಆಕರ್ಷಿಸುವಂತೆ ಬರೆಯಬಹುದು ಎನ್ನುವುದಕ್ಕೆ ಫ್ರಿಟ್ಜೊ ಕಾಪ್ರಾನ ''ತಾವೊ ಆಫ್ ಫಿಸಿಕ್ಸ್'' ಮತ್ತು ''ಡಾನ್ಸಿಂಗ್ ವೂಲಿ ಮಾಸ್ಟರ್ಸ್'' ಎಂಬ ಎರಡು ಕೃತಿಗಳನ್ನು ಓದಬೇಕು. ಮೂರು ಮತ್ತು ನಾಲ್ಕು ಮತ್ತು ಐದು ಒಟ್ಟು ಎಷ್ಟು ಎಂದು ಕೇಳಿದರೆ ಸಾಹಿತಿ ಅಥವಾ ಸಾಹಿತ್ಯ ವಿದ್ಯಾರ್ಥಿ ಮೇಲೆ ಕೆಳಗೆ ನೋಡುತ್ತಾನೆಂದಾದರೆ ಅದೊಂದು ಮೈಂಡ್‌ಸೆಟ್ ಅಲ್ಲದೆ ಬೇರೇನಲ್ಲ. ಪ್ರತಿಭೆಯನ್ನು ಯಾವ ರೀತಿಯಲ್ಲಿ ಬಳಸಿ ಬೆಳೆಸಲಾಯಿತೋ ಅದೇ ಪ್ರತಿಭೆಯೋ ಕೌಶಲವೋ ಆಗುತ್ತದೆ. ಅವಗಣಿತವಾದುದು ಮುರುಟಿ, ಕ್ರಮೇಣ ಇಲ್ಲವಾಗುತ್ತದೆ. ಲಕ್ಷೋಪಲಕ್ಷ ವಿಜ್ಞಾನ, ಕಲಾ ಪದವೀಧರರು ಕಾಲೇಜಿನಿಂದ ಹೊರಬಂದು ತಾವು ಕಲಿತುದಕ್ಕೆ ಸಂಬಂಧವಿಲ್ಲದ ಯಾವ್ಯಾವುದೋ ವೃತ್ತಿಯಲ್ಲಿ ತೊಡಗಿಸಿಕೊಂಡು ಹತ್ತಿಪ್ಪತ್ತು ವರ್ಷಗಳಾದ ಬಳಿಕ ನೌಕರರಾಗಿ ಅಥವಾ ಗೃಹಿಣಿಯರಾಗಿ, ತಾಯಂದಿರಾಗಿ ಹತ್ತಿಪ್ಪತ್ತು ವರ್ಷಗಳಾದ ಬಳಿಕ ಅವರು ಹದಿನೈದು ವರ್ಷ ಓದಿದುದರಲ್ಲಿ ಎಷ್ಟು ಉಳಿದಿರುತ್ತದೆ ಎಂದು ವಿಚಾರಿಸಿ ನೋಡಿದರೆ ಶೇಕಡಾ ತೊಂಬತ್ತು ಆರಿಹೋಗಿರುವುದನ್ನು ಕಾಣಬಹುದು.

**ವಿಜ್ಞಾನದಲ್ಲಿ ಏನು ವಿಜ್ಞಾನ ವಿಚಾರ?**

ವಿಜ್ಞಾನವೆಂದರೆ ಏನು ಎಂದು ವಿದ್ಯಾರ್ಥಿಯನ್ನು ಕೇಳಿದರೆ, ವಿಜ್ಞಾನ ವೆಂದರೆ ಫಿಸಿಕ್ಸ್, ಕೆಮಿಸ್ಟ್ರಿ, ಬಯಾಲಜಿ ಎನ್ನುತ್ತಾರೆ. ಗಣಿತವನ್ನು ವಿಜ್ಞಾನ

**ಕೆ. ಟಿ. ಗಟ್ಟಿ**

ಮಾಡುವ, ತನ್ನ ಔದ್ಯೋಗಿಕ ಉನ್ನತಿಗಾಗಿ ಮತ್ತು ತನ್ನ ಕುಟುಂಬದ ಏಳಿಗೆಗಾಗಿ ಜಪತಪ ಹೋಮ ಹವನಗಳನ್ನು ಮಾಡುವ, ಸಂಶೋಧನೆಗಿಂತ ಹೆಚ್ಚು ಹೊತ್ತನ್ನು ಭಯ ನಿವಾರಣೆಯ ಪೂಜೆಯಲ್ಲಿ ಕಳೆಯುವ, ಮೂಢನಂಬಿಕೆಗಳ ಪರವಾಗಿ ವಕೀಲಿ ನಡೆಸುವ ಪಿಎಚ್.ಡಿ.ಗಳನ್ನು, ಪ್ರೊಫೆಸರುಗಳನ್ನು ಯಥೇಚ್ಛವಾಗಿ ಕಾಣಬಹುದು. 'ವಿಜ್ಞಾನ' ಅಲ್ಲದ ಇತರ ಜ್ಞಾನ ಶಾಖೆಗಳಲ್ಲಿ ಎಂಥ 'ವೈಜ್ಞಾನಿಕ' ಕೆಲಸಗಳು ಜರುಗುತ್ತಿವೆ? ಅರ್ಥಶಾಸ್ತ್ರವನ್ನು, ಸಮಾಜಶಾಸ್ತ್ರವನ್ನು, ಇತಿಹಾಸವನ್ನು, ರಾಜ್ಯಶಾಸ್ತ್ರವನ್ನು, ಸಾಹಿತ್ಯವನ್ನು ಪ್ರಾಧ್ಯಾಪಕರು ಯಾವ ರೀತಿ ಕಲಿಸುತ್ತಿದ್ದಾರೆ? ವಿದ್ಯಾರ್ಥಿಗಳು ಯಾವ ರೀತಿ ಕಲಿಯುತ್ತಿದ್ದಾರೆ? ಪಠ್ಯ ಪುಸ್ತಕ, ಬೋಧನೆ ಮತ್ತು ಅಧ್ಯಯನ ಗೈಡುಗಳು ಮತ್ತು ನೋಟ್ಸಿನ ವೃತ್ತದಿಂದ ಕಲಿಕೆ ಹೊರಗೆ ಬಂದಿದೆಯೆ? ಬೋಧನಾಧ್ಯಯನ ವಿಧಾನದಲ್ಲಿ ಹೊಸತನ ಬಂದಿದೆಯೆ? ಪ್ರಯೋಗಗಳು ನಡೆಯುತ್ತಿವೆಯೆ? ಪರೀಕ್ಷೆಗಳನ್ನು ನಡೆಸುವ ವಿಧಾನದಲ್ಲಿ ಮತ್ತು ಸೋಲುಗೆಲುವುಗಳನ್ನು ನಿರ್ಧರಿಸುವ ವಿಧಾನದಲ್ಲಿ ಬದಲಾವಣೆಗಳುಂಟಾಗಿವೆಯೆ? ಬೇರೆ ದೇಶಗಳಲ್ಲಿ, ಬೇರೆ ದೇಶಗಳ ವಿಶ್ವವಿದ್ಯಾನಿಲಯಗಳಲ್ಲಿ ನಡೆಯುತ್ತಿರುವ ಪ್ರಯೋಗಗಳನ್ನು ಅನುಕರಿಸುವ ಪ್ರಯತ್ನಗಳಾದರೂ ನಡೆದಿವೆಯೆ?

**ಸಾಹಿತ್ಯದ ವಿಚಾರಕ್ಕೆ ಬರೋಣ**

ಸಾಹಿತ್ಯ ವಿಜ್ಞಾನವಲ್ಲ. ಆದರೆ ಸಾಹಿತ್ಯದಲ್ಲಿ ವಿಜ್ಞಾನ ಇಲ್ಲವೆ? ಸಾಹಿತ್ಯ ಸೃಷ್ಟಿಯಲ್ಲಿ ವೈಜ್ಞಾನಿಕ ಎನ್ನಬಹುದಾದ ಚಿಂತನೆಗಳು ಮತ್ತು ಪ್ರಯೋಗಗಳು

ನಡೆದಿಲ್ಲವೆ ? ಸಾಹಿತ್ಯದ ಬೆಳವಣಿಗೆಯ ರೀತಿಯಲ್ಲಿ ವೈಜ್ಞಾನಿಕತೆ ಇಲ್ಲವೆ ? ಬಹಳ ಕಾಲದಿಂದ ನಾವು ಕಾವ್ಯ, ನಾಟಕ, ಕಾದಂಬರಿ ಮತ್ತು ಸಣ್ಣ ಕತೆ ಎಂಬ ದಾರಿಗಳಲ್ಲಿ ನಡೆದು ಬಂದಿದ್ದೇವೆ. ಸಾಹಿತ್ಯದಲ್ಲಿ ಮೊದಲು ಹುಟ್ಟಿದ್ದು ಕಾವ್ಯ. ಅದರ ಜೊತೆಗೇ ಅಜ್ಜಿ ಕಥೆ, ಪುರಾಣ ಕಥೆ ಮತ್ತು ಅದರ ಬೆನ್ನಲ್ಲೇ ನಾಟಕ. ಬಹಳ ಕಾಲದ ನಂತರ ಹುಟ್ಟಿದ್ದು ಕಾದಂಬರಿ ಮತ್ತು ಅದರ ಜೊತೆಯಲ್ಲಿಯೇ ಸಣ್ಣಕತೆ. ಆಯ್ತು, ಇಷ್ಟೇನೆ ? ಸಾಹಿತ್ಯದಲ್ಲಿ ಇನ್ನೇನೂ ಸಾಧ್ಯವಿಲ್ಲವೆ ? ಒಂದು ಹೊಸ ಪ್ರಕಾರ, ಒಂದು ಹೊಸ ಶೈಲಿ ಹಲವು ಶತಮಾನಕ್ಕೊಮ್ಮೆ ಎನ್ನೋಣ. ಆದರೆ ಪ್ರಯೋಗ ? ಪ್ರಯೋಗ ಎಲ್ಲಾ ಜ್ಞಾನ-ವಿಜ್ಞಾನ ಶಾಖೆಯಲ್ಲಿಯೂ ನಿರಂತರವಾದುದು. ಅದೇ ಅದರ ಜೀವಂತಿಕೆ, ಪ್ರಸ್ತುತತೆ ಮತ್ತು ನಾವೀನ್ಯ. ಪ್ರಯೋಗ ನಡೆಯುತ್ತಲೇ ಇರಬೇಕು. ಪ್ರಯೋಗಗಳನ್ನೆಲ್ಲ ಸಮಾಜ ಸ್ವೀಕರಿಸಬೇಕೆಂದಿಲ್ಲ, ಆದರೆ ಪ್ರಯೋಗಕ್ಕೆ ಸಮಾಜ ಪ್ರೋತ್ಸಾಹ ನೀಡ ಬೇಕು. ಪ್ರೋತ್ಸಾಹದ ಅಗತ್ಯವಿರುವುದು ವ್ಯಕ್ತಿಗಿಂತಲೂ ಹೆಚ್ಚಾಗಿ ಸಮಾಜಕ್ಕೆ. ಸಮಾಜದ ಉಳಿವಿಗೆ, ಪುರೋಗಮನಕ್ಕೆ ಇದು ಅಗತ್ಯ. ವ್ಯಕ್ತಿಗೆ ಸಾವಿದೆ, ಪ್ರಯೋಗಕ್ಕೆ ಸಾವಿಲ್ಲ. ವಿಜ್ಞಾನಿ ಸತ್ತ ಬಳಿಕವೂ ಅವನು ಆರಂಭಿಸಿದ ಪ್ರಯೋಗ ಮುಂದುವರಿಯುತ್ತದೆ. ಇದು ವಿಜ್ಞಾನದಷ್ಟೇ ಎಲ್ಲಾ ಜ್ಞಾನಶಾಖೆಗಳಿಗೂ ಅನ್ವಯಿಸುವ ವಿಚಾರ. ಷೇಕ್ಸ್‌ಪಿಯರ್‌ನ ಹಲವು ಸಾನೆಟುಗಳ ಆಳದಲ್ಲಿ ವೈಜ್ಞಾನಿಕ ಚಿಂತನಾ ವಿಧಾನವಿರುವುದನ್ನು ಗಮನಿಸ ಬಹುದು. ಅದೇ ರೀತಿ ಜಾನ್ ಡನ್, ವಿಲಿಯಮ್ ಬ್ಲೇಕ್, ಟಿ. ಎಸ್. ಈಲ್ಯಾಟ್ ಮತ್ತು ನಮ್ಮ ಬೇಂದ್ರೆ, ಡಿ.ವಿ.ಜಿ. ಮುಂತಾದವರ ಕವಿತೆಗಳನ್ನೋದುವಾಗ ಬಹಳ ಸಲ ಅವರು ವಿಜ್ಞಾನಿಗಳಂತೆ ಚಿಂತಿಸಿ ಕವಿತೆ ಬರೆಯುತ್ತಿದ್ದಾರೆ ಎಂದೆನಿಸಬಹುದು. ಆಧುನಿಕ ವಿಜ್ಞಾನ ಹುಟ್ಟಿದ್ದು ಪಶ್ಚಿಮ ದೇಶಗಳಲ್ಲಿ. ಆ ಬಳಿಕ ಅದು ಅಲ್ಲಿಂದ ಇಲ್ಲಿಗೆ ಬಂತು. ಅದಕ್ಕಿಂತ ಎಷ್ಟೋ ಶತಮಾನಗಳ ಮೊದಲು ನಮ್ಮಲ್ಲಿದ್ದುದು ವೇದ ಮಂತ್ರಗಳು, ಪುರಾಣಗಳು. ಅವುಗಳಿದ್ದುದು ಬಹುತೇಕ ಕಾವ್ಯರೂಪದಲ್ಲಿ. ಆ ಕಾವ್ಯದಲ್ಲಿ ವಿಜ್ಞಾನವೂ ಇತ್ತು, ತತ್ವಜ್ಞಾನವೂ ಇತ್ತು.

**ಆಧುನಿಕ ಕಾದಂಬರಿಯ ವಿಚಾರಕ್ಕೆ ಬರೋಣ**

ಇಂಗ್ಲಿಷ್ ಎಂಬ ಒಂದು ಭಾಷೆಯಿದೆಯೆಂದು ಕನ್ನಡಕ್ಕೆ ತಿಳಿದುದು ಯಾವಾಗ ? ಮೊತ್ತ ಮೊದಲು ಇಂಗ್ಲಿಷ್ ಓದಿದ ಕನ್ನಡಿಗರು ಯಾರು ? ಅವರು ಇಂಗ್ಲಿಷ್‌ನಲ್ಲಿ ಯಾವ ಪುಸ್ತಕಗಳನ್ನು ಓದಿದರು ? ಈ ಮಾಹಿತಿ ಸಿಕ್ಕಿದರೆ ಕನ್ನಡ ಸಾಹಿತ್ಯ ಮತ್ತು ಇಂಗ್ಲಿಷ್ ಸಾಹಿತ್ಯದ ನಡುವೆ ಯಾವಾಗ ಸಂಪರ್ಕ ಆರಂಭವಾಯಿತು ಎಂದು ತಿಳಿದುಕೊಳ್ಳ ಬಹುದು. ಏನಿದ್ದರೂ ಅದು ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿ, ಅಂದರೆ ವಿಲಿಯಮ್ ಬೆಂಟಿಂಕನ ಕಾಲದಲ್ಲಿ, ಎಂದು ತಿಳಿಯಬೇಕಾಗುತ್ತದೆ.

ಇಂಗ್ಲಿಷ್‌ನ ಸಂಪರ್ಕ ಇಲ್ಲದಿರುತ್ತಿದ್ದರೆ, ಕನ್ನಡದಲ್ಲಿಯೇ ಕಾದಂಬರಿ ಎಂಬ ಪ್ರಕಾರ ಯಾವಾಗ ಕಾಣಿಸಿಕೊಳ್ಳುತ್ತಿತ್ತು ಎಂದು ಊಹಿಸುವುದು ಕಷ್ಟ. ಯಾಕೆಂದರೆ ಕಾದಂಬರಿ ಪ್ರಕಾರ ಹುಟ್ಟಿದ್ದು ಇಂಗ್ಲಿಷ್ ಭಾಷೆಯಲ್ಲಿ. ಸಾಹಿತ್ಯ ಚರಿತ್ರೆಯ ಪ್ರಕಾರ ನಿರ್ದಿಷ್ಟವಾಗಿ ಹೇಳುವುದಿದ್ದರೆ, ೧೫೭೮ರಲ್ಲಿ ಪ್ರಕಟಗೊಂಡ ಜಾನ್ ಲಿಲಿಯ 'ಯೂಫ್ಯುಇಸ್' ಇಂಗ್ಲಿಷ್ ಭಾಷೆಯ ಮೊತ್ತ ಮೊದಲ ಕಾದಂಬರಿ. ಆದರೆ ವಾಸ್ತವದಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಆಧುನಿಕ ಕಾದಂಬರಿ ಪ್ರಕಾರ ೧೭೪೦ರಲ್ಲಿ ಪ್ರಕಟವಾದ ಹೆನ್ರಿ ರಿಚರ್ಡ್‌ಸನ್‌ನ 'ಪಮೇಲಾ'ದಿಂದ ಆರಂಭವಾಯಿತು ಎಂದು ಹೇಳಬಹುದು.

ಪಮೇಲಾದ ನಂತರದ ಕಾಲದಲ್ಲಿ ಪ್ರಕಟವಾದ ಹೆನ್ರಿ ಫೀಲ್ಡಿಂಗ್‌ನ (೧೭೦೭-೫೪) 'ಜೋಸೆಫ್ ಆಂಡ್ರೂಸ್' (೧೭೪೨), 'ಟಾಮ್ ಜೋನ್ಸ್' (೧೭೪೯), ಹೆನ್ರಿ ರಿಚರ್ಡ್ ಸನ್‌ನ 'ಕ್ಲಾರಿಸಾ ಹಾರ್ಲೋವ್' (೧೭೪೭) ಎಂಬ ಎಂಟು ಸಂಪುಟಗಳ ಬೃಹತ್ ಕಾದಂಬರಿ ಆಧುನಿಕ ಕಾದಂಬರಿ ಪ್ರಕಾರದ ಪಂಚಾಂಗದ ಕಲ್ಲುಗಳೆನ್ನಬಹುದು. ಆದರೂ ಇದಕ್ಕೆ ಮೊದಲೇ ಕಾದಂಬರಿ ಎನ್ನಬಹುದಾದಂಥ ಕೃತಿಗಳು ಇಂಗ್ಲಿಷ್ ಭಾಷೆಯಲ್ಲಿ ಕಾಣಿಸಿ ಕೊಂಡಿದ್ದುವು ಎಂಬುದನ್ನು ಗಮನಿಸಬೇಕಾಗುತ್ತದೆ. ೧೬೯೨ರಲ್ಲಿ, ಪೀಟರ್ ಆ್ಯಂಟನಿ ಮ್ಯಾಟಿಕ್ಸ್ ಎಂಬುವನು ತನ್ನ 'ಜಂಟಲ್‌ಮೆನ್ಸ್ ಜರ್ನಲ್' ಎಂಬ ಪತ್ರಿಕೆಯ ಪ್ರತಿ ಸಂಚಿಕೆ ಯಲ್ಲಿ ಒಂದು ಕಿರು ಕಾದಂಬರಿಯನ್ನು ಕೊಡುತ್ತಿದ್ದ ಎಂದು ತಿಳಿದುಬರುತ್ತದೆ. ಲಿಲಿಯ 'ಯೂಫ್ಯುಇಸ್' ಕಾದಂಬರಿ ಜನಪ್ರಿಯವಾಗಿತ್ತು ಮತ್ತು ಆತ ಆಕ್ಸ್‌ಫರ್ಡ್ ಮತ್ತು ಕೇಂಬ್ರಿಜ್ ಎರಡೂ ವಿಶ್ವವಿದ್ಯಾನಿಲಯಗಳಲ್ಲಿ ಅಧ್ಯಯನ ಮಾಡಿದವನಾದುದರಿಂದ ಬರವಣಿಗೆಯನ್ನು ಗಂಭೀರವಾಗಿಯೇ ತೆಗೆದು ಕೊಂಡವನೆಂದು ತಿಳಿಯಬೇಕಾಗುತ್ತದೆ. 'ಯೂಫ್ಯುಇಸ್' ಸಾಕಷ್ಟು ಜನಪ್ರಿಯತೆಯನ್ನು ಕೂಡ ಗಳಿಸಿತ್ತು ಎಂಬುದು ಗಮನಿಸಬೇಕಾದ ಇನ್ನೊಂದು ಅಂಶ.

ಆಧುನಿಕ ಕಾದಂಬರಿಯ ಭದ್ರವಾದ ಬುನಾದಿ ನೆಲೆಗೊಳ್ಳುತ್ತಿರುವ ಪ್ರಕ್ರಿಯೆಯ ಹಿಂದೆ ಮುಂದೆ ನಡೆದ ಸಾಹಿತ್ಯ ಸೃಷ್ಟಿಯನ್ನು ಗಮನಿಸಿದರೆ, ಆ ನಂತರ ಇಂಗ್ಲಿಷ್ ಕಾದಂಬರಿ ಪ್ರಕಾರ ಹೇಗೆ ಭೋರ್ಗರೆಯುತ್ತಾ ಮುಂದಕ್ಕೆ ಪ್ರವಹಿಸಿತು ಎಂದು ಕಂಡುಕೊಳ್ಳಬಹುದು. ಡೇನಿಯಲ್ ಡಿಫೊ (೧೬೬೦-೧೭೩೧)ನ 'ರಾಬಿನ್ಸನ್ ಕ್ರೂಸೊ' ೧೭೧೯ರಲ್ಲಿ ಪ್ರಕಟವಾಯಿತು. ರಾಬಿನ್ಸನ್ ಕ್ರೂಸೊ ಮುಂದೆ 'ಕಥೆ'ಯಾಗಿ ಜಗದ್ವಿಖ್ಯಾತ ವಾಯಿತು. ೧೭೨೨ರಲ್ಲಿ ಪ್ರಕಟವಾದ ಅವನ 'ಮಾಲ್ ಫ್ಲಾಂಡರ್ಸ್' ಆಧುನಿಕ 'ಕಾದಂಬರಿ' ಸ್ವರೂಪದಲ್ಲಿದೆ. ಜೋನಥಾನ್ ಸ್ವಿಫ್ಟ್ (೧೬೬೭-೧೭೩೧)ನ 'ಗಲಿವರ್ಸ್

ನಾನು

ನಾನು
ಲಕ್ಷಾಂತರ - ಕೋಟ್ಯಾಂತರ
ಪುಸ್ತಕಗಳನ್ನು ನೋಡಿದ್ದೇನೆ.

ನಾನು
ನೂರಾರು-ಸಾವಿರಾರು
ಪುಸ್ತಕಗಳನ್ನು ಓದಿದ್ದೇನೆ.

ನಾನು
ಹತ್ತಾರು-ಹಲವಾರು
ಪುಸ್ತಕಗಳನ್ನು ಬರೆದಿದ್ದೇನೆ.

ಆದರೆ
'ನಾನು' ನೋಡಿದ್ದು ಓದಿದ್ದು ಬರೆದದ್ದು
ಬರೀ ಐವತ್ತೆರಡೇ ಅಕ್ಷರ.

ರಂಗರಾಜ ವನದುರ್ಗ, ಕನ್ನಡ ರೀಡರ್, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ಶಿವಮೊಗ್ಗ ಜಿಲ್ಲೆ

ಟ್ರಾವೆಲ್ಸ್ ' ೧೭೨೬ರಲ್ಲಿ ಪ್ರಕಟವಾಯಿತು. ಧ್ವನಿಯಲ್ಲಿ ವ್ಯಂಗ್ಯ, ತಂತ್ರದಲ್ಲಿ ಭ್ರಾಮಕ ಮತ್ತು ನಿರೂಪಣೆಯಲ್ಲಿ ಪ್ರಕರಣಾ ವಿಧಾನದ ಈ ಕೃತಿ ಆಧುನಿಕ ಇಂಗ್ಲಿಷ್ ಕಾದಂಬರಿಯ ಆರಂಭ ಕಾಲದ ಮಹತ್ವದ ಕೃತಿ. ಫ್ರೆಂಚ್ ಲೇಖಕನಾದ ವಾಲ್ಟೈರ್, (೧೬೯೪-೧೭೭೮) ಇದೇ ಕಾಲದಲ್ಲಿ ಬರೆಯುತ್ತಿದ್ದ.

ಲಾರೆನ್ಸ್ ಸ್ಟರ್ನ್‌ನ (೧೭೧೩-೬೮) 'ಟ್ರಿಸ್ಟಮ್ ಶಾಂಡಿ' ೧೭೬೧ ರಲ್ಲಿಯೂ, ಟೊಬಿಯಾಸ್ ಜೋರ್ಜ್ ಸ್ಮೊಲೆಟ್‌ನ (೧೭೨೧-೭೧) 'ಹಂಫ್ರಿ ಕ್ಲಿಂಕರ್' ೧೭೭೧ರಲ್ಲಿಯೂ ಪ್ರಕಟಗೊಂಡು ಕಾದಂಬರಿ ಪ್ರಕಾರದ ಸ್ವರೂಪ ಇನ್ನಷ್ಟು ಸ್ಪಷ್ಟವಾಗತೊಡಗಿತು. "I am the founder of a new province of writing; I am at liberty to make what laws I please therein" ಎಂದು ತನ್ನ 'ಟಾಮ್ ಜೋನ್ಸ್' ಕಾದಂಬರಿ ಬರವಣಿಗೆಯ ಬಗೆಗೆ ಫೀಲ್ಡಿಂಗ್ ಹೇಳಿದ್ದ. ಅಲ್ಲಿಂದ ಕಾದಂಬರಿ ಎಂಬ ಸಾಹಿತ್ಯ ಪ್ರಕಾರವು ಮುಂದಿನ ದಿನಗಳಲ್ಲಿ ಇತರ ಸಾಹಿತ್ಯ ಪ್ರಕಾರಗಳನ್ನು ಮೀರಿ ಬೆಳೆದು 'ಮಧ್ಯಮ ವರ್ಗೀಯರ ಮಹಾಕಾವ್ಯ' ಎಂದು ಕರೆಸಿಕೊಂಡಿತು.

೨೭೫ ವರ್ಷಗಳ ಹಿಂದೆ ಕಾದಂಬರಿ ಬರೆದ ಸ್ಮೊಲೆಟ್ ಒಬ್ಬ ಶಸ್ತ್ರವೈದ್ಯನೂ, ಪತ್ರಕರ್ತನೂ ಆಗಿದ್ದನೆಂಬುದು 'ಕಾದಂಬರಿಕಾರ'ನ ವೃತ್ತಿ ಮತ್ತು ಅನುಭವ ಲೋಕವನ್ನು ಓದುಗ ಗಮನಿಸುವಂತೆ ಮಾಡುತ್ತದೆ. ಒಬ್ಬ ವ್ಯಕ್ತಿ ಯಾವುದೇ ಒಂದು ಪ್ರಕಾರದ ಬೌದ್ಧಿಕ ಚಟುವಟಿಕೆಗಾಗಿಯೇ ಜನ್ಮವೆತ್ತಿ ಬಂದಿರುವವನು ಎಂಬಂತೆ ಆತನ ಬಗ್ಗೆ ಭಾವಿಸುವುದು, ಬರೆಯುವುದರಲ್ಲಿ ಔಚಿತ್ಯ ಕಾಣಿಸುವುದಿಲ್ಲ. ಹೆನ್ರಿ ಫೀಲ್ಡಿಂಗ್ ನಾಟಕಕಾರನೂ ಪತ್ರಕರ್ತನೂ ಆಗಿದ್ದ. ಡಿಫೊ ಕಾಲ್ಚೀಲ ಮಾರುವ ವ್ಯಾಪಾರಿಯಾಗಿದ್ದ, ಸೈನಿಕನಾಗಿದ್ದ. ರಿಚರ್ಡ್‌ಸನ್ ಮುದ್ರಣಕಾರನಾಗಿದ್ದ. ಕೆಲವೇ ಮಂದಿ ವಿಶ್ವ ವಿದ್ಯಾನಿಲಯದ ಪದವೀಧರರಾಗಿದ್ದರು. ಬಹಳ ಮಂದಿ ಹೆಚ್ಚು ಓದಿದವರಾಗಿರಲಿಲ್ಲ. ಐಸಾಕ್ ನ್ಯೂಟನ್ ಗಣಿತಜ್ಞನಾಗಿರುವಂತೆ, ತತ್ವಜ್ಞಾನಿಯೂ ಆಗಿದ್ದ. ಬಹಳಷ್ಟು ವಿಜ್ಞಾನಿಗಳು ಲೇಖಕರಾಗಿದ್ದರು. ಬಹಳಷ್ಟು ಲೇಖಕರು ವಿಜ್ಞಾನಿಗಳಾಗಿದ್ದರು. ಕಾದಂಬರಿಕಾರರು ನಾಟಕಕಾರರು ಕೂಡ ಆಗಿದ್ದರು. ಕವಿಗಳು ಕಾದಂಬರಿಕಾರರೂ ಆಗಿದ್ದರು. ಒಂದರ್ಥದಲ್ಲಿ ಎಲ್ಲವನ್ನೂ ವಿಜ್ಞಾನ ಎಂದು ಪರಿಭಾವಿಸಬಹುದು. ವಿಶಾಲವಾದ ಅರ್ಥದಲ್ಲಿ ವಿಜ್ಞಾನವನ್ನು ಪರಿಭಾವಿಸಬೇಕಾದ್ದು ಜ್ಞಾನವೆಂದೇ ಹೊರತು ಯಾವುದೋ ಒಂದು 'ವಿಷಯ' ಎಂದಲ್ಲ.

'ವಿಜ್ಞಾನ' ಎಂಬ ಪ್ರತ್ಯೇಕ ಅಧ್ಯಯನ ಶಾಖೆ ಹುಟ್ಟುವ ಮೊದಲು ಜ್ಞಾನ ಇತ್ತು, ಆ ಜ್ಞಾನದಲ್ಲಿಯೇ ವಿಜ್ಞಾನವೂ ಇತ್ತು. ಕಾದಂಬರಿ ಪ್ರಕಾರದಲ್ಲಿ ಒಂದು ಕೃತಿಯನ್ನು ಅಥವಾ ಒಂದು ಹೊಸ ಬಗೆಯ ಬರೆಹವನ್ನು 'ಇದು ಕಾದಂಬರಿ' ಎಂದು ಪರಿಗಣಿಸಲು ಅದರಲ್ಲಿ ಇರಬೇಕಾದ ವಿಶಿಷ್ಟ ಗುಣ ಏನು ? ಪಾತ್ರಕ್ಕೆ ಪ್ರಾಧಾನ್ಯವೆ ? ಕಥೆಗೆ ಪ್ರಾಧಾನ್ಯವೆ ? ನಿರೂಪಣಾ ವಿಧಾನದ ವಿಶಿಷ್ಟತೆಯೆ ? ಪುರಾಣ ಕಥೆ, ಅಜ್ಜ ಕತೆ ಮತ್ತು ಚರಿತ್ರೆಯಲ್ಲಿ ಕಥೆಯಿರುತ್ತದೆ. ಪಾತ್ರದ ವಿವರಗಳಿರುವುದಿಲ್ಲ; ಪಾತ್ರದ ವರ್ತನೆ, ಸ್ವಭಾವ ವೈಚಿತ್ರ್ಯ, ಪಾತ್ರ ಪಾತ್ರಗಳ ನಡುವಣ ಭಾವನಾತ್ಮಕ ಸಂಬಂಧ ಮತ್ತು ದೈನಂದಿನ ಬದುಕಿನ ವಿವರಗಳಿರುವುದಿಲ್ಲ; ಪಾತ್ರದ ಮನೋಲೋಕದ ಚಿತ್ರಣವಾಗಲಿ, ಪಾತ್ರದ ಬದುಕಿನ ಕ್ಷೇತ್ರದ ಮತ್ತು ಕರ್ಮದ ವಿವರವಾಗಲಿ ಇರುವುದಿಲ್ಲ. ಚರಿತ್ರೆ, ಪುರಾಣ ಮತ್ತು ಅಜ್ಜ ಕಥೆಯಲ್ಲಿ ಹೇಳುವವನು ಅಥವಾ ಬರೆಯುವವನು ಬಹುತೇಕ ನಿರ್ಲಿಪ್ತ. ಅವನು ಪಾತ್ರಗಳ ಸದ್ಗುಣ ದುರ್ಗುಣಗಳ ವಿಶ್ಲೇಷಣೆ ಮಾಡುವುದಿಲ್ಲ. ತನ್ನ ಭಾವನೆಗಳನ್ನು, ತನ್ನ ಅನುಭವಗಳನ್ನು, ತಾನು ಕಂಡುಕೊಂಡ ಸತ್ಯಗಳನ್ನು ಪಾತ್ರದ ನಡೆನುಡಿಯ ಮೂಲಕ ಹೊರಗೆಡಹುವುದಿಲ್ಲ. ಅವನು ಹಾಗೆ ಮಾಡಲು ಅವಕಾಶವೂ ಅಲ್ಲಿಲ್ಲ. ಇಂಗ್ಲೆಂಡ್ ಮತ್ತು ಅಮೆರಿಕೆಯ ಇಂಗ್ಲಿಷ್ ಕಾದಂಬರಿ ಕ್ಷೇತ್ರಕ್ಕೆ ನಂತರದ ಕಾಲದಲ್ಲಿ ಪ್ರಪಂಚದ ಇತರ ಭಾಷೆಗಳಲ್ಲಿ ಬಂದ ಕಾದಂಬರಿಗಳು ತರ್ಜುಮೆಗೊಂಡು ಸೇರ್ಪಡೆಯಾಗಿ ವಿಶ್ವದೆಲ್ಲೆಡೆಯಲ್ಲಿ ಪ್ರಸಾರಗೊಳ್ಳುವ ಅವಕಾಶವನ್ನು ಪಡೆದು ಇಂಗ್ಲಿಷ್ ಕಾದಂಬರಿಗಳೆಂದೇ ಪರಿಗಣಿತವಾಗಿರುವುದನ್ನು ಕಾಣಬಹುದು. ಜೀನ್ ಪಾಲ್ ಸಾರ್ತ್ರ, ಆಲ್‌ಬರ್ಟ್ ಕಾಮೂ, ಫ್ರಾಂಜ್ ಕಾಫ್ಕಾ ಮತ್ತು ಇತ್ತೀಚೆಗಿನ ದಿನಗಳಲ್ಲಿ ಆಫ್ರಿಕಾ, ದಕ್ಷಿಣ ಅಮೆರಿಕಾ ಮತ್ತು ಇಂಡಿಯದ ಮೂಲ ಇಂಗ್ಲಿಷ್ ಕಾದಂಬರಿಗಳು ಇಂಗ್ಲಿಷ್ ಕಾದಂಬರಿ ಲೋಕವನ್ನು ಪ್ರವೇಶಿಸಿವೆ. ಅವರಲ್ಲಿ ಕೆಲವರಂತೂ ಇಂಗ್ಲೆಂಡಿನ ಅಥವಾ ಅಮೆರಿಕದ ಕಾದಂಬರಿಕಾರರಷ್ಟೇ ಪ್ರಸಿದ್ಧಿಯನ್ನು ಗಳಿಸಿದ್ದಾರೆ. ಆದರೆ ಜಗತ್ತಿನಲ್ಲಿ ವಿವಿಧ ಇಂಗ್ಲಿಷೇತರ ಭಾಷೆಗಳಲ್ಲಿ ನಡೆದಿರುವ ಸಾಹಿತ್ಯ ಕೃಷಿಯನ್ನು ನೋಡಿದರೆ, ರಷ್ಯನ್ ಭಾಷೆಯನ್ನು ಬಿಟ್ಟರೆ, ಬಹುಶಃ ಕನ್ನಡ, ಬಂಗಾಳಿ, ಮಲಯಾಳಂ, ತೆಲುಗು, ತಮಿಳು, ಹಿಂದಿ ಮುಂತಾದ ಭಾಷೆಗಳಲ್ಲಿ ಹೊರಬಂದಷ್ಟು ಕೃತಿಗಳು ಆಫ್ರಿಕದ ಅಥವಾ ಏಷ್ಯದ ಅಥವಾ ಬೇರೆ ಯಾವ ಪ್ರದೇಶದ ಭಾಷೆಗಳಲ್ಲಿಯೂ ಬಂದಿಲ್ಲವೆಂದು ಹೇಳಬಹುದು. ಕನ್ನಡದ ಹೆಚ್ಚಿನ ಬರಹಗಾರರು ಸಾಮಾಜಿಕ ವಸ್ತುವನ್ನೇ ಎತ್ತಿಕೊಂಡಿರುವುದನ್ನು ಕಾಣಬಹುದು. ಬೇರೆ ಪ್ರಯೋಗಗಳನ್ನು ಕನ್ನಡ ಓದುಗರು ಇಷ್ಟಪಡುವುದಿಲ್ಲ ಎಂಬ ಆಪಾದನೆ ಕೂಡ ಇದೆ. ಓದುಗರಿಗೆ ಏನು ಬೇಕೋ ಅದನ್ನು ಬರೆಯುವುದು ಬರಹ ಅಲ್ಲ. ತನಗೇನು ಬರೆಯಬೇಕೆನಿಸುತ್ತದೆಯೋ ಅದನ್ನು ಲೇಖಕ ಬರೆಯಬೇಕು ಎಂಬ ಮಾತು ಕೂಡ ಇರುವಾಗ ಪ್ರಯೋಗಗಳಿಗೇನಡ್ಡಿ? ಜೋನಥಾನ್ ಸ್ವಿಫ್ಟ್ 'ಗಲಿವರ್ಸ್ ಟ್ರಾವೆಲ್ಸ್' ಬರೆಯುವವರೆಗೆ ಅಂಥದೊಂದು ಬರವಣಿಗೆ ಇರಲಿಲ್ಲ. ೧೯೧೫ರಲ್ಲಿ ಡರಥಿ ರಿಚರ್ಡ್‌ಸನ್ 'ಪಾಯಿಂಟೆಡ್ ರೂಫ್ಸ್'ನಲ್ಲಿ ಮೊತ್ತ ಮೊದಲಿಗೆ ಪ್ರಜ್ಞಾ ಪ್ರವಾಹ ತಂತ್ರವನ್ನು ಪ್ರಯೋಗಿಸಿದಳು. ಇದನ್ನು ಮುಂದೆ ೧೯೨೨ರಲ್ಲಿ ಜೇಮ್ಸ್ ಜಾಯ್ಸ್ ತನ್ನ ಯೂಲಿಸಿಸ್‌ನಲ್ಲಿ ಅತ್ಯಂತ ಸಮರ್ಥವಾಗಿ ಬಳಸಿಕೊಂಡ. ಕಾಫ್ಕಾನ 'ಮೆಟಾಮಾರ್ಫಸಿಸ್' ಒಂದು ಒರಿಜಿನಲ್ ಸೃಷ್ಟಿ. ಚಾರ್ಲ್ಸ್ ಡಿಕಿನ್ಸ್‌ನ 'ಪಿಕ್‌ವಿಕ್ ಪೇಪರ್ಸ್' (೧೮೩೬-೩೭) ರೀತಿಯ ಕಾದಂಬರಿ ಅವರೆಗೆ ಬಂದಿರಲಿಲ್ಲ. ಆ ಬಳಿಕ ಇಂಗ್ಲಿಷ್ ಮಾತ್ರವಲ್ಲ ವಿಶ್ವದ ಎಲ್ಲಾ ಭಾಷೆಗಳಲ್ಲಿಯೂ ಅದರ ಅನುಕರಣೆ ನಡೆಯಿತು. ಚಾರ್ಲ್ಸ್ ಡಿಕಿನ್ಸ್‌ನ ಈ ಬೃಹತ್ ಕಾದಂಬರಿಯನ್ನು ತನ್ನ ಇಪ್ಪತ್ತೈದನೆಯ ವರ್ಷ ಪ್ರಾಯದಲ್ಲಿ ಬರೆದನೆಂಬುದನ್ನು ತರುಣ ಕಾದಂಬರಿಕಾರರು ಪ್ರತ್ಯೇಕವಾಗಿ ಗಮನಿಸಿಕೊಳ್ಳಬೇಕು।

ಎಚ್. ಜಿ. ವೆಲ್ಸ್ ನಾವು ವಿಶೇಷವಾಗಿ ಗಮನಿಸಬೇಕಾದ ಒಬ್ಬ ವಿಶಿಷ್ಟ ಲೇಖಕ. ಅವನು ಕಾದಂಬರಿ ಬರವಣಿಗೆಯಲ್ಲಿ ವಿಶಿಷ್ಟವಾದ ಪ್ರಯೋಗಗಳನ್ನು ಮಾಡಿದ. ಅವನ ಕಾದಂಬರಿಗಳನ್ನು 'ಅದ್ಭುತರಮ್ಯ ಕಾಲ್ಪನಿಕಗಳು', 'ವ್ಯಕ್ತಿಪ್ರಧಾನವಾದ ಹಾಸ್ಯಗಳು' ಮತ್ತು 'ಚರ್ಚೆಗಳು' ಎಂಬುದಾಗಿ ವಿಂಗಡಿಸಲಾಗುತ್ತದೆ. ಇಂಥ ಪ್ರಯೋಗಗಳನ್ನು ಒಬ್ಬ ಲೇಖಕ ಒಂದು ಶತಮಾನದ ಹಿಂದೆಯೇ ಮಾಡಿದ್ದನೆಂಬುದು ಗಮನಿಸತಕ್ಕ ವಿಚಾರ. ಜೋನಥಾನ್ ಸ್ವಿಫ್ಟ್ ತನ್ನ ಗಲಿವರ್ಸ್ ಟ್ರಾವೆಲ್ಸ್, ಟೇಲ್ ಆಫ್ ದ ಟಬ್ ಮುಂತಾದ ಕಾದಂಬರಿಗಳ ಮೂಲಕ ಅದಕ್ಕೂ ಮೊದಲೇ ಮಾಡಿದ್ದ ಎಂಬುದು ಕೂಡ ಗಮನೀಯ. ಎಚ್. ಜಿ. ವೆಲ್ಸ್‌ನ ದ ಟೈಮ್ ಮೆಷೀನಿಗೆ ಅದರಿಂದಲೇ ಸ್ಫೂರ್ತಿ. ಥಾಮಸ್ ಮೂರನ ಯೂಟೋಪಿಯ, ಚಾಣಕ್ಯನ ಅರ್ಥಶಾಸ್ತ್ರ, ಪ್ಲೇಟೊನ ರಿಪಬ್ಲಿಕ್ ಮುಂತಾದ ಕೃತಿಗಳು ವೈಜ್ಞಾನಿಕ ಚಿಂತನೆಯಿಂದ ಕೂಡಿದ ಮಹತ್ವದ ಕೃತಿಗಳು. ಇವುಗಳು ಸೃಜನಶೀಲ ಸಾಹಿತ್ಯ ಕೃತಿಗಳು ಓದಿಸಿಕೊಳ್ಳುವಂತೆಯೇ ಓದಿಸಿಕೊಳ್ಳುತ್ತವೆ. ಓದುಗನ ಮನಸ್ಸು ಒಂದು ವಿಜ್ಞಾನದ ಗ್ರಂಥವನ್ನು ಓದುವಲ್ಲಿ ಜಾಗೃತವಾಗಿರಬೇಕಾದ್ದು ಎಷ್ಟು ಅಗತ್ಯವೋ ಒಂದು ಸಾಹಿತ್ಯಕೃತಿಯನ್ನು ಓದುವಲ್ಲಿಯೂ ಜಾಗೃತವಾಗಿರಬೇಕಾದ್ದು ಅಷ್ಟೇ ಅಗತ್ಯವೆಂದಾದರೆ, ಅದನ್ನು ಆ ಕೃತಿಯ ಶ್ರೇಷ್ಠತೆಯನ್ನು ನಿರ್ಧರಿಸುವಲ್ಲಿ ಒಂದು ಮುಖ್ಯವಾದ ಗುಣ ಎಂದು ಹೇಳಬಹುದು.

**ಕೆ. ಟಿ. ಗಟ್ಟಿ**
'ವನಶ್ರೀ', ಉಜಿರೆ, ದಕ್ಷಿಣ ಕನ್ನಡ - ೫೭೪ ೨೪೦

## ಕದ್ದವರಾರು ?

ಸೀಟು
ಸೈಟು
ಉಳ್ಳವರ
ಪಾಲು !

ಕದ್ದವರಾರು
ದೀನ ದಲಿತ
ಬಡವರ
ಅನ್ನದ
ಪಾಲು ?

**ಎಸ್. ಶಶಿಕಾಂತ್ ಯಡಹಳ್ಳಿ**
ಬೆಂಗಳೂರು

## ಶ್ರದ್ಧಾಂಜಲಿ

ಜನಪರ ಹೋರಾಟಗಳಿಗೆ ಯಾವಾಗಲೂ ಬೆಂಬಲ ನೀಡುತ್ತಿದ್ದ ನ್ಯಾಯಮೂರ್ತಿ ಶ್ರೀ ಡಿ. ಎಂ. ಚಂದ್ರಶೇಖರ್ ಅವರು ಇತ್ತೀಚೆಗೆ ನಮ್ಮನ್ನಗಲಿದ್ದಾರೆ. ಅವರಿಗೆ 'ಹೊಸತು' ತನ್ನ ಗೌರವಪೂರ್ವಕ ನಮನ ಸಲ್ಲಿಸುತ್ತದೆ.



# ಕ್ಯೂಬಾದ ಮೇಲೆ ದಾಳಿ ನಡೆಸಲು ಬುಷ್ ಸನ್ನಾಹ

ಅಮೆರಿಕದ ಅಧ್ಯಕ್ಷ ಜಾರ್ಜ್ ಬುಷ್ ವಕ್ರದೃಷ್ಟಿ ನೆರೆಯ ರಾಷ್ಟ್ರ ಕ್ಯೂಬಾದ ಮೇಲೆ ಬಿದ್ದಿದೆ. ಇದೇನೂ ಹೊಸದಲ್ಲ. ಏಕೆಂದರೆ ಕ್ಯೂಬಾದಲ್ಲಿ ಫಿಡೆಲ್ ಕ್ಯಾಸ್ಟ್ರೋ ನೇತೃತ್ವದಲ್ಲಿರುವ ಸರಕಾರವನ್ನು ಉರುಳಿಸಲು ಅಮೆರಿಕ ಹಲವು ವರ್ಷಗಳಿಂದ ಪ್ರಯತ್ನ ನಡೆಸುತ್ತಲೇ ಬಂದಿದೆ. ಕಡೆಗೆ ಫಿಡೆಲ್ ಕ್ಯಾಸ್ಟ್ರೋ ಕೊಲೆ ಪ್ರಯತ್ನಗಳನ್ನು ಅಮೆರಿಕದ ಕುಖ್ಯಾತ ಗೂಢಚರ್ಯೆ ಸಂಸ್ಥೆ ಸಿಐಎ ನಡೆಸಿ ವಿಫಲಗೊಂಡಿದೆ. ಅಮೆರಿಕದ ಎಲ್ಲ ಕುತಂತ್ರಗಳನ್ನೂ, ಒತ್ತಡಗಳು ಮತ್ತು ವಿಧ್ವಂಸಕ ಚರ್ಯೆಗಳನ್ನೂ, ಬೆದರಿಕೆಗಳನ್ನೂ ಎದುರಿಸಿ ದಕ್ಷಿಣ ಅಮೆರಿಕದ ಪುಟ್ಟ ಕ್ಯೂಬಾ ನಾಲ್ಕು ದಶಕಗಳಿಗೂ ಹೆಚ್ಚು ಕಾಲದಿಂದ ಅಜೇಯವಾಗಿ ನಿಂತಿದೆ. ಕ್ಯೂಬಾ ಯಾವತ್ತಿನಿಂದಲೂ ಅಮೆರಿಕದ ಮಡಿಲಲ್ಲಿ ಹುದುಗಿಕೊಂಡಿರುವ ಕೆಂಡ. ಅಮೆರಿಕದ ಫ್ಲಾರಿಡಾ ರಾಜ್ಯಕ್ಕೆ ಕೆಲವೇ ಕಿಲೋ

**೧೯೫೯ರಲ್ಲಿ ಫೀಡೆಲ್ ಕ್ಯಾಸ್ಟ್ರೋ ನೇತೃತ್ವದಲ್ಲಿ ಸ್ಥಾಪನೆಗೊಂಡ ಹೊಸ ಸರಕಾರ ಕ್ಯೂಬಾದ ಪ್ರಗತಿಗೆ ಆಯ್ಕೆಮಾಡಿಕೊಂಡಿದ್ದು ಸಮಾಜವಾದಿ ಪಥ. ಇದು ಅಮೆರಿಕದ ಸಾಮ್ರಾಜ್ಯಶಾಹಿಗಳಿಗೆ ನುಂಗಲಾರದ ತುತ್ತಾಯಿತು. ತನ್ನ ಆಶ್ರಯದಲ್ಲೇ ಇದ್ದ ದೇಶವನ್ನು ಕಳೆದುಕೊಂಡಿದ್ದು, ತನ್ನ ನೆರೆಯ ಭೂಭಾಗದಲ್ಲೇ ಕಮ್ಯುನಿಸ್ಟ್ ನೇತೃತ್ವದ ಸರಕಾರವೊಂದು ಕ್ಯೂಬಾದಲ್ಲಿ ಸ್ಥಾಪನೆಗೊಂಡದ್ದು ಅಮೆರಿಕಾಗೆ ದೊಡ್ಡ ಸವಾಲಾಯಿತು.**

**ಸೀಯಾರ್ಕೆ**

ಮೀಟರುಗಳ ದೂರದಲ್ಲಿರುವ ಕ್ಯೂಬಾವನ್ನು ಕಬಳಿಸಲು ಬಲಿಷ್ಠ ಅಮೆರಿಕಾಗೆ ಸಾಧ್ಯವಾಗದಿರುವುದಕ್ಕೆ ಕಾರಣ ಪ್ರಪಂಚದ ಜನತೆಯ ಪೂರ್ಣ ಬೆಂಬಲ ಕ್ಯೂಬಾಕ್ಕಿರುವುದು.

ಪ್ರಪಂಚದ ಜನತೆಯ ವಿರೋಧವನ್ನೂ, ಸಕಲ ರಾಷ್ಟ್ರಗಳ ಪ್ರಾತಿನಿಧಿಕ ಸಂಘಟನೆಯಾದ ವಿಶ್ವಸಂಸ್ಥೆಯ ಅಭಿಮತವನ್ನೂ ಧಿಕ್ಕರಿಸಿ ಇರಾಕಿನ ಸದ್ದಾಮ್ ಹುಸೇನ್ ಸರಕಾರವನ್ನು ಉರುಳಿಸಲು ದಾಳಿ ನಡೆಸಿ ದೇಶವನ್ನು ಆಕ್ರಮಿಸಿಕೊಂಡಿರುವ ಅಮೆರಿಕ ಈ ಹೊಸ ಅವತಾರದಲ್ಲಿ ಏನು ಬೇಕಾದರೂ ಮಾಡಬಹುದು. ಅದರಲ್ಲೂ ಯುದ್ಧ ಪಿಪಾಸು ಅಧ್ಯಕ್ಷ ಜಾರ್ಜ್ ಬುಷ್‌ರ ಹುಚ್ಚು ಅಬ್ಬರಗಳನ್ನು ಇಂದು ಕಡೆಗಣಿಸುವಂತಿಲ್ಲ. ಇರಾಕನ್ನು ಆಕ್ರಮಿಸಿಕೊಂಡು ಮಣ್ಣು ಮುಕ್ಕುತ್ತಿದ್ದರೂ ಜಾರ್ಜ್ ಬುಷ್ ಇನ್ನೊಂದು ಜೇನುಗೂಡಿಗೆ ಕೈಹಾಕುವ ದುಷ್ಕೃತ್ಯದಲ್ಲಿ ತೊಡಗುವುದಿಲ್ಲವೆಂದೇನಿಲ್ಲ. ಅದರಿಂದಲೇ ಕ್ಯೂಬಾದಲ್ಲಿ ಕ್ಯಾಸ್ಟ್ರೋ ಆಡಳಿತವನ್ನು ಬದಲಿಸುವ ಆತನ ಯೋಜನೆಯನ್ನು ಗಂಭೀರವಾಗಿ ತೆಗೆದುಕೊಳ್ಳಬೇಕಾಗಿದೆ. ಅಂತರರಾಷ್ಟ್ರೀಯ ಸಮುದಾಯ 'ಕ್ಯೂಬಾದಿಂದ ದೂರವಿರಿ' ಎಂದು ಈಗಿನಿಂದಲೇ ಅಮೆರಿಕದ ಯುದ್ಧಕೋರರ ಮೇಲೆ ಒತ್ತಡ ತರಬೇಕಾಗಿದೆ. ಕ್ಯೂಬಾಗೆ ಬೆಂಬಲವಾಗಿ ಜನಾಭಿಪ್ರಾಯವನ್ನು ಕ್ರೋಢೀಕರಿಸಿ ಅಮೆರಿಕದ ಅಧ್ಯಕ್ಷರ ದುರಾಚಾರಗಳಿಗೆ ಕಡಿವಾಣ ಹಾಕಬೇಕಾಗಿದೆ. ಸಮಾಜವಾದಿ ಸಮಾಜದ ನಿರ್ಮಾಣ ಕಾರ್ಯದಲ್ಲಿ ತೊಡಗಿರುವ ಕ್ಯೂಬಾದ ಮೇಲೆ ದಶಕಗಳ ಕಾಲದಿಂದ ಅಮೆರಿಕ ಅನ್ಯಾಯವಾಗಿ, ಅಕ್ರಮವಾಗಿ ಹೇರಿರುವ ಆರ್ಥಿಕ ದಿಗ್ಬಂಧನವನ್ನು ತೆರವುಗೊಳಿಸಲು ಒತ್ತಾಯಿಸಬೇಕಾಗಿದೆ.

ಅಮೆರಿಕದಲ್ಲಿರುವ ಕ್ಯೂಬಾ ವಲಸೆಗಾರರು, ಕ್ಯಾಸ್ಟ್ರೋ ವಿರೋಧಿ ತಂಡಗಳಿಗೆ 'ಕ್ಯೂಬಾದಲ್ಲಿ ಕ್ಯಾಸ್ಟ್ರೋ ಸರಕಾರ ಬದಲಾಗಲೇಬೇಕು, ಬದಲಿಸುತ್ತೇವೆ' ಎಂದು ಆಶ್ವಾಸನೆ ನೀಡಿ, ಜಾರ್ಜ್ ಬುಷ್ ಕ್ಯೂಬಾ ವಿಮೋಚನೆ ಬಗ್ಗೆ ಕೊಚ್ಚಿಕೊಂಡಿದ್ದಾರೆ ಇತ್ತೀಚೆಗೆ. ಈ ಉದ್ದೇಶವನ್ನು ಈಡೇರಿಸಿಕೊಳ್ಳಲು ಆತ ಹೊಸ ಕಾರ್ಯತಂತ್ರವನ್ನು ರೂಪಿಸಿದ್ದಾನೆ. ಕ್ಯೂಬಾಗೆ ಅಮೆರಿಕನ್ನರು ಹೋಗುವುದನ್ನು ಕಟ್ಟುನಿಟ್ಟಾಗಿ ನಿಯಂತ್ರಿಸುವುದು, ಕ್ಯೂಬಾದಿಂದ ವಲಸೆ ಬರುವವರಿಗೆ ಪ್ರೋತ್ಸಾಹ ನೀಡುವುದು, ಕ್ಯೂಬಾ ವಿಮೋಚನೆಗಾಗಿ ಅಮೆರಿಕ ಸರಕಾರ ನೀಡುತ್ತಿರುವ ನೆರವನ್ನು ಪರಿಣಾಮಕಾರಿಯಾಗಿಸಲು ಹೊಸ ಆಯೋಗವೊಂದನ್ನು ವಿದೇಶಾಂಗ ಕಾರ್ಯದರ್ಶಿ ಕಾಲಿನ್ ಪವೆಲ್ ನೇತೃತ್ವದಲ್ಲಿ ರಚಿಸುವುದು, ಅರ್ಥಾತ್ ವಿಧ್ವಂಸ ಚರ್ಯೆಗಳನ್ನು ಪ್ರೋತ್ಸಾಹಿಸುವುದು ಈ ಯೋಜನೆಯ ಸಾರಾಂಶ. ಮುಂದಿನ ಚುನಾವಣೆಗಳನ್ನು ಗಮನದಲ್ಲಿರಿಸಿಕೊಂಡು ಜಾರ್ಜ್ ಬುಷ್ ಫ್ಲಾರಿಡಾದಲ್ಲಿ ನೆಲೆಸಿರುವ ಕ್ಯೂಬನ್ನರ ಬೆಂಬಲ ಗಳಿಸಲು ಕಾತುರರಾಗಿದ್ದಾರೆ. ಲ್ಯಾಟಿನ್ ಅಮೆರಿಕವನ್ನು ತನ್ನ ಹಿತ್ತಿಲು ಎಂದು ಪರಿಗಣಿಸಿರುವ ಅಮೆರಿಕ ಬೇರೆ ಮಾರ್ಗ ಅನುಸರಿಸಿರುವ ಕ್ಯೂಬಾವನ್ನು ಕಬಳಿಸಿ ಹದ್ದುಬಸ್ತಿನಲ್ಲಿರಿಸಿಕೊಳ್ಳಲು ಪ್ರಯತ್ನಿಸುತ್ತಲೇ ಇದೆ. ಅಮೆರಿಕ ''ದುಷ್ಟ ರಾಷ್ಟ್ರಗಳು'' ಎಂದು ಪಟ್ಟಿ ಮಾಡಿರುವ ದೇಶಗಳಲ್ಲಿ ಕ್ಯೂಬಾ ಕೂಡ ಒಂದು. ಕ್ಯೂಬಾ ಭಯೋತ್ಪಾದಕರಿಗೆ ಪ್ರೋತ್ಸಾಹ ನೀಡುತ್ತಿದೆ ಎಂದೂ ಈಚೆಗೆ ಅಮೆರಿಕ ಆರೋಪಿಸಿದೆ. ಏನಾದರೂ ನೆಪ ತೆಗೆದು ಕ್ಯೂಬಾದ ಮೇಲೆ ಆಕ್ರಮಣ ಎಸಗಲು ಯುದ್ಧೋನ್ಮಾದದಿಂದಿರುವ ಅಧ್ಯಕ್ಷ ಬುಷ್ ಸಂಚು ನಡೆಸಿರುವುದು ಸ್ಪಷ್ಟವಿದೆ.

ದೇಶವನ್ನು ಬಹುರಾಷ್ಟ್ರೀಯ ಸಂಸ್ಥೆಗಳಿಗೆ ಒತ್ತೆ ಇರಿಸಿ, ಅಮೆರಿಕದ ಬೆಂಬಲದಿಂದ ಇಪ್ಪತ್ತಾರು ವರ್ಷಗಳ ಕಾಲ ಕ್ರೂರ ದಬ್ಬಾಳಿಕೆಯಿಂದ ಸರ್ವಾಧಿಕಾರಿ ಆಡಳಿತ ನಡೆಸಿದ ಬಾಟಿಸ್ಟಾ ಆಳ್ವಿಕೆ ಕೊನೆಗೊಂಡದ್ದು ಕ್ರಾಂತಿಕಾರಿಗಳಾದ ಫಿಡೆಲ್ ಕ್ಯಾಸ್ಟ್ರೋ ಮತ್ತು ಚೆ ಗೆವಾರಾ ನೇತೃತ್ವದಲ್ಲಿ ಕ್ಯೂಬಾದ ಜನತೆ ನಡೆಸಿದ ಸಶಸ್ತ್ರ ಬಂಡಾಯ ಯಶಸ್ವಿಯಾದಾಗ. ೧೯೫೯ರಲ್ಲಿ ಫಿಡೆಲ್ ಕ್ಯಾಸ್ಟ್ರೋ ನೇತೃತ್ವದಲ್ಲಿ ಸ್ಥಾಪನೆಗೊಂಡ ಹೊಸ ಸರಕಾರ ಕ್ಯೂಬಾದ ಪ್ರಗತಿಗೆ ಆಯ್ಕೆಮಾಡಿಕೊಂಡಿದ್ದು ಸಮಾಜವಾದಿ ಪಥ. ಇದು ಅಮೆರಿಕದ ಸಾಮ್ರಾಜ್ಯಶಾಹಿಗಳಿಗೆ ನುಂಗಲಾರದ ತುತ್ತಾಯಿತು. ತನ್ನ ಆಶ್ರಯದಲ್ಲೇ ಇದ್ದ ದೇಶವನ್ನು ಕಳೆದುಕೊಂಡಿದ್ದು, ತನ್ನ ನೆರೆಯ ಭೂಭಾಗದಲ್ಲೇ ಕಮ್ಯೂನಿಸ್ಟ್ ನೇತೃತ್ವದ ಸರಕಾರವೊಂದು ಕ್ಯೂಬಾದಲ್ಲಿ ಸ್ಥಾಪನೆಗೊಂಡದ್ದು ಅಮೆರಿಕಾಗೆ ದೊಡ್ಡ ಸವಾಲಾಯಿತು. ಕ್ಯೂಬಾದ ನೈಸರ್ಗಿಕ ಸಂಪನ್ಮೂಲಗಳನ್ನು ಲೂಟಿ ಹೊಡೆದು ಶ್ರೀಮಂತಗೊಂಡಿದ್ದ ಅಮೆರಿಕದ ಬಹುರಾಷ್ಟ್ರೀಯ ಕಂಪೆನಿಗಳನ್ನು ರಾಷ್ಟ್ರೀಕರಣ ಮಾಡಿದ ಕ್ಯೂಬಾದ ಸಮಾಜವಾದಿ ಸರಕಾರದ ಕ್ರಮ ಅಮೆರಿಕನ್ ಸಾಮ್ರಾಜ್ಯಶಾಹಿಗಳ ಕಣ್ಣು ಕೆಂಪಗಾಗಿಸಿತು. ಕ್ಯೂಬಾದಲ್ಲಿ ಅಸ್ತಿತ್ವಕ್ಕೆ ಬಂದ ಹೊಸ ಸರಕಾರವನ್ನು ಪ್ರಾರಂಭದಲ್ಲೇ ಚಿವುಟಿ ಹಾಕಲು ಅಮೆರಿಕದ ಸರಕಾರ ಸಜ್ಜಾಯಿತು. ಆದರೆ ಕ್ಯೂಬಾದ ಸರಕಾರಕ್ಕೆ ಅಂದಿನ ಸೋವಿಯತ್ ಒಕ್ಕೂಟದ ಪೂರ್ಣ ಬೆಂಬಲವಿತ್ತಲ್ಲದೆ, ಪರಸ್ಪರ ಸಹಕಾರ ಮತ್ತು ನೆರವಿನ ಒಪ್ಪಂದವಿದ್ದುದರಿಂದ ಅಮೆರಿಕಾಗೆ ಕ್ಯೂಬಾದ ಮೇಲೆ ದಂಡಯಾತ್ರೆ ನಡೆಸಲು ಸಾಧ್ಯವಾಗಲಿಲ್ಲ. ಹಾಗಿದ್ದರೂ ಕ್ಯೂಬಾದ ಕ್ಯಾಸ್ಟ್ರೋ ಸರಕಾರವನ್ನು ಉರುಳಿಸಲು ಪ್ರಯತ್ನಗಳನ್ನು ಕೈಬಿಡಲಿಲ್ಲ.



ಹೊಸವರ್ಷದ ಶಾಲಾ ಆರಂಭದ ಸಂಭ್ರಮ

ಕ್ಯೂಬಾದ ಮೇಲೆ ಅಮೆರಿಕ ಆರ್ಥಿಕ ದಿಗ್ಬಂಧನ ಹೇರಿ ದೇಶವನ್ನು ಆರ್ಥಿಕ ಸಂಕಷ್ಟಕ್ಕೀಡುಮಾಡಿತು. ಅಮೆರಿಕದ ಗೂಢಚರ್ಯೆ ಸಂಸ್ಥೆ ಕ್ಯಾಸ್ಟ್ರೋ ಕೊಲೆಗೆ ನಡೆಸಿದ ಸಂಚೆಲ್ಲ ವಿಫಲಗೊಂಡಿತು; ಅದೇ ರೀತಿಯಲ್ಲಿ ವಿಧ್ವಂಸ ಚರ್ಯೆಗಳ ಮೂಲಕ ಸರಕಾರವನ್ನು ಬುಡಮೇಲು ಮಾಡುವ ಪ್ರಯತ್ನಗಳೂ ಸಫಲವಾಗಲಿಲ್ಲ. ೧೯೬೧ರಲ್ಲಿ ಕ್ಯೂಬಾದ ಮೇಲೆ ದುರಾಕ್ರಮಣ ನಡೆಸಲು ಅಮೆರಿಕ ಎಲ್ಲ ಸನ್ನಾಹವನ್ನು ನಡೆಸಿತ್ತು. ಬೇ ಆಫ್ ಪಿಗ್ಸ್ ಆಕ್ರಮಣ ಎಂದೇ ಹೆಸರಾಗಿರುವ ಈ ಪ್ರಕರಣ ಇಡೀ ಜಗತ್ತನ್ನು ಮೂರನೇ ಮಹಾಯುದ್ಧದ, ಅದರಲ್ಲೂ ನ್ಯೂಕ್ಲಿಯರ್ ಯುದ್ಧದ ಅಂಚಿಗೆ ತಂದಿತ್ತು. ಶೀತಯುದ್ಧ ಮುಗಿಲು ಮುಟ್ಟಿದ್ದ ಅಂದು ಸೋವಿಯೆತ್ ಒಕ್ಕೂಟ ಮತ್ತು ಅಮೆರಿಕಗಳು ಈ ಪ್ರದೇಶದಲ್ಲಿ ಮುಖಾಮುಖಿಯಾಗಿ ನಿಂತಿದ್ದುವು. ಪರಿಸ್ಥಿತಿಯ ಗಂಭೀರತೆ ಹಾಗೂ ಜಗತ್ತಿನ ಇತರ ರಾಷ್ಟ್ರಗಳ ಒತ್ತಾಯಕ್ಕೆ ಮಣಿದು ಅಮೆರಿಕ ಹಿಂದೆ ಸರಿಯಬೇಕಾಯಿತು. ಕ್ಯೂಬಾ ಅಜೇಯವಾಗಿ ಉಳಿಯಿತು.

ಕ್ಯೂಬಾದ ಮೇಲೆ ಅಮೆರಿಕ ನಡೆಸಿರುವ ಪಾತಕ ಕೃತ್ಯಗಳು ಒಂದಲ್ಲ ಎರಡಲ್ಲ. ಅರವತ್ತರ ದಶಕದಲ್ಲಿ ಬಾರ್ಬಡೋಸ್ ಬಳಿ ಹೋಗುತ್ತಿದ್ದ ಕ್ಯೂಬಾದ ಸಾರಿಗೆ ವಿಮಾನವೊಂದರ ಮೇಲೆ ಗುಂಡುಹಾರಿಸಿ ಉರುಳಿಸಲಾಯಿತು. ಅದರಲ್ಲಿದ್ದ ೭೩ ಮಂದಿ ಪ್ರಯಾಣಿಕರು ಅಸುನೀಗಿದರು. ಭಯೋತ್ಪಾದನೆಯ ವಿರುದ್ಧ ಸಮರ ಸಾರಿ ತಾನೊಂದೇ ನಾಗರಿಕ ರಾಷ್ಟ್ರವೆಂದು ಕೊಚ್ಚಿಕೊಳ್ಳುತ್ತಿರುವ ಅಮೆರಿಕ ಜಗತ್ತಿನ ಬಹುದೊಡ್ಡ ಭಯೋತ್ಪಾದಕ ಎನ್ನುವುದು ಈಗ ಸರ್ವವಿದಿತ. ಕ್ಯೂಬಾದ ವಿಮಾನವನ್ನು ಅಪಹರಿಸಿದ, ಕ್ಯೂಬಾದ ದೋಣಿಗಳನ್ನು ಹಾರಿಸಿಕೊಂಡು ಬಂದ ಅಪಹರಣಕಾರರನ್ನೂ ಅಮೆರಿಕ ದಂಡಿಸುವ ಗೋಜಿಗೇ ಹೋಗದೆ, ಬೆನ್ನು ತಟ್ಟಿ ಸ್ವತಂತ್ರರನ್ನಾಗಿಸಿದೆ. ಅಪಹರಣಕ್ಕೊಳಗಾಗಿ ಅಮೆರಿಕದಲ್ಲಿದ್ದ ಎರಡು ಕ್ಯೂಬಾದ ವಿಮಾನಗಳನ್ನು ನ್ಯಾಯವಾಗಿ ಹಿಂದಿರುಗಿಸಿ, ಅಪಹರಣಕಾರರನ್ನು ದಂಡಿಸುವ ಬದಲು, ಅವರನ್ನು ಖುಲಾಸೆ ಮಾಡಿ, ವಿಮಾನಗಳನ್ನು ಹರಾಜು ಹಾಕಲಾಯಿತು. ೧೯೫೯ರಿಂದ ೨೦೦೩ರವರೆಗಿನ ಅವಧಿಯಲ್ಲಿ ಅಪಹರಣಕ್ಕೊಳಗಾದ ೫೧ ಕ್ಯೂಬನ್ ವಿಮಾನಗಳನ್ನು ಅಮೆರಿಕ ವಶಪಡಿಸಿಕೊಂಡಿದೆ. ಅಪಹರಣಕಾರರಲ್ಲಿ ಒಬ್ಬನನ್ನೂ ಅಮೆರಿಕ ವಿಚಾರಣೆಗೆ ಗುರಿಪಡಿಸಿ ಶಿಕ್ಷಿಸಲಿಲ್ಲ; ಅಷ್ಟೇ ಅಲ್ಲ ಕ್ಯೂಬಾದ ವಿಮಾನಗಳನ್ನೂ ಹಿಂದಿರುಗಿಸಲಿಲ್ಲ. ಆದರೆ ಕ್ಯೂಬಾ ಮಾತ್ರ ಅಮೆರಿಕದ ವಿಮಾನಾಪಹರಣಗಾರರಿಗೆ ಕಠಿಣ ಶಿಕ್ಷೆ ವಿಧಿಸಿದೆ. ಇಂಥ ೭೧ ಪ್ರಕರಣಗಳಲ್ಲಿ ೬೯ ಮಂದಿ ಅಪಹರಣಕಾರರಿಗೆ ಶಿಕ್ಷೆ ನೀಡಿದ ಕ್ಯೂಬಾ ಸರಕಾರ ಇಬ್ಬರನ್ನು ಅಮೆರಿಕದ ಅಧಿಕಾರಿಗಳಿಗೆ ಒಪ್ಪಿಸಿತು. ಇಷ್ಟಾದರೂ ಕ್ಯೂಬಾದ ಸರಕಾರ ದಿಟ್ಟತನದಿಂದ ಎಲ್ಲವನ್ನೂ ಎದುರಿಸಿ ಮುಂದೆ ಸಾಗುತ್ತಿದೆ. ಕ್ಯೂಬಾವನ್ನು ಕಬಳಿಸಲು ಅಮೆರಿಕ ತನ್ನ ಹಂಚಿಕೆಗಳನ್ನು ನಡೆಸುತ್ತಲೇ ಇದೆ. ಇರಾಕಿನಲ್ಲಿ ಸದ್ದಾಮ್ ಹುಸೇನ್ ಆಡಳಿತ ಅಂತ್ಯಗೊಂಡಾಯಿತು, ಈಗ ಇನ್ನು ಕ್ಯೂಬಾದ ಸರದಿ ಎಂದು ಫ್ಲಾರಿಡಾದ ಗವರ್ನರ್ ಆಗಿರುವ ಅಧ್ಯಕ್ಷ ಜಾರ್ಜ್ ಬುಷ್ ಸೋದರ ಜೆಬ್ ಬುಷ್ ಈಚೆಗೆ ಹೇಳಿದ್ದಾನೆ. ಬುಷ್ ಆಡಳಿತದಲ್ಲಿರುವ ಅಮೆರಿಕದ ವಿದೇಶಾಂಗ ಖಾತೆಯ ಉಪಕಾರ್ಯದರ್ಶಿ ಜಾನ್ ಬೋಲ್ಟನ್ ಇರಾಕ್ ಸೂಕ್ಷ್ಮಾಣುಜೀವಿ ಅಸ್ತ್ರಗಳ ತಯಾರಿಕೆಯಲ್ಲಿ ತೊಡಗಿದೆ ಎಂದು ಆಪಾದಿಸಿದ್ದಾನೆ. ಒಟ್ಟಿನಲ್ಲಿ ಅಮೆರಿಕನ್ ಸಾಮ್ರಾಜ್ಯಶಾಹಿಗಳು ಕ್ಯೂಬಾದಲ್ಲಿ ಕ್ಯಾಸ್ಟ್ರೋ ಆಡಳಿತೆಯನ್ನು ಅಂತ್ಯಗೊಳಿಸಲು ನೋಡುತ್ತಿವೆ. ಕ್ಯೂಬಾದ ಜನತೆಗೆ ಮಾನವೀಯ ನೆರವು ನೀಡುವುದಕ್ಕೆ ಬದಲಾಗಿ ಅಮೆರಿಕ ಕ್ಯಾಸ್ಟ್ರೋ ಆಡಳಿತ ಉರುಳಿಸಲು ವಿಧ್ವಂಸ ಚರ್ಯೆಗಳಿಗಾಗಿ ಕೋಟ್ಯಂತರ ಡಾಲರುಗಳನ್ನು ವಿನಿಯೋಗಿಸುತ್ತಿದೆ.

ಕಳೆದ ನಾಲ್ಕು ದಶಕಗಳ ಅವಧಿಯಲ್ಲಿ ಕ್ಯೂಬಾದ ಜನತೆಯ ಪುರೋಗಮನಕ್ಕೆ ಸಾಕಷ್ಟು ಅಡ್ಡಿಯುಂಟು ಮಾಡಿರುವುದು ಅಮೆರಿಕ ವಿಧಿಸಿರುವ ಆರ್ಥಿಕ ದಿಗ್ಬಂಧನ. ಮಾನವ ಹಕ್ಕುಗಳ ಏಕಮಾತ್ರ ವಾರಸುದಾರ ತಾನು ಎಂದು ಹೇಳಿಕೊಳ್ಳುವ ಅಮೆರಿಕದ ಆಡಳಿತೆ



ಮಾನವೀಯ ಮೌಲ್ಯಗಳನ್ನೆಲ್ಲ ಗಾಳಿಗೆ ತೂರಿ ಅಮಾನುಷವಾಗಿ ವರ್ತಿಸುತ್ತಿರುವುದಕ್ಕೆ ಕ್ಯೂಬಾದ ಮೇಲೆ ಹೇರಿರುವ ಆರ್ಥಿಕ ದಿಗ್ಬಂಧನ ಒಂದು ನಿದರ್ಶನ. ಕ್ಯೂಬಾದ ಮಕ್ಕಳ ಪೋಷಣೆಗೆ, ಚಿಕಿತ್ಸೆಗೆ ಅಗತ್ಯವಾಗಿದ್ದ ಆಹಾರ ಸಾಮಗ್ರಿಗಳು, ಔಷಧಿಗಳನ್ನು ಸಹ ರವಾನಿಸಲು ಅವಕಾಶ ಕೊಡದೆ ಅಮೆರಿಕ ಬರ್ಬರ ರೀತಿಯಲ್ಲಿ ನಡೆದುಕೊಂಡಿತ್ತು. ಕ್ಯೂಬಾದ ಜನತೆ ಇಂಥ ಸಂದರ್ಭದಲ್ಲೂ ಕೂಡ ಹಿಂಜರಿಯದೆ ಅಮೆರಿಕವನ್ನು ಎದುರಿಸಿ ದೃಢವಾಗಿ ನಿಂತಿತು. ನಾಗರಿಕ ಜಗತ್ತಿನ ಒತ್ತಾಯಕ್ಕೆ ತಲೆಬಾಗಿ ಅನಂತರ ಕ್ಯೂಬಾದ ಜನತೆಗೆ ನೀಡಲು ಪ್ರಪಂಚದ ನಾನಾ ಭಾಗಗಳಿಂದ ಕೊಡುಗೆಯಾಗಿ ಬಂದ ಜೀವನಾವಶ್ಯಕ ವಸ್ತುಗಳನ್ನು ತಡೆಯದಿರಲು ಅಮೆರಿಕ ಒಪ್ಪಿಕೊಂಡಿತು. ಅಮೆರಿಕದ ಆರ್ಥಿಕ ದಿಗ್ಬಂಧನ ಇಂದಿಗೂ ಮುಂದುವರಿಯುತ್ತಿದೆ. ಕಳೆದ ಹನ್ನೆರಡು ವರ್ಷಗಳಿಂದಲೂ ವಿಶ್ವಸಂಸ್ಥೆಯ ಮಹಾಸಭೆಯು ಅಮೆರಿಕ ಕ್ಯೂಬಾದ ಮೇಲೆ ವಿಧಿಸಿರುವ ಆರ್ಥಿಕ ದಿಗ್ಬಂಧನವನ್ನು ತೆರವು ಮಾಡಬೇಕೆಂದು ಒತ್ತಾಯಪಡಿಸುವ ನಿರ್ಣಯವನ್ನು ಅಂಗೀಕರಿಸುತ್ತಿದೆ. ವಾಷಿಂಗ್ಟನ್‌ನ ಬುಷ್ ಸರಕಾರ ಈ ವಿಷಯದಲ್ಲಿ ಹೆಚ್ಚು ಕಡಿಮೆ ಏಕಾಂಗಿಯಾಗಿದೆ. ಮಹಾಸಭೆಯಲ್ಲಿ ನಿರ್ಣಯವನ್ನು ವಿರೋಧಿಸಿದ್ದು ಅಮೆರಿಕ, ಅದರ ಹಿಂಬಾಲಕ ಇಸ್ರೇಲ್ ಮತ್ತು ಪುಟ್ಟ ದ್ವೀಪರಾಷ್ಟ್ರ ಮೈಕ್ರೊನೀಷಿಯ ಮಾತ್ರ. ಭದ್ರತಾ ಸಮಿತಿಯಲ್ಲಿ ವೀಟೋ ಚಲಾಯಿಸಿ ತನ್ನ ಹಠ ಸಾಧಿಸಿಕೊಳ್ಳುತ್ತಿರುವ ಅಮೆರಿಕ ವಿಶ್ವಸಂಸ್ಥೆ ಮಹಾಸಭೆಯ ಬಹುಮತದ ತೀರ್ಮಾನವನ್ನು ಉಲ್ಲಂಘಿಸುವ ದುರಹಂಕಾರ ತೋರುತ್ತ ಬಂದಿದೆ.

ಅಮೆರಿಕದ ಆರ್ಥಿಕ ದಿಗ್ಬಂಧನ ಇಲ್ಲದೇ ಹೋಗಿದ್ದಲ್ಲಿ ಸಮಾಜವಾದಿ ಪಥದಲ್ಲಿ ಅಡಿಯಿರಿಸಿರುವ ಕ್ಯೂಬಾ ಫಿಡೆಲ್ ಕ್ಯಾಸ್ಟ್ರೋ ನೇತೃತ್ವದಲ್ಲಿ ಅಪಾರವಾದ ಪ್ರಗತಿಯನ್ನು ಸಾಧಿಸುತ್ತಿತ್ತು. ಎಷ್ಟೆಲ್ಲ ಸಾಮ್ರಾಜ್ಯಶಾಹಿ ಕಿರುಕುಳ ಇದ್ದಾಗ್ಯೂ ಕ್ಯೂಬಾದ ಜನತೆಯ ಸಾಧನೆ ಕಮ್ಮಿ ಏನಲ್ಲ. ಪ್ರಪಂಚದಲ್ಲೇ ಅತ್ಯಂತ ದಕ್ಷವಾದ, ಉತ್ತಮವಾದ ಸಾರ್ವತ್ರಿಕ ಉಚಿತ ವೈದ್ಯಕೀಯ ಸೇವಾಸೌಲಭ್ಯ ಹೊಂದಿರುವ ದೇಶವೆಂಬ ಖ್ಯಾತಿ ಪಡೆದಿದೆ. ಪೂರ್ಣ ಸಾಕ್ಷರತೆ ಸಾಧಿಸಿರುವ ಕ್ಯೂಬಾ ವಾಷಿಂಗ್ಟನ್‌ನ ಎಲ್ಲ ಸವಾಲುಗಳನ್ನೂ ಎದುರಿಸಿ ಮುನ್ನಡೆಯುತ್ತಿದೆ. ಅಮೆರಿಕದಲ್ಲೇ ಕ್ಯೂಬಾದ ಆರ್ಥಿಕ ದಿಗ್ಬಂಧನ ತೆರವು ಮಾಡಬೇಕೆಂದು ಒತ್ತಾಯ ಬರುತ್ತಿದೆ. ಈಚಿನ ವರ್ಷಗಳಲ್ಲಿ ಈ ದಿಗ್ಬಂಧನ ತೀವ್ರತೆಯನ್ನು ಕಳೆದುಕೊಳ್ಳುತ್ತಿದೆ. ಅಮೆರಿಕದ ಕೆಲವು ಉದ್ಯಮಗಳು ಅನಧಿಕೃತವಾಗಿ ಕ್ಯೂಬಾದೊಂದಿಗೆ ವಾಣಿಜ್ಯ ವ್ಯವಹಾರ ನಡೆಸುತ್ತಿವೆ. ಮೊಂಡುತನ ಬಿಟ್ಟು, ಮೂರ್ಖತನ ಬದಿಗಿರಿಸಿ ಬುಷ್ ಸರಕಾರ ಭಯೋತ್ಪಾದನೆಯ ಸಾಹಸ ಮಾಡದೆ, ಕ್ಯೂಬಾವನ್ನು ಅದರ ಪಾಡಿಗೆ ಬಿಟ್ಟು ಆರ್ಥಿಕ ದಿಬ್ಬಂಧನ ತೆರವು ಮಾಡಿದರೆ ಕ್ಯೂಬಾದ ಜನತೆ ಶಾಂತಿಯಿಂದ ಮುಂದುವರಿಯಲು ಅವಕಾಶವಾಗುತ್ತದೆ. ಅಮೆರಿಕದ ಭದ್ರತೆಗಾಗಲಿ, ಸುರಕ್ಷತೆಗಾಗಲಿ ಯಾವ ರೀತಿಯಲ್ಲಿಯೂ ಭೀತಿಯೊಡ್ಡದಿರುವ ಪುಟ್ಟ ಕ್ಯೂಬಾದ ಮೇಲೇನಾದರೂ ಆಕ್ರಮಣ ಎಸಗಿದಲ್ಲಿ ಇಡೀ ಜಗತ್ತಿನ ಜನತೆ ಹಾಗೂ ಅಮೆರಿಕದ ಜನರೇ ತಿರುಗಿಬೀಳುತ್ತಾರೆ ಎಂಬುದನ್ನು ದುಸ್ಸಾಹಸಿ ಬುಷ್ ಮತ್ತು ಅವನ ಪರಿವಾರದವರು ಅರಿಯಬೇಕು. ನಾಲ್ಕು ದಶಕಗಳಿಂದ ಕ್ಯೂಬಾವನ್ನು ಅತ್ಯಂತ ಕ್ಲಿಷ್ಟ ಕಾಲದಲ್ಲಿಯೂ ಮುನ್ನಡೆಸಿಕೊಂಡು ಬಂದಿರುವ ಫಿಡೆಲ್ ಕ್ಯಾಸ್ಟ್ರೋ ಅಭಿವೃದ್ಧಿಶೀಲ ದೇಶಗಳ ಅಪ್ರತಿಮ ನಾಯಕರಲ್ಲಿ ಒಬ್ಬರು. ಅಲಿಪ್ತ ಚಳವಳಿಯಲ್ಲಿ ಪ್ರಮುಖ ಪಾತ್ರ ವಹಿಸಿರುವ ಕ್ಯಾಸ್ಟ್ರೋ ಈಗಲೂ ಆ ಚಳವಳಿಯನ್ನು ಪುನರುಜ್ಜೀವನಗೊಳಿಸಲು ಶ್ರಮಿಸುತ್ತಿದ್ದಾರೆ. ಕ್ಯೂಬಾದ ಜನತೆಯ ಅಚ್ಚುಮೆಚ್ಚಿನ ನಾಯಕರಾಗಿರುವ ಅವರ ನೇತೃತ್ವದಲ್ಲಿ ಕ್ಯೂಬಾ ಅದ್ಭುತ ಪ್ರಗತಿ ಸಾಧಿಸುವುದರಲ್ಲಿ ಸಂದೇಹವಿಲ್ಲ. ಕ್ಯೂಬಾದಿಂದ ದೂರವಿರಿ ಎಂದು ಅಮೆರಿಕನ್ ಸಾಮ್ರಾಜ್ಯಶಾಹಿಗಳನ್ನು ಎಚ್ಚರಿಸಿ ತಡೆಯುವುದು ಪ್ರಪಂಚದ ಎಲ್ಲ ಸಹೃದಯರ, ಪ್ರಗತಿಪರರ ಜರೂರು ಕರ್ತವ್ಯವಾಗಿದೆ.

**ಸೀಯಾರ್ಕೆ**
೮೪೯, ೬ನೇ ಕ್ರಾಸ್, ೧ನೇ ಮೇನ್, ಬನಶಂಕರಿ ೩ನೇ ಹಂತ, ೩ನೇ ಫೇಜ್, ೩ನೇ ಬ್ಲಾಕ್, ಕತ್ರಿಗುಪ್ಪೆ ಬೆಂಗಳೂರು- ೮೫

**ಇಂದೇ ದೆಹಲಿಯಲ್ಲಿರುವ ಅಮೆರಿಕಾ ರಾಯಭಾರಿಗೊಂದು ಪತ್ರ ಬರೆಯಿರಿ.**




# ಜಾತಿಯ ಭೂತ

ಕೆಲವು ವರ್ಷಗಳ ಹಿಂದೆ ಚಿನ್ನಪ್ಪ ರೆಡ್ಡಿ ಆಯೋಗದ ವರದಿಯ ಜಾರಿಗೆ ಸಂಬಂಧಿಸಿದಂತೆ, ಪತ್ರಿಕೆಗಳ ಮುಖಪುಟಗಳಲ್ಲಿ ಜಾತಿಗಳ ಪಟ್ಟಿಯೊಂದು ಪ್ರಕಟವಾಗಿತ್ತು. ಅದು ದಿಟವಾಗಿ ನಮ್ಮ ಜಾತಿ ವ್ಯವಸ್ಥೆಯ ವಿಶ್ವರೂಪ : ಎಷ್ಟೊಂದು ಜಾತಿ, ಉಪಜಾತಿಗಳು! ಅವುಗಳಿಗೆ ಎಂತೆಂತಹ ಚಿತ್ರ ವಿಚಿತ್ರವಾದ ಹೆಸರುಗಳು! ಪ್ರಜ್ಞಾವಂತರನ್ನು ಆ ಪಟ್ಟಿ ತಲ್ಲಣಗೊಳಿಸಿರಬೇಕು; ಕೆಲವರಿಗೆ ಅದೊಂದು ತಮಾಷೆಯಾಗಿಯೂ ತೋರಿರಬಹುದು.

ಜಾತಿಪದ್ಧತಿ ನಮ್ಮ ದೇಶಕ್ಕಂಟಿದ ಘೋರಶಾಪ; ನಮ್ಮ ಪರಂಪರೆಗೆ ಹತ್ತಿದ ಕಪ್ಪು ಕಲೆ; ಅತ್ಯಂತ ಅವೈಚಾರಿಕ ಮತ್ತು ಅವೈಜ್ಞಾನಿಕವಾದದ್ದು. ಪ್ರಪ್ರಾಚೀನ ಕಾಲದಲ್ಲಿ ಇಲ್ಲದಿದ್ದ, ಅನಂತರ ಯಾವಾಗಲೋ ಭಾರತೀಯ ಸಮಾಜದ ಬೆನ್ನಿಗೆ ಅಮರಿಕೊಂಡ ಬೇತಾಳ, ಜಾತಿ ವ್ಯವಸ್ಥೆ. ಅದು ಭೂತವಷ್ಟೆ ಅಲ್ಲ, ಪೆಡಂಭೂತ! (ಒಂದು ಕಾಲದಲ್ಲಿ ಜಗತ್ತನ್ನಾಳಿದ ಡೈನೊಸಾರ್ ಪೆಡಂಭೂತಗಳು ಹಿಂದೆಯೆ ಅಳಿದುಹೋದುವು; ಆದರೆ ಈ ಪೆಡಂಭೂತಕ್ಕೆ ಅಳಿವಿಲ್ಲ!)

ಧರ್ಮ ವ್ಯಾಪಕಾರ್ಥವುಳ್ಳದ್ದು: ''ಧರ್ಮೋ ವಿಶ್ವಸ್ಯ ಪ್ರತಿಷ್ಠಾ'' (ಧರ್ಮ ಲೋಕದ ಆಧಾರ) ಎನ್ನುತ್ತದೆ ಉಪನಿಷತ್ತು. ದುರ್ದೈವವೆಂದರೆ, ಭಾರತದಲ್ಲಿ ಧರ್ಮ 'ವರ್ಣಾಶ್ರಮ ಧರ್ಮ'ದ ಮಟ್ಟಕ್ಕಿಳಿದದ್ದು; ಜಾತಿ, ಮತಗಳಿಗೆ ಪರ್ಯಾಯ ಶಬ್ದವಾಗಿ ಪರಿಣಮಿಸಿದ್ದು! ಇಂದು ನಾವು ಧರ್ಮ ನಿರಪೇಕ್ಷತೆಯ ಮಾತನ್ನಾಡುತ್ತಿದ್ದೇವೆ. ವಸ್ತುತಃ ನಾವು ಸಾಧಿಸಬೇಕಾದುದು ಜಾತಿ, ಮತ ನಿರಪೇಕ್ಷತೆಯನ್ನು. ಧರ್ಮವನ್ನು – ಅದರ ಶುದ್ಧ ರೂಪದಲ್ಲಿ – ಬಿಟ್ಟು ಬದುಕುಂಟೆ?

ನಮ್ಮದು ಜಾತ್ಯತೀತ ರಾಷ್ಟ್ರ ಎಂದು ಸಾರದವರೇ ಇಲ್ಲ. ಆದರೆ ಆ ಕೂಗು ಎಷ್ಟರಮಟ್ಟಿಗೆ ನಿಜ? ಸತ್ಯಸಂಗತಿಯೆಂದರೆ, ನಮ್ಮ ಸಮಾಜ ಜಾತ್ಯಾಧಾರಿತವಾಗಿದೆ, ಮೌಲ್ಯಾಧಾರಿತವಾಗಿಲ್ಲ! ವೇದಿಕೆಯ ಮೇಲೆ ಜಾತ್ಯತೀತತೆಯನ್ನು, ಜಾತಿವಿನಾಶವನ್ನು ಪ್ರತಿಪಾದಿಸುವವರೆ ಬಹಳ ಮಂದಿ ತಮ್ಮ ಬದುಕಿನಲ್ಲಿ ಜಾತಿ ಭಾವನೆಯನ್ನು ಬಿಟ್ಟಿಲ್ಲ. ಇದೊಂದು ದೊಡ್ಡ ದ್ವಂದ್ವ. ನಾಡಿನ ರಾಜಕಾರಣವನ್ನಂತೂ ಕೇಳುವುದೇ ಬೇಡ. ಅದು ತನ್ನ ಸ್ವಾರ್ಥಕ್ಕಾಗಿ ಜಾತಿ ವ್ಯವಸ್ಥೆಯನ್ನು ಒಳಗೊಳಗೇ ಪೋಷಿಸುತ್ತದೆ; ಮಾತ್ರವಲ್ಲ, ಹೊಸ ಹೊಸ ಜಾತಿಗಳನ್ನು ಹುಟ್ಟುಹಾಕುತ್ತಿದೆ. ಈ ಹೊತ್ತು ಎಲ್ಲೆಲ್ಲೂ ಕೆಳಜಾತಿಗಳಿಗೆ ಸೇರುವುದಕ್ಕಾಗಿ ಪೈಪೋಟಿ! ನಾವು ಎತ್ತ ಸಾಗುತ್ತಿದ್ದೇವೆ!

ಪಂಪ ಕವಿ ಸಾವಿರ ವರ್ಷಗಳ ಹಿಂದೆಯೆ ಘೋಷಿಸಿದ, ''ಮನುಷ್ಯ ಜಾತಿ ತಾನೊಂದೆ ವಲಂ!'' ಎಂದು. ಅವನಿಗೆ ಮೂಲ ಜಿನಸೇನಾಚಾರ್ಯರ ''ಮನುಷ್ಯ ಜಾತಿರೇಕೈವ'' ಎಂಬ ಸೂಕ್ತಿ. ಹೌದು, ಮಾನವರೆಲ್ಲ ಒಂದು ಜಾತಿ; ಹೆಚ್ಚೆಂದರೆ ಎರಡು ಜಾತಿ : ಗಂಡು ಮತ್ತು ಹೆಣ್ಣು!

''ಜಗತ್ತಿನ ಜ್ಞಾನ, ಸ್ಫೂರ್ತಿಗಳ ಭಂಡಾರಕ್ಕೆ ಕನ್ನಡ ಲೇಖಕರ ಕೊಡುಗೆ ಅತ್ಯಲ್ಪ'' ಎನ್ನುತ್ತಾನೆ ಇ. ಪಿ. ರೈಸ್ ಎಂಬಾತ – ತನ್ನ 'ಕನ್ನಡ ಸಾಹಿತ್ಯ' ಎಂಬ ಪುಸ್ತಕದಲ್ಲಿ. ಆ ಹೇಳಿಕೆ ಸರಿಯಲ್ಲ. ಪಂಪನ ''ಮನುಷ್ಯ ಜಾತಿ ತಾನೊಂದೆ ವಲಂ'' ಎಂಬ ಮಾತು, ಅನುವಾದವಾಗಿಯೂ, ಲೋಕಕ್ಕೊಂದು ಅಮೋಘ ಸಂದೇಶವಲ್ಲವೆ? ಅಂಥದೇ ಮತ್ತೊಂದು ಮುತ್ತಿನಂಥ ಮಾತು ೯ನೆಯ ಶತಮಾನದ 'ಕವಿರಾಜಮಾರ್ಗ'ದ್ದು: ''ಕಸವರಂ ಎಂಬುದು ನೆರೆ ಸೈರಿಸಲಾರ್ಪೊಡೆ ಪರವಿಚಾರಮಂ ಧರ್ಮಮುಮಂ!'' (ಸಂಪತ್ತು ಎಂದರೆ, ಇನ್ನೊಬ್ಬರ ವಿಚಾರವನ್ನೂ ಧರ್ಮವನ್ನೂ ಸಹಿಸಿಕೊಳ್ಳುವುದು.) ಆದರೆ ಜಾತಿಮತ ಭ್ರಾಂತಿಯಿದ್ದಲ್ಲಿ ಸಹಿಷ್ಣುತೆ ಇರಲಾರದು.

ಜಿನಸೇನಾಚಾರ್ಯರು ಜೈನಧರ್ಮದ ಹಿನ್ನೆಲೆಯಲ್ಲಿ ಜಾತಿಯೊಂದೇ ಎಂದರು. ಆಮೇಲೆ ೧೨ನೆಯ ಶತಮಾನದ ವೀರಶೈವ ಚಳವಳಿ ಜಾತಿ ನಾಶಕ್ಕಾಗಿ ಹೋರಾಡಿತು. ಆದರೂ ಜಾತಿಜಾಡ್ಯ ಜಗ್ಗದೆ ಇಂದಿನವರೆಗೂ ಉಳಿದುಕೊಂಡು ಬಂದಿದೆ; ಈ ವಿಜ್ಞಾನ ಯುಗದಲ್ಲೂ ಬೆಳೆಯುತ್ತಿದೆ : ಶೋಚನೀಯ, ಲಜ್ಜಾಸ್ಪದ!

ನಮಗೆ ಮುಖ್ಯವಾದದ್ದು, ಬೇಕಾದದ್ದು ಜಾತಿಯಲ್ಲ; ಮತಿ, ನೀತಿ, ಪ್ರೀತಿ ಮತ್ತು ಜ್ಯೋತಿ! ನಿಶ್ಚಿತವಾಗಿ ಜಾತೀಯತೆಯೊಂದು ಅನಿಷ್ಟ. ಅದು ಹೋಗಬೇಕು; ಹೋಗುವುದಾದರೆ, ಅದಕ್ಕಿಂತ ಹರ್ಷದ ಸಂಗತಿ ಇನ್ನೊಂದಿಲ್ಲ. ಆದರೆ ಹೋಗುತ್ತದೆಯೆ? ಛಿದ್ರಛಿದ್ರವಾಗಿರುವ ಭಾರತೀಯ ಸಮಾಜ ಒಗ್ಗೂಡಬಲ್ಲುದೆ? ಇದೀಗ ಕಾಲಪುರುಷ ಉತ್ತರಿಸಬೇಕಾದ ಪ್ರಕಾಂಡ ಪ್ರಶ್ನೆ.

---

# ಆದರ್ಶಗಳ ಸ್ವರ್ಗ

ಸಾಮಾನ್ಯವಾಗಿ ಯೌವನಾವಸ್ಥೆ – ಅದರಲ್ಲೂ ವಿದ್ಯಾರ್ಥಿದಶೆ – ಕನಸುಗಳ ಕಾಲ; ಆದರ್ಶಗಳ ಅವಧಿ. ಆದರೆ ತಾರುಣ್ಯ ಜಾರಿದಂತೆ ಕನಸುಗಳು ವಾಸ್ತವಕ್ಕೆ ಬಲಿಯಾಗುತ್ತವೆ; ಆದರ್ಶಗಳನ್ನು 'ವ್ಯವಸ್ಥೆ' ನುಂಗಿಹಾಕುತ್ತದೆ! ಹೀಗಾಗಿ, ಊರ್ಧ್ವಮುಖವಾದ ಅಭೀಪ್ಸೆಗಳಿಂದ ಹದಿಹರೆಯದಲ್ಲಿ ಕುದಿಕುದಿಯುವ ಎಷ್ಟೋ ಚೇತನಗಳು ಕಾಲಕ್ರಮೇಣ ಆರಿ ತಣ್ಣಗಾಗಿಬಿಡುತ್ತವೆ; ಲೋಕವನ್ನೆಲ್ಲ ಉದ್ಧರಿಸುತ್ತೇನೆಂಬ ಉತ್ಸಾಹ ಉಡುಗಿ, ಕಡೆಗೆ ಸ್ವಾರ್ಥವಷ್ಟೆ ಉಳಿಯುತ್ತದೆ.

ಈ ದುರಂತವನ್ನು ಡಿ. ವಿ. ಜಿ. ಅವರು ಒಂದೆಡೆ ಹೀಗೆ ಅರ್ಥವತ್ತಾಗಿ, ಸ್ವಾರಸ್ಯಪೂರ್ಣವಾಗಿ ವಿವರಿಸುತ್ತಾರೆ :

''ಒಂದು ಉದಾತ್ತವಾದ ಆದರ್ಶವು ಸರ್ವದಾ ನಿಮ್ಮ ಹೃದಯಾಂಗಣದಲ್ಲಿ ನಿಂತು, ನಿಮ್ಮ ನಡವಳಿಕೆಯನ್ನು ಅಹಶ್ಚ-ರಾತ್ರಿಶ್ಚ ತಿದ್ದುತ್ತಿರಬೇಕು.... ವಿದ್ಯಾರ್ಥಿಗಳಾಗಿರುವಾಗ, ದೊಡ್ಡ ದೊಡ್ಡ ಧ್ಯೇಯಗಳನ್ನು ಕುರಿತು ಮಾತನಾಡುವುದೂ ವೀರವ್ರತಗಳನ್ನು ಕೊಚ್ಚುವುದೂ ಅಪರೂಪವಲ್ಲ. ಮುಂದೆ ಬರುತ್ತದೆ ಪರೀಕ್ಷಾ ಸಮಯ· – ಉದ್ಯೋಗಕ್ಕಾಗಿ ಹೆರರ ಮನೆಬಾಗಿಲು ಕಾಯಬೇಕಾದ ಕಾಲ, ಸಣ್ಣ ಸಣ್ಣ ಕಾರಣಗಳ ಮೇಲೆ ದೊಡ್ಡ ದೊಡ್ಡ ಹಕ್ಕುಗಳನ್ನು ಕಟ್ಟಿ ನಿಲ್ಲಿಸಬೇಕೆನಿಸುವ ಕಾಲ, ನಿಮಗೆ ದೊರೆಯಬೇಕೆಂದಿರುವ ಸನ್ಮಾನ ಸಂಭಾವನೆಗಳು ಇನ್ನೊಬ್ಬರ ಕೈಗೆ ಹೋಗುತ್ತಿರುವ ಕಾಲ...''

ಆದರ್ಶಗಳ ನಿರಸನದ ಜೊತೆಜೊತೆಯಲ್ಲೆ ವ್ಯಕ್ತಿ ಒಳ್ಳೆಯದಕ್ಕೆಲ್ಲ ಎಳ್ಳು ನೀರು ಬಿಟ್ಟು, ಭ್ರಷ್ಟಾಚಾರದ ಒಂದು ಭಾಗವಾಗಿ ಪರಿಣಮಿಸಲೂಬಹುದು. ಇದು ಬಹಳ ಅಪಾಯಕಾರಿಯಾದ ಬೆಳವಣಿಗೆ. ಎಂತಹ ಪ್ರಲೋಭನೆ ಎದುರಾದರೂ ಮಣಿಯದೆ, ಛಲ ಬಲ ಸಂಕಲ್ಪಗಳನ್ನು ತೊರೆಯದೆ, ಮೌಲ್ಯಗಳನ್ನು ಎತ್ತಿ ಹಿಡಿಯುವ ವ್ಯಕ್ತಿಗಳು ವಿರಳ; ವ್ಯವಸ್ಥೆಯ ವಿಷವೃತ್ತದಲ್ಲಿ ಸಿಕ್ಕಿಹಾಕಿಕೊಂಡು, ಹೊರಬರಲಾರದೆ, ತೊಳಲುವವರೆ ಬಹಳ ಮಂದಿ. ಇದು ಕೆಲವೊಮ್ಮೆ ಅಸಹಾಯಕತೆಯ ಫಲವಾದರೆ, ಬಹಳಷ್ಟು ಸಂದರ್ಭಗಳಲ್ಲಿ ಉದ್ದೇಶಸಹಿತವೂ ಪ್ರಜ್ಞಾಪೂರ್ವಕವೂ ಆದ ತರ್ಕವಾಗಿರುತ್ತದೆ. ವಾಸ್ತವಿಕ ವ್ಯಾವಹಾರಿಕ ಜಗತ್ತಿನೊಡನೆ ರಾಜಿ ಮಾಡಿಕೊಳ್ಳದೆ, ನ್ಯಾಯ ನಿಯಮಗಳ ಪಥದಲ್ಲಿ ನಿಷ್ಠೆಯಿಂದ ನಡೆಯುವುದು ಸುಲಭವಲ್ಲ. ಅದೊಂದು ಅಗ್ನಿದಿವ್ಯ. ಅದನ್ನು ಉತ್ತರಿಸಲು ಕೆಲವರಾದರೂ ಸಿದ್ಧರಾಗದಿದ್ದರೆ, ಸಮಾಜಕ್ಕೆ ಕೇಡು ಕಟ್ಟಿಟ್ಟದ್ದು. ನಮ್ಮ ಸಮಾಜ ಈಗ ಇಂಥ ಬಿಕ್ಕಟ್ಟಿನಲ್ಲಿ, ದುರವಸ್ಥೆಯಲ್ಲಿ ಇದೆಯೇನೊ ಎಂಬ ಸಂದೇಹಕ್ಕೆ ಎಲ್ಲ ಪ್ರಚಲಿತ ವಿದ್ಯಮಾನಗಳೂ ಪುಷ್ಟಿ ಕೊಡುತ್ತಿವೆ!

''ಯೌವನವೊಂದು ಸ್ವರ್ಗವೇ ಆಗಿತ್ತು!'' ಎಂಬುದು ವರ್ಡ್ಸ್‌ವರ್ತ್ ಕವಿಯ ಒಂದು ಉದ್ಗಾರ. (ಅವನು ನಿರ್ದಿಷ್ಟ ಸಂದರ್ಭವೊಂದನ್ನು ಕುರಿತು ಹಾಗೆಂದನಾದರೂ, ಆ ಹೇಳಿಕೆಯನ್ನು ಸಾಧಾರಣೀಕರಿಸುವುದು ಸಾಧ್ಯ.) ಉನ್ನತ ಧ್ಯೇಯಾದರ್ಶಗಳ ಸ್ವರ್ಗವನ್ನು ಕಳೆದುಕೊಳ್ಳದೆ, ಸದಾಕಾಲ ಉಳಿಸಿಕೊಳ್ಳುವುದು ಅಶಕ್ಯವೆ? ಸ್ವರ್ಗವಿರದಿದ್ದರೆ ಹೋಗಲಿ, ನರಕವನ್ನಾದರೂ ನಿವಾರಿಸಲಾಗದೆ?

ಡಾ॥ ಸಿ. ಪಿ. ಕೃಷ್ಣಕುಮಾರ್
೨ನೇ ಮುಖ್ಯ ರಸ್ತೆ, ವಿನಾಯಕನಗರ, ಮೈಸೂರು - ೫೭೦ ೦೧೨

# ನಿಮ್ಮ ತಾರುಣ್ಯದ ರಹಸ್ಯ!




ಎಲ್ಲಾ ಹೊಸ ಸಂತೂರಿನಲ್ಲಿ ಶ್ರೀಗಂಧ ಮತ್ತು ಹರಿಶಿನದ ಸಾರ ಅಡಗಿದೆ. ಈಗ ಸಮೃದ್ಧ ನೊರೆ ಮತ್ತು ಸದಾ ಸುಳಿದಾಡುವ ಸುಗಂಧದೊಡನೆ ದೊಡ್ಡದಾದ, ಉತ್ತಮ ಆಕಾರದೊಡನೆ, ಬಹುಕಾಲ ಬಾಳಿಕೆ ಬರುವ,

# ಸಂತೂರ್

FCB◆ULKA-42723

**HOSATHU** Kannada Monthly / November 2003 Rs. 10

RNI Regn. No. KARKAN/1999/614 REGD. CPMG / KA / BGE – 7 / 2003-05 Licenced to post without prepayment. Licence No. WPP-14

# ಹೊಸತು

ಸಾಮಾಜಿಕ, ಸೈದ್ಧಾಂತಿಕ, ಸಾಂಸ್ಕೃತಿಕ ಕ್ಷೇತ್ರಕ್ಕೆ




ನವಕರ್ನಾಟಕ ಪ್ರಕಾಶನದ ಹೆಮ್ಮೆಯ ಕೊಡುಗೆ

# ಹೊಸತು

ಸಂ : 1001

ನೆಮ್ಮದಿಯ ನಾಳೆ ನಿಮ್ಮದಾಗಲೆಂದು ಹಾರೈಸಿ
ಹೊಸತು ಪತ್ರಿಕೆ ಚಂದಾ ಉಡುಗೊರೆ

ಹೊಸತು
ನವಕರ್ನಾಟಕ ಪ್ರಕಾಶನ

ಒಂದು ವರ್ಷದ
ಚಂದಾ ಮೊಬಲಗನ್ನು
ಸ್ವೀಕರಿಸಲಾಗಿದೆ

ಇವರಿಂದ ........................
ಪ್ರೀತಿಯ ಅಣ್ಣ ಪ್ರಕಾಶನ
ನೆನಪಿನ ಕಾಣಿಕೆ

ಇವರಿಗೆ ........................
ಒಲವಿನ ತಂಗಿ ಭೂಮಿಕಾಳ
ಹುಟ್ಟುಹಬ್ಬದ ಸಂದರ್ಭ

(ಹೊಸತು ಪರವಾಗಿ)

ದಿನಾಂಕ 12-12-2002

ಪ್ರಕಾಶ
(ಉಡುಗೊರೆ ನೀಡುವವರ ಸಹಿ)

**ಜೀವನದ ಎಲ್ಲ ಕ್ಷೇತ್ರಗಳ ಆಗು-ಹೋಗುಗಳನ್ನು ಗಂಭೀರ ವಿಶ್ಲೇಷಣೆಗೆ ಒಳಪಡಿಸುವ ತಿಂಗಳ ಪತ್ರಿಕೆ**

## ಉಡುಗೊರೆಯಾಗಿ 'ಹೊಸತು ಚಂದಾ'

## ಹಬ್ಬ - ಹರಿದಿನ, ಮದುವೆ, ಸಮಾರಂಭಗಳಲ್ಲಿ ಚಂದಾ ಕೂಪನ್ ಉಡುಗೊರೆ ನೀಡಿ

ವಾರ್ಷಿಕ ಚಂದಾ ರೂ. 100 3 ವರ್ಷದ ಚಂದಾ ರೂ. 250

ಸಂ : 3001

ನೆಮ್ಮದಿಯ ನಾಳೆ ನಿಮ್ಮದಾಗಲೆಂದು ಹಾರೈಸಿ
ಹೊಸತು ಪತ್ರಿಕೆ ಚಂದಾ ಉಡುಗೊರೆ



ಇವರಿಂದ ........................

ಇವರಿಗೆ ........................

ಹೊಸತು
ನವಕರ್ನಾಟಕ ಪ್ರಕಾಶನ

ಮೂರು ವರ್ಷದ
ಚಂದಾ ಮೊಬಲಗನ್ನು
ಸ್ವೀಕರಿಸಲಾಗಿದೆ

(ಹೊ

ಪುಟಗಳು : 64 ಡೆಮಿ ಚೌಕಾಕಾರ ಬಿಡಿ ಪ್ರತಿ : ರೂ. 10

ಮೂರು ವರ್ಷದ ಚಂದಾದೊಂದಿಗೆ ಮೂರು ಪುಸ್ತಕಗಳು ಉಚಿತ ಹಾಗೂ ನವಕರ್ನಾಟಕ ಪ್ರಕಟಣೆಗಳ ಮೇಲೆ ಶೇ. 20ರ ರಿಯಾಯಿತಿ. ನಿಮ್ಮ ಚಂದಾ ನವೀಕರಿಸಿ. ಉಡುಗೊರೆ ನೀಡುವ ಮೂಲಕ ಹೊಸ ಗೆಳೆಯರನ್ನು ಪರಿಚಯಿಸಿ

'ಹೊಸತು ಚಂದಾ' ಉಡುಗೊರೆ ಕೂಪನ್‌ಗಳು ಬೆಂಗಳೂರು, ಮಂಗಳೂರು, ಮೈಸೂರು ಹಾಗೂ ಗುಲ್ಬರ್ಗಾ ನಗರಗಳಲ್ಲಿರುವ ನವಕರ್ನಾಟಕ ಪುಸ್ತಕ ಮಳಿಗೆಗಳಲ್ಲೂ ಲಭ್ಯ

ವಿವರಗಳಿಗೆ : **ಹೊಸತು**
15, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಅಂಚೆ ಪೆಟ್ಟಿಗೆ ಸಂಖ್ಯೆ 5159
ಬೆಂಗಳೂರು-560 001 ಫೋನ್ : 2203580/81/82 e-mail : nkp@bgl.vsnl.net.in.

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna